# ಕನ್ನಡ ಹಾಗೂ ತೆಲುಗು 'ಬಸವಪುರಾಣಗಳ' ತೌಲನಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)


ಸಂಶೋಧಕರು

ಮಂಜಣ್ಣ ಪಿ

ಮಾರ್ಗದರ್ಶಕರು

ಡಾ. ವಿಠಲರಾವ್ ಟಿ. ಗಾಯಕ್ವಾಡ್

ಪ್ರಾಧ್ಯಾಪಕರು

ಭಾಷಾಂತರ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ






ಭಾಷಾನಿಕಾಯ

ಭಾಷಾಂತರ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೮

# ಕನ್ನಡ ಹಾಗೂ ತೆಲುಗು 'ಬಸವಪುರಾಣಗಳ' ತೌಲನಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು
ಮಂಜಣ್ಣ ಪಿ

ಮಾರ್ಗದರ್ಶಕರು
**ಡಾ. ವಿಠಲರಾವ್ ಟಿ. ಗಾಯಕ್ವಾಡ್**
ಪ್ರಾಧ್ಯಾಪಕರು
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ



ಭಾಷಾನಿಕಾಯ
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೧೮

## ಸಂಶೋಧಕರ ಘೋಷಣಾ ಪತ್ರ

**"ಕನ್ನಡ ಹಾಗೂ ತೆಲುಗು 'ಬಸವಪುರಾಣ'ಗಳ ತೌಲನಿಕ ಅಧ್ಯಯನ"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಡಾ. ವಿಠಲರಾವ್ ಟಿ. ಗಾಯಕ್ವಾಡ್** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಭಾಷಾ ನಿಕಾಯದ ಭಾಷಾಂತರ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣಿಕರಿಸುತ್ತೇನೆ.

**ಮಂಜಣ್ಣ ಪಿ.**
**ಸಂಶೋಧನಾ ವಿದ್ಯಾರ್ಥಿ**
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 12.03.2018
ಸ್ಥಳ : ವಿದ್ಯಾರಣ್ಯ

# ಮಾರ್ಗದರ್ಶಕರ ದೃಢೀಕರಣ ಪತ್ರ

**"ಕನ್ನಡ ಹಾಗೂ ತೆಲುಗು 'ಬಸವಪುರಾಣ'ಗಳ ತೌಲನಿಕ ಅಧ್ಯಯನ"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಮಂಜಣ್ಣ ಪಿ. ಅವರು ನನ್ನ ಮಾರ್ಗದರ್ಶನದಲ್ಲಿ ಪಿಎಚ್.ಡಿ. ಪದವಿಗಾಗಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಡಾ. ವಿಠಲರಾವ್ ಟಿ. ಗಾಯಕ್ವಾಡ್**
ಪ್ರಾಧ್ಯಾಪಕರು/ಮಾರ್ಗದರ್ಶಕರು
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 12.03.2018

ಸ್ಥಳ : ವಿದ್ಯಾರಣ್ಯ

## ಪರಿವಿಡಿ

# ಅಧ್ಯಾಯ – ೧

# ಅಧ್ಯಯನದ ಪೂರ್ವಪೀಠಿಕೆ

---

೧.೧. ಪ್ರಸ್ತಾವನೆ

೧.೨. ಅಧ್ಯಯನದ ಉದ್ದೇಶ

೧.೩. ವ್ಯಾಪ್ತಿ ಮತ್ತು ವಿಧಾನ

೧.೪. ಅಧ್ಯಯನದ ಸ್ವರೂಪ

೧.೫. ಈವರೆಗಿನ ಅಧ್ಯಯನಗಳ ಸಮೀಕ್ಷೆ

# ಅಧ್ಯಾಯ – ಒಂದು

# ಅಧ್ಯಯನದ ಪೂರ್ವಪೀಠಿಕೆ

## ೧.೧. ಪ್ರಸ್ತಾವನೆ :

ಸಾಹಿತ್ಯ ಚರಿತ್ರಕಾರರು ಕನ್ನಡ ಸಾಹಿತ್ಯವನ್ನು ಕವಿಗಳ ಕಾಲಕ್ಕನುಗುಣವಾಗಿ ವಿವಿಧ ಕಾಲಘಟ್ಟಗಳಲ್ಲಿ ವಿಭಾಗ ಮಾಡಿದ್ದಾರೆ. ಪ್ರಾಚೀನ, ಮಧ್ಯಕಾಲೀನ, ಆಧುನಿಕ, ಆಧುನಿಕೋತ್ತರ ಎಂಬ ಈ ವಿಭಾಗ ಕ್ರಮದಿಂದ ಆಯಾ ಕಾಲಘಟ್ಟದ ಸಂಸ್ಕೃತಿ, ಭಾಷೆ, ಸಾಹಿತ್ಯ ಮುಂತಾದ ಅಂಶಗಳನ್ನು ಸ್ಪಷ್ಟವಾಗಿ ಗುರುತಿಸಲು ಸಾಧ್ಯವಾಗಿದೆ. ಮೇಲಿನ ಪ್ರತಿಯೊಂದು ಕಾಲಘಟ್ಟದಲ್ಲಿಯೂ ಕನ್ನಡ ಸಾಹಿತ್ಯ ಸಮೃದ್ಧವಾಗಿ ರಚನೆಗೊಂಡಿದೆ. ಕನ್ನಡ ಸಾಹಿತ್ಯದಲ್ಲಿ ಮಧ್ಯಕಾಲೀನ ಸಾಹಿತ್ಯವು ಅತ್ಯಂತ ಪ್ರಮುಖವಾದ ಕಾಲಘಟ್ಟವಾಗಿದೆ. ಬಸವಪೂರ್ವಯುಗ, ಬಸವಯುಗ, ಬಸವೋತ್ತರಯುಗವೆಂಬ ವಿಭಾಗಗಳಲ್ಲಿ ಈ ಕಾಲದ ಸಾಹಿತ್ಯವು ವಿಸ್ತಾರವಾಗಿ ಬೆಳೆದಿದೆ. ಈ ಕಾಲಘಟ್ಟವು ಹನ್ನೊಂದು, ಹನ್ನೆರಡನೆಯ ಶತಮಾನದ ಶಿವಶರಣರು ಬಾಳಿ ಬದುಕಿದ ಕಾಲ. ಈ ಸಂದರ್ಭದಲ್ಲಿ ವಚನ ಸಾಹಿತ್ಯವು ಹಿಂದಿನ ಮಾರ್ಗಶೈಲಿಯ ಸಂಪ್ರದಾಯದಿಂದ ಬಿಡಿಸಿಕೊಂಡು ಸಾಮಾನ್ಯ ಜನರ ಭಾಷೆಯಲ್ಲಿ ರಚನೆಗೊಂಡಿತು. ಈ ಜನ ಭಾಷೆಯ ಸಾಹಿತ್ಯದಿಂದ ಪ್ರೇರಣೆ ಪಡೆದ ಆ ಕಾಲದ ಪ್ರಮುಖ ವೀರಶೈವ ಕವಿಯಾದ ಹರಿಹರ ಮತ್ತು ಅವನ ನಂತರದ ಕವಿಗಳು ಸಾಮಾನ್ಯರಿಗೂ ಅರ್ಥವಾಗುವಂಥಹ ಸರಳವಾದ ರಗಳೆ, ಷಟ್ಪದಿ, ಶತಕ ಮುಂತಾದ ಪ್ರಕಾರಗಳಲ್ಲಿ ಕಾವ್ಯಗಳನ್ನು ರಚಿಸಿದರು. ಈ ಹಿನ್ನೆಲೆಯಲ್ಲಿ ವಚನಕಾರರ ಪ್ರಭಾವದಿಂದ ಪ್ರೇರಿತಗೊಂಡ ಅಂದಿನ ವೀರಶೈವ ಕವಿಗಳು ಹಲವು ಪುರಾಣ, ಕಾವ್ಯ, ಚರಿತ್ರೆಗಳನ್ನು ರಚನೆ ಮಾಡಿದರು. ಕನ್ನಡದ ಆರಂಭ ಕಾಲದ ಜೈನ ಸಾಹಿತ್ಯದಲ್ಲಿ ತೀರ್ಥಂಕರರ ಚಾರಿತ್ರಿಕ ಕಥನ ಚರಿತ್ರೆಗಳನ್ನು ಬರೆಯಲು ಪಂಪ, ಪೊನ್ನ, ರನ್ನರಂತಹ ಕವಿಗಳು ಪುರಾಣ ಪರಂಪರೆಯನ್ನು ಅನುಸರಿಸಿದ್ದರು. ಇದೇ ಮಾದರಿಯನ್ನು ವೀರಶೈವ ಕವಿಗಳು ಕೂಡ ತಮ್ಮ ಧರ್ಮದ ಪುರಾತನ ಮತ್ತು ನೂತನ ಶಿವಶರಣರ ಜೀವನ ಚರಿತ್ರೆಗಳ ಕಾವ್ಯಗಳನ್ನು ರಚಿಸಲು

ಪುರಾಣ ಮಾರ್ಗವನ್ನು ಅನುಸರಿಸಿದರು. ಈ ಪುರಾಣಗಳಲ್ಲಿ ಕವಿಗಳು ಶರಣರ ಜೀವನ ಚರಿತ್ರೆಯ ಜೊತೆಗೆ ಅನೇಕ ಕಾಲ್ಪನಿಕ ಚಿತ್ರಣಗಳನ್ನು ಕೂಡಿಸಿ ಕಲ್ಪಿತ ಚರಿತ್ರೆಯ ರೂಪದಲ್ಲಿ ಪುರಾಣ ಮಹಾಕಾವ್ಯಗಳನ್ನು ರಚಿಸಿದರು. "ಪುರಾಣ ಮತ್ತು ಮಹಾಕಾವ್ಯಗಳ ಒಳ ಆತ್ಮ ಸ್ಥೂಲವಾಗಿ ಒಂದೇ ಆಗಿ ಕಂಡುಬಂದರೂ ಪುರಾಣಗಳ ವಸ್ತು ಮತ್ತು ರೀತಿಯಲ್ಲಿ ಸೂಕ್ಷ್ಮ ವ್ಯತ್ಯಾಸ ಕಂಡುಬರುತ್ತದೆ. ಇತಿಹಾಸ ಮತ್ತು ಮಹಾಕಾವ್ಯಗಳಲ್ಲಿ ಕಥನ ವಸ್ತು ಪ್ರಮುಖವಾದರೆ, ಪುರಾಣಗಳಲ್ಲಿ ತಾತ್ವಿಕ ಮತ್ತು ಧಾರ್ಮಿಕ ಅಂಶಗಳು ಪ್ರಾಮುಖ್ಯತೆಯನ್ನು ಪಡೆದಿವೆ" (ಬ.ಪು., ಆರ್.ಸಿ. ಹಿರೇಮಠ, ಪು, ೫) ಈ ಧಾರ್ಮಿಕ ಅಂಶಗಳ ಪ್ರತಿಪಾದನೆಗಾಗಿ ಕವಿಗಳು ಧರ್ಮದ ಅನುಯಾಯಿಗಳ ಚರಿತ್ರೆಯನ್ನೇ ತಮ್ಮ ಕಾವ್ಯಗಳಿಗೆ ವಸ್ತುವಾಗಿಸಿಕೊಂಡು ಬರೆದರು. ವೀರಶೈವ ಅಥವಾ ಶಿವಧರ್ಮವನ್ನು ಅತ್ಯಂತ ನಿಷ್ಠೆಯಿಂದ ಆಚರಿಸಿದ ಮೊದಲಿಗರೆಂದರೆ ಚೋಳ, ಚೇರ, ಪಾಂಡ್ಯ ದೊರೆಗಳ ಕಾಲದಲ್ಲಿ ಜೀವಿಸಿದ್ದ ತಮಿಳುನಾಡಿನ ಅರವತ್ಮೂರು ಜನ ಪುರಾತನ ಶರಣರು. ಆನಂತರ ಕರ್ನಾಟಕ ಮತ್ತು ಸುತ್ತಲ ಪ್ರದೇಶಗಳಲ್ಲಿ ನೆಲೆಸಿದ್ದ ನೂತನರು. ಈ ನೂತನರಲ್ಲಿ ಬಸವಣ್ಣನಾದಿಯಾಗಿ ಅವನೊಂದಿಗೆ ಅವನ ಅನುಯಾಯಿಗಳಾಗಿ ಬಾಳಿದ ನೂರಾರು ಶರಣರಿದ್ದರು. ಇವರೆಲ್ಲರೂ ಶಿವನ ಆರಾಧಕರು; ಶಿವನನ್ನು ಅತ್ಯಂತ ಭಕ್ತಿಯಿಂದ ಪೂಜಿಸುತ್ತಿದ್ದರು. ಜೊತೆಗೆ ಶಿವಧರ್ಮವನ್ನು ಭೂಮಿಯಲ್ಲಿ ನಿರಂತರವಾಗಿರುವಂತೆ ಕಾಪಾಡಲು ಶ್ರಮಿಸಿದವರು. ಹಾಗಾಗಿ ಸಾಮಾನ್ಯವಾಗಿಯೇ ಇವರ ಚರಿತ್ರೆಗಳು ಕವಿಗಳ ಮನಸ್ಸಿಗೆ, ಕಾವ್ಯ ರಚನೆಗೆ ತೊಡಗಲು ಪ್ರೇರಣೆ ಒದಗಿಸಿದವು. ಈ ಹಿನ್ನೆಲೆಯಲ್ಲಿ ಸೃಷ್ಟಿಯಾದವುಗಳೇ ವ್ಯಕ್ತಿಕೇಂದ್ರಿತ ಕಾವ್ಯಗಳು ಮತ್ತು ಪುರಾಣಗಳು. ಈ ವ್ಯಕ್ತಿಕೇಂದ್ರಿತ ಶಿವಶರಣರ ಚರಿತ್ರೆಯ ಕಾವ್ಯಗಳು ಮೊದಲು ರಚನೆಗೊಂಡಿದ್ದು ತಮಿಳಿನಲ್ಲಿ. ಶೆಕ್ಕಿಳಾರ್ ಎಂಬ ಕವಿ ತಮಿಳುನಾಡಿನ ಪುರಾತನ ಶರಣರ ಜೀವನ ಕಥೆಗಳನ್ನು 'ಪೆರಿಯ ಪುರಾಣಂ' ಎಂಬ ಕಾವ್ಯದಲ್ಲಿ ಚಿತ್ರಿಸುತ್ತಾನೆ. ಇದರ ಮಾದರಿಯಲ್ಲಿಯೇ ಕನ್ನಡದಲ್ಲಿ ಹರಿಹರನು ಪುರಾತನ ಹಾಗೂ ನೂತನ ಶರಣರ ಕಥೆಗಳನ್ನು ಒಟ್ಟುಗೂಡಿಸಿ ರಗಳೆಗಳ ರೂಪದಲ್ಲಿ ರಚಿಸಿದ್ದಾನೆ. ಈ ರೀತಿಯಲ್ಲಿ ಮೊದಲ ಬಾರಿಗೆ ಶರಣರ ಜೀವನ ಕಥೆಗಳು ಕಾವ್ಯಗಳ ರೂಪದಲ್ಲಿ ಜನಸಾಮಾನ್ಯರಿಗೆ ತಲುಪಿದವು. ಇದರಿಂದ ಪ್ರೇರಿತಗೊಂಡ ಮಧ್ಯಕಾಲೀನ ವೀರಶೈವ ಕವಿಗಳನೇಕರು ತಮಗಿಷ್ಟವಾದ ಶರಣನ ಕಥೆಯನ್ನು ಕಾವ್ಯ ವಸ್ತುವಾಗಿ ತೆಗೆದುಕೊಂಡು ಪುರಾಣ, ಚರಿತ್ರೆ, ಕಾವ್ಯ ಮುಂತಾದ ಪ್ರಕಾರಗಳಲ್ಲಿ ಅವರ ಕಥೆಗಳನ್ನು ರಚಿಸುತ್ತಾರೆ. ಹೀಗೆ ರಚನೆಗೊಂಡ ವೀರಶೈವ ಸಾಹಿತ್ಯ ತುಂಬಾ ಹುಲುಸಾಗಿ ಬೆಳೆಯಿತು.

ಕನ್ನಡ ವೀರಶೈವ ಸಾಹಿತ್ಯದ ಕವಿಗಳೆಲ್ಲರಿಗೂ ಬಹಳ ಪ್ರಿಯವಾದ ವ್ಯಕ್ತಿ ಬಸವಣ್ಣ. ಸಾಮಾನ್ಯವಾಗಿ ಎಲ್ಲಾ ಕನ್ನಡ ವೀರಶೈವ ಕವಿಗಳು ಯಾವುದೇ ಶರಣನ ಕುರಿತು ಕಾವ್ಯ ರಚಿಸಿದ್ದರೂ ಅವರ ಕಾವ್ಯದ ಯಾವುದಾದರೂ ಒಂದು ಭಾಗದಲ್ಲಿ ಬಸವಣ್ಣನ ಪ್ರವೇಶ ಇದ್ದೇ ಇರುತ್ತಿತ್ತು. ಕಾರಣ ಬಹುತೇಕ ಶರಣರ ಬದುಕಿಗೂ ಬಸವಣ್ಣ ಮಾರ್ಗದರ್ಶಿಯಾಗಿದ್ದ. ಬಸವಣ್ಣನ ಭಕ್ತಿಯ ಪ್ರಭಾವಲಯದಲ್ಲಿಯೇ ಅಂದಿನ ಶರಣ ಸಮೂಹ ಬದುಕುತ್ತಿತ್ತು. ಈ ಹಿನ್ನೆಲೆಯಲ್ಲಿ ಎಲ್ಲರೂ ಬಸವಣ್ಣನ ತತ್ವಾದರ್ಶಗಳನ್ನು

ನಂಬಿದವರು ಮತ್ತು ಅವರಂತೆಯೇ ಬದುಕಿದ್ದರೂ ಕೂಡ. ಹಾಗಾಗಿ ಬಸವಣ್ಣ ವೀರಶೈವ ಸಾಹಿತ್ಯದ ಮುಖ್ಯ ವಸ್ತುವಾಗಿ ಪರಿಣಾಮ ಬೀರಿದ್ದನು. ಬಹುಶಃ ವಿದ್ವಾಂಸರು ಹೇಳುವಂತೆ ಕನ್ನಡದಲ್ಲಿ ಬಸವಣ್ಣನ ಕುರಿತು ರಚನೆಗೊಂಡಷ್ಟು ಕೃತಿಗಳು ಬೇರಾವ ವ್ಯಕ್ತಿಯ ಬಗ್ಗೆಯೂ ವಸ್ತುವಿನ ಬಗ್ಗೆ ರಚನೆಗೊಂಡಿಲ್ಲವೆಂಬುದು ಸತ್ಯವಾದ ಮಾತು. ಕಾವ್ಯ, ಪುರಾಣ, ಕಾದಂಬರಿ, ಕಥೆ, ಕವನ, ವಿಮರ್ಶೆ ಮುಂತಾದ ಎಲ್ಲಾ ಪ್ರಕಾರಗಳಲ್ಲಿಯೂ ಒಂದಿಲ್ಲೊಂದು ರೀತಿಯಲ್ಲಿ ಬಸವಣ್ಣ ಕಾಣಿಸಿಕೊಂಡಿದ್ದಾನೆ. ಬಸವಣ್ಣ ವಿಶ್ವಪ್ರಸಿದ್ಧ ವ್ಯಕ್ತಿ. ಹಾಗಾಗಿ ಬಸವಣ್ಣನ ಚರಿತ್ರೆ ಕೇವಲ ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೆ ಮಾತ್ರ ಸೀಮಿತವಾಗಿಲ್ಲ. ಭಾರತದ ಬಹುತೇಕ ಭಾಷೆಗಳಲ್ಲಿ ಬಸವಣ್ಣನ ಕುರಿತು ಸ್ವತಂತ್ರವಾಗಿ ಅಥವಾ ಭಾಷಾಂತರ ರೂಪದಲ್ಲಿ ಕೃತಿಗಳು ರಚನೆಗೊಂಡು ಆ ಭಾಷೆಗಳಲ್ಲಿಯೂ ಬಸವಣ್ಣನ ತತ್ವಾದರ್ಶಗಳು ಪಸರಿಸಿರುವುದನ್ನು ಗಮನಿಸಬಹುದು. ಭಾರತದಲ್ಲಿ ಬುದ್ಧ, ಮಹಾವೀರ ಮುಂತಾದ ಮಹಾಪುರುಷರ ಸಾಲಿನಲ್ಲಿ ಬಸವಣ್ಣನೂ ಒಬ್ಬನಾಗಿ ವಿಶ್ವದೆತ್ತರದಲ್ಲಿ ನಿಂತಿದ್ದಾನೆ.

ಹೀಗೆ ಬಸವಣ್ಣನ ಚರಿತ್ರೆ ಎಲ್ಲಾ ಕಡೆ ಧಾರ್ಮಿಕವಾಗಿ ಪಸರಿಸಲು ಮೂಲ ಕಾರಣರಾದವನು ಮತ್ತು ಅವನ ಚರಿತ್ರೆಯನ್ನು ಮೊದಲು ಕಾವ್ಯ ರೂಪದಲ್ಲಿ ಚಿತ್ರಿಸಿದವನು ಕನ್ನಡದ ಹರಿಹರ. ಆನಂತರದಲ್ಲಿ ತೆಲುಗಿನ ಪಾಲ್ಕುರಿಕೆ ಸೋಮನಾಥ. ಬಸವಣ್ಣನಿಗೆ ಕಾಲ ಮತ್ತು ಸ್ಥಳದಲ್ಲಿ ತುಂಬಾ ಹತ್ತಿರದಲ್ಲಿದ್ದವನು ಹರಿಹರ. ಶೇಕ್ಕಿಳಾರರು ತಮಿಳುನಾಡಿನ ಪುರಾತನರಿಗೆ ನೀಡಿರುವಂತಹ ಪ್ರಾಶಸ್ತ್ಯವನ್ನೇ ಹರಿಹರನ 'ಬಸವರಾಜ ದೇವರ ರಗಳೆ' ಎಂಬ ಕೃತಿಯಲ್ಲಿ ನಾವು ಕಾಣಬಹುದು. ಅನಂತರ ಸುಮಾರು ಒಂದು ಶತಮಾನದ ಆಸುಪಾಸಿನಲ್ಲಿ ತೆಲುಗಿನ ಪ್ರಮುಖ ವೀರಶೈವ ಕವಿ ಪಾಲ್ಕುರಿಕೆ ಸೋಮನಾಥನು 'ಬಸವಪುರಾಣಮು' ಎಂಬ ಕಾವ್ಯವನ್ನು ರಚಿಸುತ್ತಾನೆ. ಬಸವಣ್ಣನ ಚರಿತ್ರೆಗೆ ಸಂಬಂಧಿಸಿದಂತೆ ಕನ್ನಡ-ತೆಲುಗು ಮತ್ತು ಇತರೆ ಭಾರತೀಯ ಸಾಹಿತ್ಯದಲ್ಲಿ ರಚನೆಯಾದ ಕೃತಿಗಳು ಹರಿಹರ ಮತ್ತು ಸೋಮನಾಥ ಈ ಇಬ್ಬರ ಕೃತಿಗಳ ಆಧಾರದಿಂದಲೇ ರಚಿತವಾದುವುಗಳು. ಬಸವಣ್ಣ ಮತ್ತು ಇತರೆ ಶಿವಶರಣರ ಚರಿತ್ರೆಗಳು ಮುಖ್ಯವಾಗಿ ಎರಡು ಮಾದರಿಗಳಲ್ಲಿ ರಚನೆಯಾಗಿವೆ. ಒಂದು ಹರಿಹರನ ಮಾದರಿ ಮತ್ತೊಂದು ಪಾಲ್ಕುರಿಕೆ ಸೋಮನಾಥನ ಮಾದರಿ. ಹರಿಹರನ ರಗಳೆಗಳೆಲ್ಲವೂ ಏಕವ್ಯಕ್ತಿ ಕೇಂದ್ರಿತ ನೆಲೆಯಲ್ಲಿ ರಚನೆಯಾದುವುಗಳೇ. ಅಂದರೆ ತನ್ನ ರಗಳೆಗೆ ಆಯ್ದುಕೊಂಡ ಕೃತಿ ನಾಯಕ (ಶರಣನ)ನ ಚರಿತ್ರೆಗೆ ಮಾತ್ರ ರಗಳೆ ಸಂಬಂಧಿಸಿರುತ್ತದೆ. ಆ ನಾಯಕನ ಕಥೆಗೆ ಅಲ್ಲಿನ ವಿವರಗಳು ಸೀಮಿತಗೊಂಡಿರುತ್ತವೆ. ಉಳಿದಂತೆ ಬರುವ ಪಾತ್ರಗಳು ಹಾಗೂ ವಿಷಯಗಳು ಪೂರಕವಾಗಿರುತ್ತವೆಯೇ ಹೊರತು ಪ್ರಧಾನವಾಗಿರುವುದಿಲ್ಲ. ಮತ್ತು ಪ್ರತಿ ರಗಳೆಯ ಕೃತಿ ನಾಯಕನು ಕೈಲಾಸದ ಶಿವಗಣದಲ್ಲಿ ಮಾಡಿದ ಯಾವುದೋ ಒಂದು ತಪ್ಪಿಗಾಗಿ ಶಾಪದ ಶಿಕ್ಷೆಯಾಗುತ್ತದೆ. ಆ ಶಾಪದ ಪರಿಹಾರಕ್ಕಾಗಿ ಶಿವನ ಅಪ್ಪಣೆಯಂತೆ ಭೂಲೋಕದಲ್ಲಿ ಅವತರಿಸುತ್ತಾರೆ. ಇವು ಹರಿಹರ ನೀಡುವ ಕೃತಿ ನಾಯಕನ ಪೂರ್ವಾಪರ ವಿವರಗಳು. ಇದು ಹರಿಹರನ ಮಾದರಿ. ಇವನ ನಂತರ ಶಿವರಣರ ಕುರಿತು ಪುರಾಣ ಪರಂಪರೆಯಲ್ಲಿ ಕಾವ್ಯ ರಚನೆ ಮಾಡಿದ ಪಾಲ್ಕುರಿಕೆ ಸೋಮನಾಥನು

ಸಮಗ್ರ ದೃಷ್ಟಿಕೋನದ ಮನಸ್ಸುಳ್ಳವನು. ಹರಿಹರ ಏಕವ್ಯಕ್ತಿ ಕೇಂದ್ರಿತವಾಗಿ ರಚಿಸುತ್ತಿದ್ದ ಮಾದರಿಗಿಂತ ಭಿನ್ನವಾಗಿ ಯೋಚಿಸಿದ ಸೋಮನಾಥ ಕವಿಯು ಎಲ್ಲಾ ಶಿವಶರಣರನ್ನು ಮೇಳೈಸಿ ವಿಶಿಷ್ಟವಾಗಿ ಕಾವ್ಯ ರಚಿಸುತ್ತಾನೆ. ಅಂದರೆ ಬಸವಣ್ಣನಾದಿಯಾಗಿ ನೂತನ ಮತ್ತು ಪುರಾತನ ಶರಣರ ಕುರಿತು ಒಬ್ಬೊಬ್ಬರನ್ನು ಒಂದೊಂದು ಕಾವ್ಯದಲ್ಲಿ ಪರಿಚಯಿಸುವುದಕ್ಕಿಂತ ಎಲ್ಲರನ್ನು ಒಂದೇ ಕಾವ್ಯದಲ್ಲಿ ಪರಿಚಯಿಸುವುದು ಸೋಮನಾಥನ ಉದ್ದೇಶವಾಗಿತ್ತು. ಹಾಗಾಗಿ ಬಸವಣ್ಣನನ್ನು ಪ್ರಧಾನ ನಾಯಕನನ್ನಾಗಿ ಮಾಡಿಕೊಂಡು ಅವನ ಚರಿತ್ರೆಯನ್ನು ಹೇಳುವುದರ ಜೊತೆ ಜೊತೆಗೆ ಸಂದರ್ಭಕ್ಕನುಗುಣವಾಗಿ ಆ ಕಾಲದ ಎಲ್ಲಾ ಪ್ರಮುಖರ ಚರಿತ್ರೆಯನ್ನು ಹೇಳುತ್ತಾನೆ. ಇದು ಸೋಮನಾಥನ ಸಮಗ್ರ ದೃಷ್ಟಿಕೋನದ ಮಾದರಿ. ಹಾಗೆಯೇ ಕಥಾನಾಯಕನ ಅವತಾರದ ವಿಚಾರದಲ್ಲಿಯೂ ಭಿನ್ನವಾಗಿಯೇ ಯೋಚಿಸುತ್ತಾನೆ ಸೋಮನಾಥ. ಹರಿಹರನಂತೆ ಭಕ್ತಿ ಚಳವಳಿಯ ನೇತಾರನಾದ ಬಸವಣ್ಣನನ್ನು ತಪ್ಪಿತಸ್ಥ ಅಥವಾ ಶಾಪವಿಮೋಚನೆಗಾಗಿ ಭೂಲೋಕದಲ್ಲಿ ಅವತರಿಸಿದ ಎಂದು ಹೇಳಿದರೆ ಅವನ ಘನ ವ್ಯಕ್ತಿತ್ವಕ್ಕೆ ಕುಂದುಂಟಾಗುತ್ತದೆಂದು ಯೋಚಿಸುತ್ತಾನೆ. ಹಾಗಾಗಿ "ಭೂಲೋಕದಲ್ಲಿ ಶಿವಭಕ್ತಿ ಕ್ಷೀಣಿಸುತ್ತಿದೆ. ಆದ್ದರಿಂದ ತಾವು ಬಂದು ಶಿವಧರ್ಮವನ್ನು ಕಾಪಾಡಬೇಕೆಂದು ನಾರದ ಶಿವನಲ್ಲಿ ಬೇಡುತ್ತಾನೆ. ಶಿವನು ನಂದಿಯನ್ನು ಬಸವ ನಾಮದಿಂದ ಭೂಲೋಕದಲ್ಲಿ ಅವತರಿಸಿ ಭಕ್ತಿಯನ್ನು ಬೆಳಗು ಎಂದು ಕಳಿಸುತ್ತಾನೆ" ಹೀಗೆ ಬಸವಣ್ಣನ ಭವ್ಯ ವ್ಯಕ್ತಿತ್ವವನ್ನು ಸೋಮನಾಥ ವಿಶೇಷವಾದ ರೀತಿಯಲ್ಲಿ ಚಿತ್ರಿಸುತ್ತಾನೆ. ಹೀಗೆ ಈ ಇಬ್ಬರ ಕವಿಗಳ ವಸ್ತು ಮತ್ತು ವಿಷಯಗಳಲ್ಲಿ ಕೆಲವು ಸಣ್ಣಪುಟ್ಟ ವ್ಯತ್ಯಾಸಗಳನ್ನು ಬಿಟ್ಟರೆ ಬಹುತೇಕ ಚರಿತ್ರೆಯ ಅಂಶಗಳು ಒಂದೇ ರೀತಿಯಾಗಿವೆ. ಆದ್ದರಿಂದ ಇವರಿಬ್ಬರ ನಂತರದ ಕವಿಗಳಿಗೆ ಇವರ ಕೃತಿಗಳು ಪ್ರಮುಖ ಆಕರಗಳಾದವು. ಅದರಲ್ಲಿಯೂ ಬಹುತೇಕ ಕವಿಗಳು ಸೋಮನಾಥನ ಸಮಗ್ರ ದೃಷ್ಟಿಕೋನದ ಮಾದರಿಯನ್ನೇ ಅವಲಂಬಿಸಿದರು. 'ಬಸವಪುರಾಣಮು' ಕಥೆಯನ್ನಾಧರಿಸಿಯೇ ತಮ್ಮ ಪುರಾಣ, ಕಾವ್ಯಗಳನ್ನು ರಚಿಸಿದರು. ಆದ್ದರಿಂದ 'ಬಸವಪುರಾಣಮು' ತೆಲುಗು ಮತ್ತು ಕನ್ನಡ ವೀರಶೈವ ಸಾಹಿತ್ಯಕ್ಕೆ ಸಾಕಷ್ಟು ಪ್ರೇರಣೆ ಮತ್ತು ಪ್ರಭಾವಗಳನ್ನು ಬೀರಿದೆ.

ಈ ಮೇಲಿನ ವಿವರಗಳ ಹಿನ್ನೆಲೆಯಲ್ಲಿ ಬಸವಣ್ಣ ಮತ್ತು ಇತರೆ ಶರಣರ ಜೀವನ ಚರಿತ್ರೆಯನ್ನು ಪ್ರಮುಖ ವಸ್ತುವಾಗಿಟ್ಟುಕೊಂಡು ರಚನೆಯಾದ ತೆಲುಗಿನ ಪಾಲ್ಕುರಿಕೆ ಸೋಮನಾಥನ 'ಬಸವಪುರಾಣಮು', ಕನ್ನಡದ ಪ್ರಮುಖ ವೀರಶೈವ ಕವಿಯಾದ ಭೀಮಕವಿಯ ಮೇಲೂ ಪ್ರಭಾವ ಬೀರುತ್ತದೆ. ಬಸವಣ್ಣ ಮತ್ತು ಇತರೆ ಶರಣರ ಜೀವನ ಚರಿತ್ರೆಗಳ ರಚನೆ ಮಾಡಬೇಕೆಂದುಕೊಂಡಿದ್ದ ಭೀಮಕವಿಗೆ ಸೋಮನಾಥ ಮತ್ತು ತಂದೆ ಶಿವದೇವ ಕವಿ ಕನಸಿನಲ್ಲಿ ಬಂದು "ಮುನ್ನುಸುರ್ದುದನೆ ಕನ್ನಡಿಸಿ ಪೇಳೆಂದು" ಹೇಳಿದ್ದರ ಕಾರಣವಾಗಿ ಭೀಮಕವಿ ತೆಲುಗು 'ಬಸವಪುರಾಣಮು'ವನ್ನು ಕನ್ನಡಕ್ಕೆ ಭಾಷಾಂತರಿಸುತ್ತಾನೆ. ಹೀಗೆ ಭಾಷಾಂತರಗೊಂಡ 'ಬಸವಪುರಾಣ' ಮೂಲದ ಜೊತೆಗೆ ಕೆಲವೊಂದು ಹೊಸ ವಿಚಾರಗಳನ್ನು, ಹೊಸ ಶರಣರ ಕಥೆಗಳನ್ನು ಸೇರಿಸಿಕೊಂಡು ಬೃಹತ್ ಪುರಾಣ ಕಾವ್ಯವಾಗಿ ರೂಪು ತಾಳಿತು. ಹೀಗೆ ರೂಪುಗೊಂಡು ರಚನೆಯಾದ ತೆಲುಗು ಮತ್ತು ಕನ್ನಡ

ಪುರಾಣಗಳೆರಡೂ 'ಬಸವಪುರಾಣ' ಎಂಬ ಶೀರ್ಷಿಕೆಯನ್ನು ಒಳಗೊಂಡಿದ್ದರೂ, ಇದು ಕೇವಲ ಬಸವಣ್ಣನ ಚರಿತ್ರೆಯಾಗಿರದೆ ಆದಿಗಣ ಶಿವಶರಣರ ಚರಿತ್ರೆಯೂ ಆಗಿದೆ. ಬಸವಣ್ಣನ ಜೀವನ ವೃತ್ತಾಂತವನ್ನು ಒಂದು ನೆಪವಾಗಿಟ್ಟುಕೊಂಡು ಕೃತಿ ಉದ್ದಕ್ಕೂ ಹಲವು ಶಿವಭಕ್ತರ ಕಥೆಗಳು ಹಾಸುಹೊಕ್ಕಾಗಿ ಸೇರಿಕೊಂಡಿವೆ.

ಈ ಆದಿಗಣ ಚರಿತ್ರೆ, ಬಸವ ಚರಿತ್ರೆಯನ್ನು ಕಂಡರಿಸಿರುವ ಎರಡೂ ಪುರಾಣಗಳು ಭಿನ್ನ ಭಾಷೆಯ, ಭಿನ್ನ ಪರಿಸರದಲ್ಲಿ ಸೃಷ್ಟಿಯಾದಂತವುಗಳು. ಆದ್ದರಿಂದ ಈ ಭಿನ್ನ ಪರಿಸರದ ಸಾಮಾಜಿಕ, ಸಾಂಸ್ಕೃತಿಕ ಚರಿತ್ರೆಯೂ ಇಲ್ಲಿ ಅಡಕವಾಗಿದೆ. ಇಂತಹ ಚರಿತ್ರೆಯ ಅಂಶಗಳು ಎರಡು ಪುರಾಣಗಳಲ್ಲಿ ಹೇಗೆ ಬೆಸೆದುಕೊಂಡಿವೆ ಎಂಬುದು ಅಧ್ಯಯನದ ಮುಖ್ಯ ವಿಷಯವಾಗಿದೆ. ಹೀಗೆ ಎರಡು ಭಾಷೆಗಳಲ್ಲಿ ರಚನೆಗೊಂಡಿರುವ ಕೃತಿಗಳನ್ನು ಅಧ್ಯಯನ ಮಾಡುವುದರಿಂದ ಆ ಕಾಲದ ಸಂಸ್ಕೃತಿ, ಧರ್ಮ, ಭಾಷೆ ಮುಂತಾದ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳ ಸಮಗ್ರ ಮಾಹಿತಿ ದೊರೆಯುತ್ತದೆ. ಇಂದು ತೌಲನಿಕ ಅಧ್ಯಯನಗಳು ಹೆಚ್ಚು ಹೆಚ್ಚು ನಡೆಯುತ್ತಿದ್ದು, ಈ ಮಾದರಿಯ ಅಧ್ಯಯನಗಳ ಮೂಲಕ ಎರಡು ಭಾಷೆಯ ಅಥವಾ ಎರಡು ವಸ್ತುವಿಷಯಗಳ ಕುರಿತು ಸಮಗ್ರವಾಗಿ ಅಧ್ಯಯನ ಮಾಡಿ ಎರಡೂ ವಸ್ತುವಿಷಯಗಳಲ್ಲಿನ ಸಾಮ್ಯತೆ ಮತ್ತು ಭಿನ್ನತೆಗಳನ್ನು ಗುರುತಿಸಿಕೊಳ್ಳುವದರ ಮೂಲಕ ಒಂದು ನಿರ್ದಿಷ್ಟ ಕಾಲದ ಸಾಂಸ್ಕೃತಿಕ ಬದುಕಿನ ಆಶಯಗಳು ಮತ್ತು ಅನನ್ಯತೆಯನ್ನು ತಿಳಿಯಬಹುದು.

ಇಂದು ತೌಲನಿಕ ಅಧ್ಯಯನಗಳು ಭಾಷೆ, ಸಾಹಿತ್ಯ, ವಿಜ್ಞಾನ, ತಂತ್ರಜ್ಞಾನ ಮುಂತಾದ ಕ್ಷೇತ್ರಗಳಲ್ಲಿ ನಡೆಯುತ್ತಿವೆ. ಸಾಹಿತ್ಯ ವಲಯದಲ್ಲಿ ತೌಲನಿಕ ಅಧ್ಯಯನಗಳು ಎಷ್ಟು ಪ್ರಮುಖವೋ, ಭಾಷಾಂತರ ಅಧ್ಯಯನಗಳು ಅಷ್ಟೇ ಪ್ರಮುಖವಾದವುಗಳು. ತೌಲನಿಕ ಅಧ್ಯಯನದ ವ್ಯಾಪ್ತಿಯೊಳಗೆಯೇ ಈ ಭಾಷಾಂತರ ಅಧ್ಯಯನವೂ ಬರುತ್ತದೆ. ಭಾಷಾಂತರ ಅಧ್ಯಯನಗಳು ಇತ್ತೀಚಿನ ಸಂಶೋಧನಾ ಕ್ಷೇತ್ರದಲ್ಲಿ ತುಂಬಾ ಪ್ರಾಮುಖ್ಯತೆಯನ್ನು ಗಳಿಸಿಕೊಂಡಿದೆ. ಸಾಹಿತ್ಯ ಭಾಷಾಂತರ ಅಧ್ಯಯನಕ್ಕೆ ಸಂಬಂಧಿಸಿದಂತೆ ಒಂದು ಸಮಾನ ವಸ್ತುವಿಷಯವಿರುವ ಎರಡು ಭಿನ್ನ ಭಾಷೆಗಳ ಕೃತಿಗಳ ಅಧ್ಯಯನವೇ ಭಾಷಾಂತರ ಅಧ್ಯಯನ. ಇದರೊಳಗೆ ಮೂಲ ಭಾಷೆಯ ಕೃತಿಯು ಉದ್ದಿಷ್ಟ ಭಾಷೆಯಲ್ಲಿ ಹೇಗೆ ಪಡಿಮೂಡಿದೆ ಎಂಬುದು ಮುಖ್ಯ. ನೇರವಾದ ಭಾಷಾಂತರ, ಸಂಗ್ರಹಾನುವಾದ, ವಿಸ್ತಾರನುವಾದ, ಭಾವಾನುವಾದ ಈ ಮುಂತಾದ ಮಾದರಿಗಳಲ್ಲಿ ಉದ್ದಿಷ್ಟ ಭಾಷೆಗೆ ಅನುವಾದಗೊಳ್ಳುವ ಕೃತಿಯು ಯಾವ ಮಾದರಿಯಲ್ಲಿ ಹೇಗೆ ಭಾಷಾಂತರಗೊಂಡಿದೆ ಎಂಬುದೇ ಭಾಷಂತರ ಅಧ್ಯಯನವಾಗುತ್ತದೆ. ಇಲ್ಲಿ ಮೂಲ ಕಾವ್ಯದ ಕಥನವೊಂದನ್ನು ಮತ್ತೊಂದು ಭಾಷೆಯ ಕಾವ್ಯದ ಕಥನವಾಗಿ ಭಾಷಾಂತರಿಸುವಾಗ ಕಾಲದ ದೃಷ್ಟಿಯಿಂದ, ಭಾಷೆಯ ದೃಷ್ಟಿಯಿಂದ ಅನೇಕ ವಿಧದಲ್ಲಿ ಬದಲಾವಣೆಗೊಳಪಡುತ್ತವೆ. ಈ ಹಿನ್ನೆಲೆಯಲ್ಲಿ ಮೂಲ ಭಾಷೆಯ ವಸ್ತುವು ಉದ್ದಿಷ್ಟ ಭಾಷೆಯಲ್ಲಿ ರಚನೆಗೊಂಡ ಬಗೆ ಮತ್ತು ಅದರ ಸ್ವರೂಪದ ಸಂಪೂರ್ಣ ಅಧ್ಯಯನವೇ ಭಾಷಾಂತರ ಅಧ್ಯಯನವಾಗುತ್ತದೆ. ಕಾಲದ ಬದಲಾವಣೆಗಳೊಂದಿಗೆ ಭಾಷಾಂತರವು ಅನಿವಾರ್ಯವಾಗಿ ಬದಲಾವಣೆಗೊಳ್ಳಬೇಕಾಗುತ್ತದೆ.

ಉದಾಹರಣೆಗೆ ಹಳಗನ್ನಡ ಕಾವ್ಯವನ್ನು ಈ ಸಂದರ್ಭದಲ್ಲಿ ಭಾಷಾಂತರಿಸಬೇಕೆಂದರೆ ಹೊಸಗನ್ನಡದಲ್ಲಿಯೇ ಭಾಷಾಂತರಿಸಬೇಕು. ಆಗ ಹಳೆಗನ್ನಡದ ಹಲವಾರು ಪದಗಳು ಹೊಸಗನ್ನಡದಲ್ಲಿರಬೇಕಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಭಾಷಾಂತರ ಕಾರ್ಯ ತುಂಬಾ ಕಷ್ಟವಾಗುತ್ತದೆ. ಮೂಲ ಮತ್ತು ಉದ್ದಿಷ್ಟ ಭಾಷೆಯ ಕೃತಿಗಳಲ್ಲಿ ಆಯಾ ಕಾಲದ ಸಾಂಸ್ಕೃತಿಕ ಬದುಕು ಅನಾವರಣಗೊಂಡಿರುತ್ತದೆ. ಈ ಹಿನ್ನೆಲೆಯಲ್ಲಿ ಅಂದಿನ ಸಾಮಾಜಿಕ ಪರಿಸರದ ಸಂಗತಿಗಳೊಂದಿಗೆ ಕಥೆಯ ವಸ್ತುವಿಷಯದ ಅಧ್ಯಯನವನ್ನು ಮಾಡಬೇಕಾಗುತ್ತದೆ. ಆಗ ಎರಡೂ ಕೃತಿಗಳಿಗೆ ನ್ಯಾಯ ಒದಗಿಸಿದಂತಾಗುತ್ತದೆ. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಕನ್ನಡ ಮತ್ತು ತೆಲುಗು ಬಸವಪುರಾಣಗಳನ್ನು ಸಮಗ್ರವಾಗಿ ತೌಲನಿಕ ಅಧ್ಯಯನ ಮಾಡುವುದರ ಮೂಲಕ ಬಸವಣ್ಣ ಮತ್ತು ಅವನ ಸಮಕಾಲೀನ ಶಿವಶರಣರ ಜೀವನ ಚರಿತ್ರೆಯನ್ನು ತಿಳಿಯುವುದು ಮುಖ್ಯವಾಗಿದೆ. ಜೊತೆಗೆ ಈ ಎರಡೂ ಪುರಾಣಗಳಲ್ಲಿನ ಸಾಮಾಜಿಕ, ಸಾಂಸ್ಕೃತಿಕ ಮತ್ತು ಚಾರಿತ್ರಿಕ ಅಂಶಗಳ ಸಾಮ್ಯತೆ ಮತ್ತು ಭಿನ್ನತೆಗಳನ್ನು ಅಧ್ಯಯನದ ಮೂಲಕ ಗುರುತಿಸುವ ಸಲುವಾಗಿ "ಕನ್ನಡ ಹಾಗೂ ತೆಲುಗು 'ಬಸವಪುರಾಣ'ಗಳ ತೌಲನಿಕ ಅಧ್ಯಯನ" ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಅಧ್ಯಯನ ಮಾಡಲಾಗಿದೆ.

**೧.೨. ಅಧ್ಯಯನದ ಉದ್ದೇಶ :**

ಕನ್ನಡ ಹಾಗೂ ತೆಲುಗು 'ಬಸವಪುರಾಣ'ಗಳು ಮುಖ್ಯವಾಗಿ ಕೆಳಗಿನ ವಿಷಯಗಳಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ.

* ಕನ್ನಡ ಹಾಗೂ ತೆಲುಗು ಭಾಷೆಗಳಲ್ಲಿ ಮೊದಲ ವೀರಶೈವ ಪುರಾಣ ಕಾವ್ಯಗಳಾಗಿರುವುದು.
* ಭಕ್ತಿ ಚಳವಳಿಯ ನೇತಾರ ಬಸವಣ್ಣನ ಜೀವನ ಚರಿತ್ರೆಯ ಜೊತೆಗೆ ಅವನ ಸಮಕಾಲೀನ ಶರಣರ ಸಮಗ್ರ ದರ್ಶನವನ್ನು ಒಂದೆಡೆ ಒಳಗೊಂಡಿರುವುದು.
* ಕನ್ನಡದ ಬಸವಣ್ಣ ಮತ್ತು ಇತರೆ ಶಿವಶರಣರ ಬಗ್ಗೆ ಅನ್ಯ ಭಾಷೆಯ(ತೆಲುಗು) ಕವಿ ಮೊದಲು ಪುರಾಣ ಕಾವ್ಯ ರಚನೆ ಮಾಡಿರುವುದು.
* ತೆಲುಗಿನ 'ಬಸವಪುರಾಣ'ವು ಸಂಪೂರ್ಣವಾಗಿ ದೇಸಿ ಭಾಷೆಯ ದ್ವಿಪದಿ ಛಂದಸ್ಸಿನಲ್ಲಿ ರಚಿತವಾದ ಮೊದಲ ಪುರಾಣವಾಗಿರುವುದು.
* ಕನ್ನಡದ 'ಬಸವಪುರಾಣ'ವು ಸಂಪೂರ್ಣವಾಗಿ ಭಾಮಿನಿ ಷಟ್ಪದಿಯಲ್ಲಿ ರಚಿತವಾದ ಮೊದಲ ಕನ್ನಡ ಕಾವ್ಯವಾಗಿರುವುದು.
* ತೆಲುಗಿನಿಂದ ಕನ್ನಡಕ್ಕೆ ಭಾಷಾಂತರವಾದ ಮೊದಲ ಕಾವ್ಯವಾಗಿರುವುದು.

ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಎರಡೂ ಕಾವ್ಯಗಳನ್ನು ಅಭ್ಯಸಿಸುವುದರ ಜೊತೆಗೆ ಈ ಮುಂದಿನ ಉದ್ದೇಶಗಳನ್ನು ಪ್ರಧಾನವಾಗಿಟ್ಟುಕೊಂಡು ಅಧ್ಯಯನ ಮಾಡಲಾಗಿದೆ.

* ಮಾನವನಾಗಿ ಹುಟ್ಟಿ ಮಹಾಮಾನವನಾಗಿ ಬೆಳೆದುನಿಂತ ಬಸವಣ್ಣ ಮತ್ತು ಅವನ ಸಮಕಾಲೀನ ಶರಣರ ಚರಿತ್ರೆಯು ಈ ಎರಡು ಪುರಾಣಗಳಲ್ಲಿ ಹೇಗೆ ಚಿತ್ರಣಗೊಂಡಿದೆ ಮತ್ತು ಹೀಗೆ ಚಿತ್ರಣಗೊಂಡ ಈ ಶರಣರ ವಾಸ್ತವ ಬದುಕಿನ ಸಮಗ್ರ ದರ್ಶನವನ್ನು ತಿಳಿಯುವುದು.

* ಕನ್ನಡ–ತೆಲುಗು 'ಬಸವಪುರಾಣ'ಗಳು ಭಕ್ತಿರಸ ಪ್ರಧಾನ ಕಾವ್ಯಗಳು. ಈ ಪುರಾಣಗಳಲ್ಲಿ ನೂರಾರು ಶರಣರ ಭಕ್ತಿ ಸಾಗರವೇ ತುಂಬಿಕೊಂಡಿದೆ. ಒಬ್ಬೊಬ್ಬ ಶರಣನ ಭಕ್ತಿಯು ವಿಶಿಷ್ಟವಾದದ್ದು. ತಾವು ನಂಬಿದ ಶಿವನನ್ನು ಹಲವು ಬಗೆಯಲ್ಲಿ ಪೂಜಿಸುವ, ಆರಾಧಿಸುವ ಈ ಶರಣರ ಭಕ್ತಿಯ ಮಾರ್ಗವು ವಿನೂತನವಾದದ್ದು. ಈ ಹಿನ್ನೆಲೆಯಲ್ಲಿ ಈ ಪುರಾಣಗಳಲ್ಲಿನ ಶರಣರ ಭಕ್ತಿಯ ಅಭಿವ್ಯಕ್ತಿ ಎಂಥಹದ್ದು, ಮತ್ತು ಹೇಗೆ ಚಿತ್ರಣಗೊಂಡಿದೆ ಎಂಬುದನ್ನು ತಿಳಿಯುವುದಾಗಿದೆ. ಮುಗ್ಧಭಕ್ತಿ, ಉಗ್ರಭಕ್ತಿ, ಧರ್ಮನಿಷ್ಠೆಯಾದಂತಹ ಭಕ್ತಿಯ ನೆಲೆಗಳಲ್ಲಿ ಇಲ್ಲಿನ ಶರಣರ ಭಕ್ತಿಯ ಅಭಿವ್ಯಕ್ತಿಯು ನಿರೂಪಣೆಗೊಂಡಿದೆ. ಈ ಹಿನ್ನೆಲೆಯಲ್ಲಿ ಇವರ ಭಕ್ತಿಯ ಮಾರ್ಗವನ್ನು ಇಬ್ಬರು ಕವಿಗಳು ಹೇಗೆ ನಿರೂಪಿಸಿದ್ದಾರೆ ಎಂಬುದನ್ನು ತಿಳಿಯುವುದು.

* ಸಾಮಾಜಿಕವಾಗಿ ಅಸಮಾನತೆಯನ್ನು ಹೊಂದಿದ್ದ ಪರಿಸರದಲ್ಲಿ ಬಸವಣ್ಣ ಮತ್ತು ಆತನ ಸಮಕಾಲೀನ ಶರಣರು ಈ ಅಸಮಾನತೆಯ ವಿರುದ್ಧ ಪ್ರತಿಭಟಿಸಿದರು. ಸಾಮಾಜಿಕ ಸಾಮರಸ್ಯವನ್ನು ಬೆಳೆಸಲು ತಮ್ಮದೇ ಆದ ನೆಲೆಗಳಲ್ಲಿ ಚಿಂತಿಸಿದ ಈ ಶರಣರು ಅನೇಕ ಪವಾಡಗಳನ್ನು ವಿಸ್ಮಯಗಳನ್ನು ಮಾಡಿದರು. ಈ ಮೂಲಕ ಸಾಮಾನ್ಯ ಜನರಲ್ಲಿ ಜಾಗೃತಿ ಮೂಡಿಸಿದರು. ಜೊತೆಗೆ ಶಿವಧರ್ಮವನ್ನು ಭೂಮಿಯಲ್ಲಿ ನೆಲೆಗೊಳಿಸುವ ಸಲುವಾಗಿ ಶಿವಧರ್ಮದ ಶ್ರೇಷ್ಠತೆಯನ್ನು ತೋರಿಸುವ ಉದ್ದೇಶದಿಂದ ಬಸವಣ್ಣ ಮತ್ತು ಇತರರು ಮಾಡಿದ ಕಾರ್ಯಗಳು ಕ್ರಮೇಣ ಪುರಾಣದ ರೂಪವನು ಹೇಗೆ ಪಡೆದುಕೊಂಡವು ಮತ್ತು ಅವು ಈ ಎರಡೂ ಪುರಾಣಗಳಲ್ಲಿ ಹೇಗೆ ಚಿತ್ರಣಗೊಂಡಿವೆ ಎಂಬುದನ್ನು ತಿಳಿಯುವುದರ ಜೊತೆಗೆ ಈ ಪವಾಡ ಕಥೆಗಳ ಮೂಲೋದ್ದೇಶಗಳನ್ನು ಅರಿಯುವುದು.

* ಕನ್ನಡ ಮತ್ತು ತೆಲುಗು 'ಬಸವಪುರಾಣ'ಗಳು ರಚನೆಗೊಂಡಿರುವುದು ಸಾಮಾಜಿಕ ಮತ್ತು ಸಾಂಸ್ಕೃತಿಕವಾಗಿ ಬೆಳವಣಿಗೆಯಾದ ವಿಶಿಷ್ಟ ಪರಿಸರದಲ್ಲಿ. ಈ ಸಂದರ್ಭದಲ್ಲಿ ರಾಜಕೀಯವಾಗಿ ಅಭಿವೃದ್ಧಿ ಹೊಂದಿದ್ದ ಈ ಪರಿಸರಗಳು ವಿಶಿಷ್ಟವಾಗಿದ್ದವು. ಈ ಹಿನ್ನೆಲೆಯಲ್ಲಿ ಈ ಎರಡೂ ಪುರಾಣಗಳಲ್ಲಿ ಆ ಕಾಲದ ಸಾಂಸ್ಕೃತಿಕ ಪರಿಸರದ ಚಿತ್ರಣ ಅಡಕಗೊಂಡಿರುವುದನ್ನು ಕಾಣಬಹುದು. ಹಾಗಾಗಿ ಈ ಪುರಾಣಗಳಲ್ಲಿ ನಿರೂಪಿತಗೊಂಡಿರುವ ಹನ್ನೆರಡು ಹಾಗೂ ಹದಿಮೂರನೆಯ ಶತಮಾನದ ಸಾಂಸ್ಕೃತಿಕ ಪರಿಸರವನ್ನು ಮುಖ್ಯವಾಗಿ ಸಾಮಾಜಿಕ ಸಂಗತಿಗಳು, ಧಾರ್ಮಿಕ ಸಂಗತಿಗಳು, ಆರ್ಥಿಕ ಸಂಗತಿಗಳು, ರಾಜಕೀಯ ಸಂಗತಿಗಳು ಮತ್ತು ವಿನೋದಾವಳಿಗಳು ಎಂಬ ಅಂಶಗಳ ಹಿನ್ನೆಲೆಯಲ್ಲಿ ಚರ್ಚಿಸಿ ಆ ಕಾಲದ ಸಾಂಸ್ಕೃತಿಕ ಸಂಗತಿಗಳನ್ನು ಅರಿಯುವುದು.

* ಕನ್ನಡ ಮತ್ತು ತೆಲುಗು 'ಬಸವಪುರಾಣ'ಗಳು ರಚನೆಗೊಂಡಿರುವುದು ಸಾಹಿತ್ಯಿಕವಾಗಿ ಎರಡೂ ಭಾಷೆಗಳಲ್ಲಿ ದೇಸಿ ಚಿಂತನೆಗಳು ಆರಂಭವಾಗಿದ್ದ ಕಾಲದಲ್ಲಿ. ಆರಂಭದ ಮಾರ್ಗ ಸಾಹಿತ್ಯವನ್ನು ತಿರಸ್ಕರಿಸಿದ ಈ ಶತಮಾನದ ಕವಿಗಳು ದೇಸಿ ಮಾರ್ಗವನ್ನು ಅನುಸರಿಸಿದರು. ಇದಕ್ಕೆ ಕಾರಣ ವ್ಯಕ್ತಿ ಆಧಾರಿತ ಕಾವ್ಯ, ಪುರಾಣಗಳು ಈ ಕಾಲದಲ್ಲಿ ಹೆಚ್ಚು ರಚನೆಗೊಂಡವು. ಜೊತೆಗೆ ವೀರಶೈವ ಕವಿಗಳು ಶಿವಶರಣರ ಚರಿತ್ರೆಗಳನ್ನು ಒಳಗೊಂಡಿರುವ ಕಾವ್ಯಗಳನ್ನು ರಚಿಸತೊಡಗಿದರು. ಈ ಶರಣರು

ಸಾಮಾನ್ಯ ವ್ಯಕ್ತಿಗಳಾಗಿದ್ದು, ಅಸಾಮಾನ್ಯ ಸಾಧನೆಗಳನ್ನು ಮಾಡಿದ್ದರು. ಇಂತಹ ಶರಣರ ಚರಿತ್ರೆಗಳು ಸಾಮಾನ್ಯನಿಗೂ ಅರ್ಥವಾಗಬೇಕೆಂದುಕೊಂಡು ಈ ಕಾಲದ ಕವಿಗಳು ರಗಳೆ, ಸಾಂಗತ್ಯ, ಷಟ್ಪದಿಯಂತಹ ದೇಸಿ ಛಂದೋ ಪ್ರಕಾರಗಳನ್ನು ಆರಿಸಿಕೊಂಡು ಕಾವ್ಯ, ಪುರಾಣಗಳನ್ನು ರಚಿಸಿದರು. ಈ ಹಿನ್ನೆಲೆಯಲ್ಲಿ ರಚನೆಗೊಂಡವುಗಳೇ 'ಬಸವಪುರಾಣ'ಗಳು. ತೆಲುಗು ದೇಸಿ ಛಂದೋ ರೂಪವಾದ, ದ್ವಿಪದಿ ಮತ್ತು ಕನ್ನಡದ ಭಾಮಿನಿ ಷಟ್ಪದಿಗಳಲ್ಲಿ ರಚನೆಗೊಂಡ ಈ ಪುರಾಣಗಳ ಕಾವ್ಯಸೌಂದರ್ಯ ಹೇಗೆ ಅನಾರಣಗೊಂಡಿದೆ ಎಂಬುದನ್ನು ತಿಳಿಯುವುದು ಕಾವ್ಯಧ್ಯಯನಗಳ ಮಾದರಿಯಲ್ಲಿ ಮುಖ್ಯವಾದುದು. ಹಾಗಾಗಿ ಇಲ್ಲಿನ ಛಂದೋ ವೈಶಿಷ್ಟ್ಯ, ವರ್ಣನೆಗಳು, ರಸ ನಿರೂಪಣೆ, ಕಥನ ಕ್ರಮದ ಮಾದರಿಗಳನ್ನು ಅಧ್ಯಯನ ಮಾಡುವುದು ಕೂಡ ಇಲ್ಲಿನ ಮುಖ್ಯ ಉದ್ದೇಶವಾಗಿದೆ.

* ತೆಲುಗು ಭಾಷೆಯಿಂದ ಕನ್ನಡಕ್ಕೆ ಅನುವಾದಗೊಂಡ ಮೊದಲ ಕೃತಿ ಭೀಮಕವಿಯ 'ಬಸವಪುರಾಣ'ವಾಗಿದೆ. ಆದ್ದರಿಂದ ಈ ಅನುವಾದಿತ ಕಾವ್ಯದ ಭಾಷಾಂತರ ವೈಶಿಷ್ಟ್ಯಗಳ ಸ್ವರೂಪವನ್ನು ತಿಳಿಯುವುದು ಈ ಅಧ್ಯಯನದ ಉದ್ದೇಶಗಳಲ್ಲೊಂದಾಗಿದೆ. ಪಾಲ್ಕುರಿಕೆ ಸೋಮನಾಥನ ಮೂಲ ಪುರಾಣವನ್ನು ಕನ್ನಡಕ್ಕೆ ಅನುವಾದಿಸುವಾಗ ಭೀಮಕವಿ ಏನೆಲ್ಲಾ ಪ್ರಯೋಗ ಮತ್ತು ಬದಲಾವಣೆಗಳನ್ನು ಮಾಡಿಕೊಂಡಿದ್ದಾನೆ ಮತ್ತು ಹೇಗೆ ಅನುವಾದಿಸಿದ್ದಾನೆ ಎಂಬುದನ್ನು ಗುರುತಿಸುವುದು ಮುಖ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಭಾಷಾಂತರದ ವಿವಿಧ ಮಾದರಿಗಳಾದ ನೇರ ಅನುವಾದ, ಸಂಕ್ಷಿಪ್ತ ಅನುವಾದ, ಭಾವಾನುವಾದ, ವಿಸ್ತಾರಾನುವಾದ, ಪದ ಸಮುಚ್ಚಯದ ಬಳಕೆ, ನುಡಿಗಟ್ಟುಗಳು, ಅಲಂಕಾರಗಳೇ ಮೊದಲಾದ ಅಂಶಗಳು ಅನುವಾದ ಮುಂತಾದ ಮಾದರಿಗಳನ್ನು ಹೇಗೆ ಬಳಸಿಕೊಂಡಿದ್ದಾನೆ ಎಂಬುದನ್ನು ಗಮನಿಸಬಹುದು. ಜೊತೆಗೆ ಮೂಲ ಮತ್ತು ಉದ್ದಿಷ್ಟ ಭಾಷೆಯ ಕೃತಿಗಳ ನಡುವಿನ ಸಾಮ್ಯ ಭಿನ್ನತೆಗಳನ್ನು ಗುರುತಿಸಿ ಕನ್ನಡ 'ಬಸವಪುರಾಣ'ದ ಭಾಷಾಂತರ ಸ್ವರೂಪವನ್ನು ತಿಳಿಯುವುದು ಈ ಅಧ್ಯಯನದ ಉದ್ದೇಶವಾಗಿದೆ.

* ಈ ಮೇಲಿನ ಎಲ್ಲಾ ಉದ್ದೇಶಗಳ ಹಿನ್ನೆಲೆಯಲ್ಲಿ "ಕನ್ನಡ ಮತ್ತು ತೆಲುಗು ಬಸವಪುರಾಣಗಳ ತೌಲನಿಕ ಅಧ್ಯಯನ" ಎಂಬ ವಿಷಯವನ್ನು ಸಮಗ್ರವಾಗಿ ಚರ್ಚಿಸಿ ವಿಶ್ಲೇಷಿಸಲಾಗಿದೆ.

**೧.೩. ಅಧ್ಯಯನ ವ್ಯಾಪ್ತಿ ಮತ್ತು ವೈಧಾನಿಕತೆ :**

ಕನ್ನಡ ಹಾಗೂ ತೆಲುಗು ಬಸವಪುರಾಣಗಳ ತೌಲನಿಕ ಅಧ್ಯಯನವಾದ್ದರಿಂದ ಮುಖ್ಯವಾಗಿ ಈ ಎರಡು ಪುರಾಣಗಳಲ್ಲಿನ ವಸ್ತುವಿಷಯದ ಮೇಲೆಯೇ ಕೇಂದ್ರೀಕೃತವಾಗಿರುತ್ತದೆ. ಆದರೂ ಅಧ್ಯಯನವೆಂದರೆ ಕೇವಲ ಎರಡು ಕೃತಿಗಳ ಅಧ್ಯಯನವಲ್ಲ. ಆದ್ದರಿಂದ ಈ ಎರಡು ಪುರಾಣ ಕಾವ್ಯಗಳನ್ನು ತೌಲನಿಕ ಅಧ್ಯಯನಕ್ಕೆ ಒಳಪಡಿಸಬೇಕಾಗಿರುವುದರಿಂದ ವಿಸ್ತೃತ ಅಧ್ಯಯನ ಮುಖ್ಯವಾಗುತ್ತದೆ. ಅಂದರೆ ಈ ಪುರಾಣಗಳ ವಸ್ತುವಿಷಯ ಕುರಿತು ಕನ್ನಡ-ತೆಲುಗಿನಲ್ಲಿ ಸಾಕಷ್ಟು ಸಾಹಿತ್ಯ ರಚನೆಯಾಗಿದೆ. ಪಾಲ್ಕುರಿಕೆ ಸೋಮನಾಥನಗಿಂತ ಪೂರ್ವದಲ್ಲಿಯೇ ಮಲ್ಲಿಕಾರ್ಜುನ ಪಂಡಿತಾರಾಧ್ಯರು 'ಶಿವತತ್ವಸಾರಮು' ಎಂಬ ಕೃತಿಯಲ್ಲಿ ಬಸವಣ್ಣನ ಕುರಿತು ಮೂರು ಪದ್ಯಗಳನ್ನು ರಚಿಸಿದ್ದಾರೆ. ನಂತರ ಪಾಲ್ಕುರಿಕೆ

ಸೋಮನಾಥನು ಬಸವಣ್ಣನ ಕುರಿತು ಹಲವು ಕೃತಿಗಳನ್ನು ರಚಿಸಿದ್ದಾನೆ. ಅವು ಕೂಡ ಈ ಅಧ್ಯಯನದ ವ್ಯಾಪ್ತಿಗೆ ಬಳಸಿಕೊಳ್ಳಲಾಗಿದೆ. ಜೊತೆಗೆ ತೆಲುಗು 'ಬಸವಪುರಾಣ'ವನ್ನು ಆಕರವಾಗಿಸಿಕೊಂಡು ರಚಿಸಿದ ತೆಲುಗಿನ ಪಿಡುಪರ್ತಿ ಸೋಮನಾಥ ಮತ್ತು ನಂತರದ ಕವಿಗಳು ರಚಿಸಿದ ಬಸವ ಚರಿತ್ರೆಗೆ ಸಂಬಂಧಿಸಿದ ಕೃತಿಗಳನ್ನು ಈ ಅಧ್ಯಯನಕ್ಕೆ ಬಳಸಿಕೊಂಡಿದ್ದೇನೆ. ಹಾಗೂ 'ಬಸವಪುರಾಣ'ವನ್ನು ಭಾಷಿಕವಾಗಿ, ಸಾಹಿತ್ಯಿಕವಾಗಿ ವಿಶ್ಲೇಷಣೆ, ವಿಮರ್ಶೆ ಮಾಡಿದ ತೆಲುಗಿನ ಅನೇಕ ವಿದ್ವಾಂಸರ ಕೃತಿಗಳನ್ನು ಬಳಸಿಕೊಳ್ಳಲಾಗಿದೆ. ಕನ್ನಡಕ್ಕೆ ಸಂಬಂಧಿಸಿದಂತೆ 'ಬಸವಪುರಾಣ'ದಲ್ಲಿ ಬಹುತೇಕ ಶಿವಶರಣರ ಕಥೆಗಳನ್ನು ಹರಿಹರ ರಗಳೆಗಳಲ್ಲಿ ರಚಿಸಿದ್ದಾನೆ. ಹಾಗಾಗಿ ಹರಿಹರನ ರಗಳೆಗಳಿಂದ ಹಿಡಿದು ಬಸವಣ್ಣ ಮತ್ತು ಶಿವಶರಣರ ಚರಿತ್ರೆಯ ವಸ್ತುವನ್ನು ಒಳಗೊಂಡ ಲಕ್ಕಣ ದಂಡೇಶನ 'ಶಿವತತ್ವ ಚಿಂತಾಮಣಿ', ಷಡಕ್ಷರಿಯ 'ಬಸವರಾಜ ವಿಜಯ', ಸಿಂಗಿರಾಜನ 'ಸಿಂಗಿರಾಜ ಪುರಾಣ'(ಅಮಲ ಬಸವರಾಜ ಸಾರಿತ್ರ್ಯ), ಗುರುಬಸವ ಲಿಂಗನ 'ಬಸವೇಶ್ವರ ಕಾವ್ಯ' ಮುಂತಾದ ಮಧ್ಯಕಾಲೀನ ವೀರಶೈವ ಸಾಹಿತ್ಯ ಕೃತಿಗಳನ್ನು ಬಳಸಿಕೊಳ್ಳಲಾಗಿದೆ. ಮತ್ತು ಹೊಸಗನ್ನಡದಲ್ಲಿ ಬಸವಣ್ಣನ ಕುರಿತು ರಚನೆಗೊಂಡ ಕಥೆ, ಕಾದಂಬರಿ, ನಾಟಕಗಳನ್ನು ಹಾಗೂ 'ಬಸವಪುರಾಣ' ಅಥವಾ ಬಸವಣ್ಣನಿಗೆ ಸಂಬಂಧಿಸಿ ರಚಿಸಿದ ಹಲವು ವಿದ್ವಾಂಸರ ಲೇಖನ, ಪ್ರಬಂಧಗಳನ್ನು ಈ ಅಧ್ಯಯನಕ್ಕೆ ಆಕರಗಳಾಗಿ ಬಳಸಿಕೊಳ್ಳಲಾಗಿದೆ. ಈ ಚೌಕಟ್ಟಿನಲ್ಲಿ ತೆಲುಗು-ಕನ್ನಡದ ವೀರಶೈವ ಸಾಹಿತ್ಯವನ್ನು ಈ ಅಧ್ಯಯನಕ್ಕೆ ಬಳಸಿಕೊಂಡು ಈ ಮಹಾಪ್ರಬಂಧವನ್ನು ರಚಿಸಲಾಗಿದೆ.

**ವೈಧಾನಿಕತೆ :**

'ಕನ್ನಡ-ತೆಲುಗು ಬಸವಪುರಾಣ'ಗಳ ಅಧ್ಯಯನವು ಮುಖ್ಯವಾಗಿ ತೌಲನಿಕ ಅಧ್ಯಯನವಾಗಿದ್ದು, ಈ ಎರಡು ಪುರಾಣಗಳ ವಸ್ತುವಿಷಯವನ್ನು ಇಲ್ಲಿ ಅಧ್ಯಯನ ಮಾಡಲಾಗಿದೆ. ಈ ಅಧ್ಯಯನದಲ್ಲಿ ಬಸವಣ್ಣ ಮತ್ತು ಇತರ ಶರಣರ ಚರಿತ್ರೆಯನ್ನು ಇಬ್ಬರು ಕವಿಗಳು ಹೇಗೆ ಕಟ್ಟಿಕೊಟ್ಟಿದ್ದಾರೆ ಎಂಬುದನ್ನು ವಿಶ್ಲೇಷಿಸಲಾಗಿದೆ.

ಈ ಅಧ್ಯಯನಕ್ಕೆ ಮೂಲ ತೆಲುಗು 'ಬಸವಪುರಾಣಮು'ವನ್ನು ಸಂಪಾದಿಸಿರುವ ಶ್ರೀ ಗೂಡ ವೆಂಕಟಸುಬ್ರಹ್ಮಣ್ಯಂ ಅವರು ಸಂಪಾದಿಸಿದ 'ಬಸವಪುರಾಣಮು'ವನ್ನು ಮುಖ್ಯ ಆಕರವಾಗಿ ಬಳಸಿಕೊಳ್ಳಲಾಗಿದೆ. ಹಾಗೆಯೇ ಕನ್ನಡದಲ್ಲಿ ಎಸ್. ವಿದ್ಯಾಶಂಕರ ಅವರು ಸಂಪದಿಸಿದ ಭೀಮ ಕವಿಯ 'ಬಸವಪುರಾಣ'ವನ್ನು ಬಳಸಿಕೊಂಡು ಎರಡೂ ಪುರಾಣಗಳಲ್ಲಿನ ಪದ್ಯಗಳನ್ನು ತುಲನಾತ್ಮಕ ದೃಷ್ಟಿಯಿಂದ ಸಂದರ್ಭಕ್ಕನುಗುಣವಾಗಿ ವಿಶ್ಲೇಷಿಸುವ ಮೂಲಕ ಮಹಾಪ್ರಬಂಧವನ್ನು ರಚಿಸಲಾಗಿದೆ.

ಮೂಲ ತೆಲುಗು ಪದ್ಯಗಳಿಗೆ ಕಂಸದಲ್ಲಿ ಕನ್ನಡದ ಸಂಕ್ಷಿಪ್ತ ಗದ್ಯಾನುವಾದವನ್ನು ನೀಡಲಾಗಿದೆ. ಈ ಗದ್ಯಾನುವಾದಕ್ಕೆ ಸಹಾಯಕವಾಗಿ ಹಾಗೂ ಮೂಲವನ್ನು ಸುಲಭವಾಗಿ ಅರ್ಥೈಸಿಕೊಳ್ಳುವ ಸಲುವಾಗಿ ತೆಲುಗು 'ಬಸವಪುರಾಣಮು'ವನ್ನು ಕನ್ನಡಕ್ಕೆ ಪದಶಃ ಅನುವಾದ ಮಾಡಿರುವ ಪಿ.ವಿ. ನಾರಾಯಣ ಅವರ 'ಬಸವಪುರಾಣ'ವನ್ನು ಆಕರವಾಗಿ ಬಳಸಿಕೊಳ್ಳಲಾಗಿದೆ.

**ಅಧ್ಯಯನದ ಸ್ವರೂಪ :**

"ಕನ್ನಡ ಹಾಗೂ ತೆಲುಗು 'ಬಸವಪುರಾಣ'ಗಳ ತೌಲನಿಕ ಅಧ್ಯಯನ" ಎಂಬ ವಿಷಯಕ್ಕೆ ಸಂಬಂಧಿಸಿದಂತೆ ಒಟ್ಟು ಎಂಟು ಅಧ್ಯಾಯಗಳನ್ನು ರೂಪಿಸಿಕೊಳ್ಳಲಾಗಿದೆ.

ಮೊದಲನೆಯ ಅಧ್ಯಾಯವಾದ ಅಧ್ಯಯನದ ಪೂರ್ವ ಪೀಠಿಕೆಯಲ್ಲಿ ಅಧ್ಯಯನಕ್ಕೆ ಸೂಕ್ತ ಪ್ರಸ್ತಾವನೆಯನ್ನು ಹಾಕಿಕೊಳ್ಳುವುದರ ಮೂಲಕ ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಸ್ವರೂಪಗಳನ್ನು ತಿಳಿಸಲಾಗಿದೆ. ನಂತರ ಕನ್ನಡ ಮತ್ತು ತೆಲುಗು 'ಬಸವಪುರಾಣ'ಗಳಿಗೆ ಸಂಬಂಧಿಸಿ ಆಯಾ ಭಾಷೆಯಲ್ಲಿ ಇದುವರೆಗೂ ನಡೆದ ಅಧ್ಯಯನಗಳನ್ನು ಅವುಗಳ ಸ್ವರೂಪಗಳನ್ನು ವಿವರಿಸಲಾಗಿದೆ.

ಎರಡನೆಯ ಅಧ್ಯಾಯ ಕವಿ, ಕಾವ್ಯ, ಕಥಾವಸ್ತುಗಳ ಪರಿಚಯದಲ್ಲಿ 'ಬಸವಪುರಾಣ'ಗಳನ್ನು ರಚಿಸಿದ ಪಾಲ್ಕುರಿಕೆ ಸೋಮನಾಥ ಮತ್ತು ಭೀಮಕವಿಯ ವೈಯಕ್ತಿಕ ವಿಚಾರಗಳಾದ, ಕಾಲ, ಸ್ಥಳ, ತಂದೆ–ತಾಯಿ, ಗುರುಪರಂಪರೆಗಳನ್ನು ತಿಳಿಸಿ ಅವರು ರಚಿಸಿರುವ ಎಲ್ಲಾ ಕೃತಿಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸಲಾಗಿದೆ. ಅನಂತರ ತೆಲುಗು 'ಬಸವಪುರಾಣಮು'ವಿನ ಸಂಕ್ಷಿಪ್ತ ಕಥಾವಸ್ತು, ಮತ್ತು ಕನ್ನಡ 'ಬಸವಪುರಾಣ'ದ ಒಟ್ಟಾರೆಯ ಕಥಾವಸ್ತುಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸಿ 'ಬಸವಪುರಾಣ'ಗಳ ಒಟ್ಟಾರೆಯ ಕಥಾಂಶವನ್ನು ಈ ಅಧ್ಯಾಯದಲ್ಲಿ ತಿಳಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಕನ್ನಡ– ತೆಲುಗು 'ಬಸವಪುರಾಣ'ಗಳಲ್ಲಿನ ಶರಣರ ಭಕ್ತಿಯ ಅಭಿವ್ಯಕ್ತಿ ಎಂಬುದರಲ್ಲಿ ಈ ಕಾವ್ಯಗಳಲ್ಲಿನ ಅನೇಕ ಶಿವಭಕ್ತರು ತಮ್ಮದೇ ನೆಲೆಯಲ್ಲಿ ಭಕ್ತಿಯ ಅರ್ಪಣೆಯನ್ನು ಮಾಡುತ್ತಿರುತ್ತಾರೆ. ಅಂತಹ ಭಕ್ತರ ಭಕ್ತಿಯ ಅಭಿವ್ಯಕ್ತಿಯ ಹಿನ್ನೆಲೆಯಲ್ಲಿ ಮುಗ್ಧಭಕ್ತಿಯ ಶರಣರು, ಉಗ್ರಭಕ್ತಿಯ ಶರಣರು, ಧರ್ಮನಿಷ್ಠ ಭಕ್ತಿಯ ಶರಣರು ಎಂದು ವಿಭಾಗಿಸಿಕೊಂಡು ಅವರ ಅಭಿವ್ಯಕ್ತಿಯ ಮಾರ್ಗವನ್ನು ಅವರ ಭಕ್ತಿಯ ಚಿತ್ರಣಗಳನ್ನು ಎರಡು ಪುರಾಣಗಳು ಹೇಗೆ ಚಿತ್ರಿಸಿವೆ ಎಂಬುದನ್ನು ವಿಶ್ಲೇಷಿಸಲಾಗಿದೆ.

ನಾಲ್ಕನೆಯ ಅಧ್ಯಾಯವಾದ ಕನ್ನಡ–ತೆಲುಗು 'ಬಸವಪುರಾಣ'ಗಳಲ್ಲಿನ ಪವಾಡ, ಚಿತ್ರಣ ಎಂಬುದರಲ್ಲಿ ಪವಾಡದ ಹಿನ್ನೆಲೆ ಮತ್ತು ಪವಾಡ ಸನ್ನಿವೇಶಗಳನ್ನು ಚಿತ್ರಿಸಿದ ಉದ್ದೇಶಗಳನ್ನು ತಿಳಿಸಲಾಗಿದೆ. ಬಸವಣ್ಣನು ನಡೆಸಿದ ಎಲ್ಲಾ ಪವಾಡಗಳನ್ನು ಪಾಲ್ಕುರಿಕೆ ಸೋಮನಾಥ ಮತ್ತು ಭೀಮಕವಿ ನಿರೂಪಿಸಿದ ಬಗೆಯನ್ನು ಮತ್ತು ಭೀಮಕವಿ ಬಸವಣ್ಣನ ಹೆಚ್ಚಿನ ಪವಾಡಗಳನ್ನು ಹೇಳಿದುದರ ಹಿನ್ನೆಲೆಯನ್ನು ಚರ್ಚಿಸಲಾಗಿದೆ. ಹಾಗೆಯೇ ಎರಡೂ ಪುರಾಣಗಳಲ್ಲಿನ ಇತರೆ ಪ್ರಮುಖ ಶಿವಭಕ್ತರು ನಡೆಸಿದ ಪವಾಡಗಳನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಅಧ್ಯಾಯ ಐದರಲ್ಲಿ 'ಬಸವಪುರಾಣ'ಗಳಲ್ಲಿನ ಸಾಂಸ್ಕೃತಿಕ ಸಂಗತಿಗಳು; ಇದರಲ್ಲಿ ಎರಡು ಭಿನ್ನ ಭಾಷೆಯ ಪರಿಸರಗಳಲ್ಲಿ ರಚನೆಗೊಂಡ ಈ ಪುರಾಣಗಳಲ್ಲಿ ಮಾನವ ಸಂಸ್ಕೃತಿಗೆ ಸಂಬಂಧಿಸಿದ, ಸಾಮಾಜಿಕ ಸಂಗತಿಗಳು, ಧಾರ್ಮಿಕ ಸಂಗತಿಗಳು ಆರ್ಥಿಕ ಸಂಗತಿಗಳು, ರಾಜಕೀಯ ಸಂಗತಿಗಳು

ಮತ್ತು ಮನರಂಜನೆಗೆ ಸಂಬಂಧಿಸಿದ ವಿನೋದಾವಳಿ ಸಂಗತಿಗಳು ಹೇಗೆ ಚಿತ್ರಣಗೊಂಡಿವೆ. ಕವಿಗಳು ಅವುಗಳನ್ನು ನಿರೂಪಿಸಿರುವ ಬಗೆಯನ್ನು ಇಲ್ಲಿ ಚರ್ಚಿಸಲಾಗಿದೆ. ಸಂಸ್ಕೃತಿ ಮನುಷ್ಯನ ಅವಿಭಾಜ್ಯ ಅಂಗ ಮಾನವನ ಸಾಮಾಜಿಕ ಬದುಕು ಮಹತ್ವವಾದುದು. ಅದು ಈ ಪುರಾಣಗಳ ರಚನಾ ಕಾಲದಲ್ಲಿ ಹೇಗಿತ್ತು ಎಂಬುದನ್ನು ಸಾಮಾಜಿಕ ಸಂಗತಿಗಳಲ್ಲಿ ವಿವರಿಸಲಾಗಿದೆ. ಧಾರ್ಮಿಕ ಸಂಗತಿಗಳಲ್ಲಿ ಧರ್ಮ ಧರ್ಮಗಳ ನಡುವೆ ನಡೆಯುತ್ತಿದ್ದ ಸಂಘರ್ಷಗಳು, ಮತ್ತು ಅಂದಿನ ಸಮಾಜ ಹೇಗೆ ತಮ್ಮನ್ನು ಭಕ್ತಿಯಲ್ಲಿ ತೊಡಗಿಸಿಕೊಂಡಿತ್ತು ಎಂಬ ಅಂಶಗಳು ಇಲ್ಲಿ ವಿವರಿಸಲ್ಪಟ್ಟಿವೆ. ರಾಜಕೀಯವಾಗಿ ಅಂದಿನ ಪರಿಸ್ಥಿತಿ ಯುದ್ಧಗಳು, ರಾಜ, ಪ್ರಜೆಗಳ ಸಂಬಂಧ, ನ್ಯಾಯ, ನೀತಿ, ಶಿಕ್ಷೆ ಮುಂತಾದ ಅಂಶಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಆರ್ಥಿಕ ಅಂಶಗಳನ್ನು ಅಂದಿನ ಕೃಷಿ ಜೀವನ, ಪಶುಪಾಲನೆ, ವ್ಯಾಪಾರ, ಭೂಮಿ, ಗೇಣಿ ಪದ್ಧತಿ, ಶ್ರೀಮಂತ-ಬಡವರ ನಡುವಿನ ತಿಕ್ಕಾಟ, ಜಮೀನ್ದಾರಿಗಳ ದರ್ಪ, ತೂಕ ಮತ್ತು ಅಳತೆ ಮಾಪನಗಳು, ಧಾನ್ಯಗಳು ಮುಂತಾದ ಆರ್ಥಿಕ ಅಂಶಗಳು ಎರಡೂ ಪ್ರದೇಶಗಳಲ್ಲಿ ಹೇಗೆ ಒಳಗೊಂಡಿದ್ದವು ಎಂಬುದನ್ನು ಇಲ್ಲಿ ವಿವರಿಸಲಾಗಿದೆ.

ಆರನೆಯ ಅಧ್ಯಾಯವು ಕನ್ನಡ-ತೆಲುಗು 'ಬಸವಪುರಾಣ'ಗಳ ಕಾವ್ಯಸೌಂದರ್ಯವನ್ನು ಕುರಿತುದುದಾಗಿದೆ. ಇದರಲ್ಲಿ ತೆಲುಗು ಮತ್ತು ಕನ್ನಡ 'ಬಸವಪುರಾಣ'ಗಳ ಛಂದಸ್ಸಾದ ದ್ವಿಪದಿ ಮತ್ತು ಷಟ್ಪದಿಗಳ ಬಳಕೆ ಅದರ ಮಹತ್ವವನ್ನು ಕುರಿತು ಹೇಳಲಾಗಿದೆ. ಹಾಗೆಯೇ ದೇಸಿಯತೆಯಲ್ಲಿ ಬರೆದ ಇಬ್ಬರ ಚಿಂತನೆಗಳು ಜಾನು ತೆಲುಗು ಮತ್ತು ಕನ್ನಡದ ಭಾಮಿನಿಯ ಸೊಬಗನ್ನು ಕುರಿತು ವಿವರಿಸಲಾಗಿದೆ. ಅಷ್ಟಾದಶ ವರ್ಣನೆಗಳಲ್ಲಿ ಕೆಲವೊಂದನ್ನು ಬಳಸಿದ ಕವಿಗಳು ಅವುಗಳ ನಿರೂಪಣೆಯ ವಿಧಾನಗಳನ್ನು ಹೇಗೆ ಮಾಡಿದ್ದಾರೆ ಎಂಬುದನ್ನು ಉದಾಹರಣೆಗಳ ಸಹಿತ ವಿವರಿಸಲಾಗಿದೆ. ಹಾಗೆಯೇ ಈ ಎರಡೂ ಪುರಾಣಗಳ ರಸಪೋಷಣೆ, ಪ್ರಮುಖ ರಸಗಳ ಹಿನ್ನೆಲೆಯಲ್ಲಿ ಕವಿಗಳ ರಸಸ್ವಾದವನ್ನು ಕುರಿತು ಪ್ರಸ್ತಾಪಿಸಲಾಗಿದೆ. ಒಟ್ಟಾರೆಯಾಗಿ ಪುರಾಣಗಳ ಕಾವ್ಯಸೌಂದರ್ಯದ ಅಂಶಗಳನ್ನು ಇಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಅಧ್ಯಾಯ ಏಳು ಕನ್ನಡ 'ಬಸವಪುರಾಣ'ದ ಭಾಷಾಂತರ ಸ್ವರೂಪ. ಇದರಲ್ಲಿ ಸೋಮನಾಥನ ಮೂಲ 'ಬಸವಪುರಾಣಮು'ವನ್ನು ಕನ್ನಡೀಕರಿಸಿದ ಭೀಮಕವಿಯು ತಾನು ಹೇಗೆ ಭಾಷಾಂತರ ಮಾಡಿದ್ದಾನೆ. ಏನೆಲ್ಲ ಅಂಶಗಳನ್ನು ತೆಗೆದುಕೊಂಡಿದ್ದಾನೆ ಎಂಬ ಅಂಶಗಳನ್ನು ಇಲ್ಲಿ ಗುರುತಿಸಲಾಗಿದೆ. ಹಾಗೆಯೇ ಭಾಷಾಂತರಿಸುವಾಗ ಭೀಮಕವಿ ಅನುಸರಿಸಿರುವ ಅಂಶಗಳನ್ನು ಎರಡೂ ಪುರಾಣಗಳ ಕಥಾ ಭಾಗಗಳನ್ನು, ವಾಕ್ಯಗಳನ್ನು ಉದಾಹರಿಸುವ ಮೂಲಕ ವಿವರಿಸಲಾಗಿದೆ. ಇದರಿಂದ ಮೂಲ ಭಾಷೆಯ ಕಾವ್ಯಕ್ಕೆ ಮತ್ತು ಉದ್ದಿಷ್ಟ ಭಾಷೆಯ ಕಾವ್ಯಕ್ಕಿರುವ ಸಾಮ್ಯ ಮತ್ತು ಭಿನ್ನತೆಗಳನ್ನು ಸ್ಪಷ್ಟವಾಗಿ ಗುರುತಿಸುವುದಕ್ಕೆ ಸಾಧ್ಯವಾಗಿದೆ.

ಅಧ್ಯಾಯ ಎಂಟು ಕೊನೆಯ ಸಮಾರೋಪವಾಗಿದ್ದು, ಈ ಅಧ್ಯಾಯದಲ್ಲಿ ಒಟ್ಟಾರೆಯಾಗಿ ಈ ಮಹಾಪ್ರಬಂಧಕ್ಕೆ ರೂಪಿಸಿಕೊಂಡ ಮೇಲಿನ ಅಧ್ಯಾಯಗಳಿಂದ ಕಂಡುಕೊಂಡ ಹೊಸ ಅಂಶಗಳನ್ನು ಪ್ರಸ್ತುತಪಡಿಸುವುದರ ಜೊತೆಗೆ ಪ್ರಮುಖ ಫಲಿತಗಳನ್ನು ನೀಡಲಾಗಿದೆ.

**೧.೫. ಈವರೆಗಿನ ಅಧ್ಯಯನಗಳ ಸಮೀಕ್ಷೆ :**

ಕನ್ನಡ ಹಾಗೂ ತೆಲುಗು 'ಬಸವಪುರಾಣ'ಗಳಿಗೆ ಸಂಬಂಧಿಸಿದಂತೆ ಈಗಾಗಲೇ ಎರಡೂ ಭಾಷೆಯಲ್ಲಿ ಕೆಲವು ಅಧ್ಯಯನಗಳು ನಡೆದಿವೆ. ಗ್ರಂಥಸಂಪಾದನೆಯ ಪ್ರಸ್ತಾವನೆ ರೂಪದಲ್ಲಿ, ವಿಮರ್ಶೆಯ ರೂಪದಲ್ಲಿ, ಲೇಖನಗಳ ರೂಪದಲ್ಲಿ ಹಾಗೂ ಎಂ.ಫಿಲ್. ಮತ್ತು ಪಿಎಚ್.ಡಿ. ಪ್ರಬಂಧಗಳ ರೂಪದಲ್ಲಿ ಅಧ್ಯಯನಗಳು ನಡೆದಿವೆ. ಆ ಅಧ್ಯಾಯನಗಳ ಸಂಕ್ಷಿಪ್ತ ಸ್ವರೂಪವನ್ನು ಇಲ್ಲಿ ಕೊಡಲಾಗಿದೆ.

**'ಬಸವಪುರಾಣ' (ಸಂ), ಆರ್.ಸಿ. ಹಿರೇಮಠ :** ಭಿಮಕವಿ ವಿರಚಿತ ಬಸವಪುರಾಣ ಕಾವ್ಯವನ್ನು ಸಂಗ್ರಹಿಸಿ ಸಂಪದಾನೆ ಮಾಡಿರುವ ಆರ್.ಸಿ. ಹಿರೇಮಠ ಅವರ ದೀರ್ಘ ಪ್ರಸ್ತಾವನೆಯಲ್ಲಿ ಭೀಮಕವಿಯ ಕಾಲ, ಸ್ಥಳ, ಕೃತಿಗಳ ಮಾಹಿತಿಯನ್ನು ನೀಡಿದ್ದಾರೆ. ಭೀಮಕವಿಯ ಕುರಿತು ಉಲ್ಲೇಖಿಸಿರುವ ಇತರೆ ಕವಿಗಳ ಮಾಹಿತಿ ಮತ್ತು ಭೀಮಕವಿ ತನ್ನ ಬಗ್ಗೆ ಕೃತಿಯಲ್ಲಿ ಹೇಳಿಕೊಂಡ ವಿವರಗಳನ್ನು ಚರ್ಚಿಸಿದ್ದಾರೆ. ಭೀಮಕವಿಯು ಕೃತಿ ರಚಿಸಲು ಕಾರಣ ಮತ್ತು ಅದಕ್ಕೆ ಪ್ರೇರಣೆ ನೀಡಿದ ಅಂಶಗಳನ್ನು ವಿಶ್ಲೇಷಿಸಿದ್ದಾರೆ. ವೀರಶೈವ ಪುರಾಣಗಳ ಲಕ್ಷಣಗಳನ್ನು ತಿಳಿಸುತ್ತಾ ಬಸವಪುರಾಣದ ಸಮಗ್ರ ಮಾಹಿತಿಯನ್ನು ಸಂಕ್ಷಿಪ್ತವಾಗಿ ಪರಿಚಯಿಸಿದ್ದಾರೆ. ಮತ್ತು ಬಸವಪುರಾಣ ಕಥಾವಸ್ತುವನ್ನು ಚರ್ಚಿಸುತ್ತಾ ಹರಿಹರನ ಬಸವರಾಜ ದೇವರ ರಗಳೆಯೊಂದಿಗೆ ಹೋಲಿಕೆಯನ್ನು ಮಾಡಿದ್ದಾರೆ. ಕೊನೆಯಲ್ಲಿ ತೆಲುಗಿನ ಪ್ರಸಿದ್ಧ ವೀರಶೈವ ಕೃತಿಗಳ ಪಟ್ಟಿಯನ್ನು ಕೊಟ್ಟಿರುವುದರಿಂದ ತೆಲುಗು ವೀರಶೈವ ಸಾಹಿತ್ಯ ಮತ್ತು ಪರಂಪರೆಯ ಮಹತ್ವವನ್ನು ಈ ಕೃತಿಯು ಒದಗಿಸುತ್ತದೆ.

**'ಭೀಮಕವಿ ಬಸವಪುರಾಣ'** : ಎಸ್. ವಿದ್ಯಾಶಂಕರ ಅವರು ಸಂಪಾದಿಸಿರುವ ಈ ಕೃತಿಯ ಪೀಠಿಕೆಯಲ್ಲಿ ಭೀಮಕವಿ ಮತ್ತು ಪಾಲ್ಕುರಿಕೆ ಸೋಮನಾಥ ಈ ಇಬ್ಬರು ಕವಿಗಳ ಕಾಲ, ಸ್ಥಳ ಮತ್ತು ಅವರು ಬರೆದಿರುವಂತಹ ಇತರೆ ಕೃತಿಗಳ ಪರಿಚಯವನ್ನು ಮಾಡುತ್ತಾ, ಪಾಲ್ಕುರಿಕೆ ಸೋಮನಾಥ ಮತ್ತು ಭೀಮಕವಿಯ 'ಬಸವಪುರಾಣ'ಗಳನ್ನು ತೌಲನಿಕವಾಗಿ ವಿಶ್ಲೇಷಿಸಿದ್ದಾರೆ. ಈ ಎರಡು ಕೃತಿಗಳಲ್ಲಿ ಸಮಾನ ಮತ್ತು ವಿಶಿಷ್ಟ ಅಂಶಗಳ ಸಂಕ್ಷಿಪ್ತ ಮಾಹಿತಿಯನ್ನು ಕೊಟ್ಟಿದ್ದಾರೆ. ಮತ್ತು ಈ ಎರಡು ಕಾವ್ಯಗಳಲ್ಲಿ ಬರುವಂತಹ ಕೆಲವು ಪ್ರಸಿದ್ಧ ಶಿವಶರಣರ ಪರಿಚಯವನ್ನು ಮತ್ತು ಅವರ ಬಗೆಗಿನ ಐತಿಹ್ಯ, ನಂಬಿಕೆಗಳ ಕುರಿತು ಚರ್ಚಿಸಿದ್ದಾರೆ. ಭೀಮಕವಿಯ ಮೇಲೆ ಪಾಲ್ಕುರಿಕೆ ಸೋಮನಾಥನ ಪ್ರಭಾವ ಮತ್ತು ಪಾಲ್ಕುರಿಕೆ ಸೋಮನಾಥ ಹರಿಹರನಿಗೆ ಎಷ್ಟು ಸಮೀಪವಾಗಿದ್ದಾನೆ ಎಂಬ ಅಂಶಗಳನ್ನು ಕೂಡ ಚರ್ಚಿಸಿದ್ದಾರೆ. ಹರಿಹರ, ಪಾಲ್ಕುರಿಕೆ ಸೋಮನಾಥ ಮತ್ತು ಭೀಮಕವಿ ಈ ಮೂವರು ಬಸವಣ್ಣನ ಕಥೆಯನ್ನು ಚಿತ್ರಿಸಿದ ಬಗೆ ಮತ್ತು ಅವರ ಒಲವು-ನಿಲುವುಗಳ ಬಗ್ಗೆ ಸಂಕ್ಷಿಪ್ತವಾಗಿ ಚರ್ಚಿಸಿದ್ದಾರೆ.

**'ಬಸವಪುರಾಣ'** : ಪಿ.ವಿ. ನಾರಾಯಣ ಅವರು ಪಾಲ್ಕುರಿಕೆ ಸೋಮನಾಥನ ತೆಲುಗು 'ಬಸವಪುರಾಣ'ವನ್ನು ಮೂಲದಲ್ಲಿದ್ದಂತೆಯೇ ಮತ್ತು ಮೂಲದ ಛಂದಸ್ಸನ್ನೇ ಇಲ್ಲಿ ಬಳಸಿ ಭಾಷಾಂತರಿಸಿದ್ದಾರೆ. ಕೆಲವೊಂದು ಕಡೆ ಸಾಧ್ಯವಾಗದಿದ್ದಾಗ ಕನ್ನಡಕ್ಕೆ ಒಗ್ಗುವಂತೆ ಈ ಕೃತಿಯನ್ನು ಅನುವಾದಿಸಿದ್ದಾರೆ. ಪಾಲ್ಕುರಿಕೆ ಸೋಮನಾಥನ 'ಬಸವಪುರಾಣಮು'ದ ಸ್ವರೂಪ ಮತ್ತು ಅದರ ಕಲ್ಪನೆ ತೆಲುಗು ಬಾರದ ಕನ್ನಡಿಗರಿಗೆ ಉಪಯೋಗವಾಗಲೆಂಬ ದೃಷ್ಟಿಯಿಂದ ಸಾಕಷ್ಟು ಶ್ರಮವಹಿಸಿ ಈ ಅನುವಾದವನ್ನು ಸಿದ್ಧಪಡಿಸಲಾಗಿದೆ ಎಂದು ಪೀಠಿಕೆಯಲ್ಲಿ ಹೇಳಿಕೊಂಡಿದ್ದಾರೆ. ಈ ಅನುವಾದ ಕೃತಿಯ ಕೊನೆಯ ಅನುಬಂಧದಲ್ಲಿ ಕನ್ನಡ ಹಾಗೂ ತೆಲುಗು ಕೃತಿಗಳ ತೌಲನಿಕ ಅಂಶಗಳು ಮತ್ತು ವರ್ಣನಾ ವಿನ್ಯಾಸ, ಭಾಷಾಶೈಲಿ, ಛಂದಸ್ಸು, ಪವಾಡಗಳು, ಶರಣರ ಚಾರಿತ್ರ್ಯ ಮುಂತಾದ ಅಂಶಗಳನ್ನು ಚರ್ಚಿಸುತ್ತಾ ಭೀಮಕವಿ ಯಾವ ಯಾವ ಸಂದರ್ಭದಲ್ಲಿ ವರ್ಣನೆಗಳನ್ನು ಹಿಗ್ಗಿಸಿದ್ದಾನೆ ಮತ್ತು ಕಥೆಯನ್ನು ಪರಿವರ್ತಿಸಿದ್ದಾನೆ ಎಂಬುದರ ಕುರಿತು ಸಂಕ್ಷಿಪ್ತವಾಗಿ ಪರಿಚಯಿಸಿದ್ದಾರೆ.

**'ಆರಾಧ್ಯ ಚಾರಿತ್ರ್ಯ' (ಸಂ), ಎನ್. ಬಸವಾರಾಧ್ಯ** : ಈ ಕಾವ್ಯವು ಪಾಲ್ಕುರಿಕೆ ಸೋಮನಾಥನ 'ಆರಾಧ್ಯ ಚರಿತ್ರಮು' ಎಂಬ ತೆಲುಗು ಕಾವ್ಯದ ಅನುವಾದ. ಇದನ್ನು ಕನ್ನಡದಲ್ಲಿ ಅನುವಾಸಿದವರು ನೀಲಕಂಠಾಚಾರ್ಯ. ಈ ಕನ್ನಡ ಕಾವ್ಯದ ಪ್ರಸ್ತಾವನೆಯಲ್ಲಿ ಬಸವರಾಧ್ಯರು 'ಆರಾಧ್ಯ ಚರಿತ್ರೆ'ಯ ನಾಯಕ ಮಲ್ಲಿಕಾರ್ಜುನ ಪಂಡಿತಾರಾಧ್ಯರು ಮತ್ತು 'ಬಸವಪುರಾಣ'ದ ನಾಯಕ ಬಸವಣ್ಣನವರ ನಡುವಿರುವ ಸಂಬಂಧವನ್ನು ಕುರಿತು ಚರ್ಚಿಸಿದ್ದಾರೆ. ಇದರಿಂದ ತೆಲುಗು-ಕನ್ನಡದ ವೀರಶೈವ ಮತಸ್ಥಾಪಕರ ಪರಿಚಯವಾಗುತ್ತದೆ. 'ಬಸವಪುರಾಣ'ದಲ್ಲಿನ ಶರಣರು ಈ ಕಾವ್ಯದಲ್ಲಿಯೂ ಇರುವುದನ್ನು ಹೇಳಲಾಗಿದೆ.

**'ಬಸವಣ್ಣ ಮತ್ತು ಲಿಂಗಾಯತ ಧರ್ಮ' (ಭಾಗ-೨), ಹಿರೇಮಲ್ಲೂರು ಈಶ್ವರನ್** : ಈ ಕೃತಿಯಲ್ಲಿ ಬಸವೇಶ್ವರರ ಚರಿತ್ರೆಗೆ ಸಂಬಂಧಿಸಿದಂತೆ ರಾಜಶೇಖರಪ್ಪ ಅವರು ಸಂಗ್ರಹಿಸಿರುವ 'ಜಾನಪದ ಬಸವಪುರಾಣ'ದಲ್ಲಿನ ಕೆಲವು ಮುಖ್ಯ ವಿಚಾರಗಳನ್ನು ಬಸವಣ್ಣನವರ ಕುರಿತು ಹುಟ್ಟಿಕೊಂಡಿರುವ ನಂಬಿಕೆಗಳನ್ನು ವಿಶ್ಲೇಷಿಸಿದ್ದಾರೆ. ಲಿಂಗಾಯತ ಪುರಾಣಗಳು ಎಂಬ ತಮ್ಮ ಮೊದಲ ಲೇಖನದಲ್ಲಿ ಪಾಲ್ಕುರಿಕೆ ಸೋಮನಾಥ ಮತ್ತು ಭೀಮಕವಿಯ 'ಬಸವಪುರಾಣ'ಗಳಲ್ಲಿನ ಕೆಲವು ಸಂಧಿಗಳ ಬಗ್ಗೆ ವಿಶ್ಲೇಷಿಣೆಯನ್ನು ಮಾಡಿದ್ದಾರೆ. ಜೊತೆಗೆ 'ಬಸವಪುರಾಣ'ವನ್ನು ಹರಿಹರನ ಕೃತಿಯೊಂದಿಗೆ ಹೋಲಿಸಿ ಕನ್ನಡದಲ್ಲಿ 'ಬಸವಪುರಾಣ'ದ ಮಹತ್ವವನ್ನು ಪ್ರಸ್ತಾಪಿಸಿದ್ದಾರೆ. ಇವುಗಳ ಜೊತೆಗೆ ಭೀಮಕವಿಯ ಬಸವಪುರಾಣದ ಆಧಾರದ ಮೇಲೆ ರಚಿತವಾದ ಲಕ್ಕಣ ದಂಡೇಶನ 'ಶಿವತತ್ವ ಚಿಂತಾಮಣಿ' (೧೪೫೦), ಸಿಂಗಿರಾಜನ 'ಬಸವರಾಜ ಚಾರಿತ್ರ್ಯ' (೧೫೦೦), ಷಡಕ್ಷರಿಯ 'ಬಸವರಾಜ ವಿಜಯಂ' (೧೬೭೨) ಕೃತಿಗಳನ್ನು ಕೂಡ ವಿಶ್ಲೇಷಿಸಿದ್ದಾರೆ. ಕೊನೆಯಲ್ಲಿ ಶೈವ ಪುರಾಣಗಳಿಗೆ ಮತ್ತು ಜೈನ ಪುರಾಣಗಳಿಗೂ ಇರುವ ವ್ಯತ್ಯಾಸವನ್ನು ಚರ್ಚಿಸಿದ್ದಾರೆ.

**'ವೀರಶೈವ ಪುರಾಣ ವಿವೇಚನೆ' (ಸಂ), ಡಾ. ಗುರುಪಾದ ಮರಿಗುದ್ದಿ :** ಈ ಕೃತಿಯಲ್ಲಿ ಮಹಾಪ್ರಬಂಧದ ವಿಷಯಕ್ಕೆ ಸಂಬಂಧಿಸಿದಂತೆ 'ಕನ್ನಡ ಸಾಹಿತ್ಯದಲ್ಲಿ ಪುರಾಣ ಕೃತಿಗಳು' ಎಸ್. ವಿದ್ಯಾಶಂಕರ ಅವರ ಲೇಖನ ಪೂರಕವಾದ ಮಾಹಿತಿಯನ್ನು ಒದಗಿಸುತ್ತದೆ. ಕನ್ನಡದ ಮೊದಲ ಪುರಾಣವಾದ ಪಂಪನ 'ಆದಿಪುರಾಣ'ದಿಂದ ವಿರೂಪಾಕ್ಷ ಪಂಡಿತನ 'ಚನ್ನಬಸವ ಪುರಾಣ'ದವರೆಗಿನ ಅನೇಕ ಪುರಾಣ ಕಾವ್ಯಗಳನ್ನು ವಿಶ್ಲೇಷಿಸಿದ್ದಾರೆ. ಅದರಲ್ಲಿ ಭೀಮಕವಿಯ 'ಬಸವಪುರಾಣ'ವನ್ನು ಕುರಿತು ಕೆಲವು ಮಾಹಿತಿಗಳನ್ನು ನೀಡಿದ್ದಾರೆ. ಒಂದು ಕಾಲಘಟ್ಟದ ಸಮಗ್ರ ಮಾಹಿತಿಯನ್ನು ಪುರಾಣ ರೂಪದಲ್ಲಿ ಕಟ್ಟಿಕೊಟ್ಟಿರುವ ಬಗೆ ಎಷ್ಟು ಸಮರ್ಪಕವಾಗಿದೆ ಎಂಬ ವಿಷಯಗಳನ್ನು ಇಲ್ಲಿ ಚರ್ಚಿಸಿದ್ದಾರೆ.

**'ಬಸವಣ್ಣನವರು (ಚರಿತ್ರೆ ಮತ್ತು ಸಂಸ್ಕೃತಿಯ ಶೋಧಗಳು)', ವಿಜಯ ಕುಮಾರ ಮಹಾನುಭಾವಿಗಳು**

ಈ ಕೃತಿಯಲ್ಲಿ ಬಸವಣ್ಣನವರ ಚರಿತ್ರೆ ಮತ್ತು ಸಂಸ್ಕೃತಿಯ ವಿವರಗಳಿಗೆ ಸಂಬಂಧಿದಂತೆ ಹಲವು ವಿಚಾರಗಳನ್ನು ಹೇಳಿದ್ದಾರೆ. ಬಸವಣ್ಣನವರ ಅವತಾರ ವಿಚಾರಗಳು, ಬಾಲ್ಯದ ವಿಚಾರಗಳು, ಹರಿಹರ-ಭೀಮಕವಿಯ ಸಾಮ್ಯ-ಭಿನ್ನತೆಗಳು, ಬಸವೇಶ್ವರ ಕುರಿತು ರಚಿತವಾಗಿರುವ ಕನ್ನಡ ಕೃತಿಗಳ ಪರಿಶೀಲನೆ, ಬಸವಣ್ಣ ಮತ್ತು ಬಿಜ್ಜಳರ ಸಂಬಂಧ, ಬಸವಣ್ಣನವರ ಕೊನೆಯ ದಿನಗಳು, ಪಾಲ್ಕುರಿಕೆ ಸೋಮನಾಥ ಮತ್ತು ಭೀಮಕವಿಯ 'ಬಸವಪುರಾಣ'ದಲ್ಲಿನ ಹೇಳಿಕೆಗಳನ್ನು ವಿಶ್ಲೇಷಿಸುವುದರ ಮೂಲಕ ಮುಖ್ಯವಾದ ಅಂಶಗಳನ್ನು ಚರ್ಚಿಸಿದ್ದಾರೆ.

**'ಮಾರ್ಗ' (ಸಂಪುಟ-೧) ಎಂ.ಎಂ. ಕಲಬುರ್ಗಿ :** ಈ ಸಂಪುಟದಲ್ಲಿ ಎಂ.ಎಂ. ಕಲಬುರ್ಗಿಯವರು 'ಬಸವಪುರಾಣದ ಪ್ರಭಾವ ಪರಂಪರೆ' ಎಂಬ ಲೇಖನದಲ್ಲಿ 'ಬಸವಪುರಾಣ'ದ ವೈಶಿಷ್ಟ್ಯವನ್ನು ತಿಳಿಸುತ್ತಾ ಬಸವಣ್ಣ ಮತ್ತು ಇತರೆ ಶರಣರ ಸಂಕ್ಷಿಪ್ತ ಮಾಹಿತಿಯನ್ನು ಒದಗಿಸಿದ್ದಾರೆ. ಬಸವಪುರಾಣವನ್ನು ಅನುಸರಿಸಿ ಬರೆದ ಇತರ ಬಸವ ಕಥಾವಸ್ತುವನ್ನು ಒಳಗೊಂಡಿರುವ ಕೃತಿಗಳ ಮೇಲೆ ಇದು ಹೇಗೆ ಪ್ರಭಾವ ಬೀರಿದೆ ಎಂಬ ಅಂಶಗಳನ್ನು ಚರ್ಚಿಸಿದ್ದಾರೆ. ಮತ್ತು 'ಬಸವಪುರಾಣ' ಕಾವ್ಯದ ಹಸ್ತಪ್ರತಿಗಳು ಮತ್ತು ಅವುಗಳಲ್ಲಿನ ದೋಷಗಳು, ತ್ರುಟಿತವಾಗಿರುವ ಹಸ್ತಪ್ರತಿಗಳನ್ನು ಸಂಗ್ರಹಿಸಿ ಹೊಸದಾಗಿ ಸಂಪಾದನೆ ಮಾಡುವಾಗ ಆದಂತಹ ತೊಂದರೆಗಳ ಬಗ್ಗೆ ವಿವರಿಸಿದ್ದಾರೆ. ಕೊನೆಯಲ್ಲಿ ಗಮಕ ಮತ್ತು ಪ್ರವಚನವನ್ನು ಹಾಡುವ ರಾಗಗಳನ್ನು ೬೦ ಸಂಧಿಗಳಿಗೆ ೬೦ ವಿವಿಧ ರಾಗಗಳ ಮಾಹಿತಿಯನ್ನು ಈ ಲೇಖನದಲ್ಲಿ ಒದಗಿಸಿದ್ದಾರೆ.

**'ಮಾರ್ಗ' (ಸಂಪುಟ-೪) ಎಂ.ಎಂ. ಕಲಬುರ್ಗಿ :** ಈ ಸಂಪುಟದಲ್ಲಿ ಎಂ.ಎಂ. ಕಲಬುರ್ಗಿಯವರು 'ಬಸವಪುರಾಣ : ಶೈವದೀಕ್ಷಾಚಾರ್ಯರ ಮತಾಂತರ' ಎಂಬ ಲೇಖನದಲ್ಲಿ ಈ ಮುಂದಿನಂತೆ ಹೇಳುತ್ತಾರೆ. "ಬಸವಣ್ಣನವರನ್ನು ಕುರಿತು ಕನ್ನಡ ಗ್ರಂಥಗಳಲ್ಲಿ ಹೆಚ್ಚು ಜನಪ್ರಿಯವಾದುದು ಭೀಮಕವಿಯ 'ಬಸವಪುರಾಣ'. ಗುಬ್ಬಿಯ ಮಲ್ಲಣಾರ್ಯರಂಥವರು ಉದ್ದಕ್ಕೂ ಪ್ರವಚನ ಮಾಡುತ್ತಾ ಬಂದಿದ್ದಾರೆ. ಲಿಪಿಕಾರರು ಲಿಪಿಸುತ್ತಲೇ ಬಂದಿದ್ದಾರೆ. ಇಂದಿಗೂ ಹಳ್ಳಿ-ಪಟ್ಟಣಗಳಲ್ಲಿ ಈ ಕೃತಿಯ ಪ್ರವಚನ ಮತ್ತೆ ಮತ್ತೆ ಜರುಗುತ್ತಿವೆ. ಆದರೂ ಇದು ವಿದ್ವಜ್ಜನರ ಅಧ್ಯಯನದಿಂದ ಹೆಚ್ಚು ವಂಚಿತವಾಗಿರುವುದು

ವಿಪರ್ಯಾಸವೇ ಸರಿ. ಈ ಕೊರತೆಯನ್ನು ನೀಗಿಸುವ ನಿಟ್ಟಿನಲ್ಲಿ ತೆಲುಗು ಮತ್ತು ಕನ್ನಡ ಬಸವಪುರಾಣಗಳ ಸಾಂಸ್ಕೃತಿಕ, ಸಾಮಾಜಿಕ, ತೌಲನಿಕ ಅಧ್ಯಯನಗಳು ಜರುಗುವ ಅವಶ್ಯಕತೆಯಿದೆ. ಎಂಬ ಮಾತುಗಳನ್ನು ಹೇಳಿದ್ದಾರೆ. ಬಸವಪುರಾಣದ ವೈಶಿಷ್ಟ್ಯವನ್ನು ಮತ್ತು ಕನ್ನಡ ಸಾಹಿತ್ಯದಲ್ಲಿ ಅದರ ಸ್ಥಾನಮಾನವನ್ನು ವಿವರಿಸಿದ್ದಾರೆ.

**'ವೀರಶೈವ ಪುರಾಣಗಳು : ಒಂದು ಅಧ್ಯಯನ', ಎಸ್. ವಿದ್ಯಾಶಂಕರ :** ಈ ಕೃತಿಯಲ್ಲಿ 'ವೈದಿಕ ಪುರಾಣ', 'ಜೈನ ಪುರಾಣ', 'ಶೈವ ಪುರಾಣ' ಮತ್ತು 'ಪೆರಿಯ ಪುರಾಣ'ಗಳ ಸಮಗ್ರ ಅಧ್ಯಯನವನ್ನು ಕೈಗೊಂಡಿದ್ದಾರೆ. ಈ ಪುರಾಣಗಳಲ್ಲಿ ಪುರಾಣಗಳ ಹಿನ್ನೆಲೆ, ಅವು ಬೆಳೆದುಬಂದ ಬಗೆ ಮುಂತಾದ ಅಂಶಗಳನ್ನು ಚರ್ಚಿಸುವುದರ ಜೊತೆಗೆ ಪುರಾಣ ಕಾವ್ಯಗಳ ವರ್ಣನೆಗಳು, ಅಲಂಕಾರ, ಛಂದಸ್ಸು, ಕಥನ ಕಲೆ, ಅವತಾರ ಕಲ್ಪನೆಗಳು, ತತ್ವಧರ್ಮ, ನೀತಿ, ಕಾವ್ಯಸೌಂದರ್ಯ ಮುಂತಾದ ಅಂಶಗಳ ಕುರಿತು ವಿರಣಾತ್ಮಕವಾಗಿ ಚರ್ಚಿಸಿದ್ದಾರೆ.

**'ಸ್ಥಾವರ-ಜಂಗಮ' (ಚಿದಾನಂದಮೂರ್ತಿ ಸಮಗ್ರ ಸಂಪುಟ-೪), ಚಿದಾನಂದಮೂರ್ತಿ :** ಈ ಸಂಪುಟದಲ್ಲಿ 'ಬಸವಪುರಾಣ ಸಮೀಕ್ಷೆ' ಎಂಬ ಲೇಖನದಲ್ಲಿ ಬಸವಪುರಾಣದ ಮಹತ್ವವನ್ನು ಹೇಳುವುದರ ಮೂಲಕ ಹರಿಹರನ 'ಬಸವರಾಜ ದೇವರ ರಗಳೆ'ಯೊಂದಿಗೆ ಹೋಲಿಕೆ ಮಾಡಿದ್ದಾರೆ. ಈ ಎರಡರ ಭಿನ್ನತೆಗಳನ್ನು ಗುರುತಿಸಿದ್ದಾರೆ. ಹರಿಹರನಲ್ಲಿ ಕಳ್ಳರು ಬಸವನ ತುರುಗಳನ್ನು ಅಪಹರಿಸುವ ಸಂದರ್ಭವಿದ್ದರೆ, ಭೀಮಕವಿಯಲ್ಲಿ ಇಲ್ಲ. ಹಾಗೆಯೇ ಶಿವ ಜಂಗಮನಾಗಿ ಬಂದು ಹೆಣ್ಣೊಬ್ಬಳನ್ನು ಕೇಳುತ್ತಾನೆ. ಆ ಸಮಯದಲ್ಲಿ ಯಾರೂ ದೊರಕದಿದ್ದಾಗ ತನ್ನ ಹೆಂಡತಿಯನ್ನೇ ಅರ್ಪಿಸಲು ಸಿದ್ಧನಾದನಂತೆ ಎಂಬ ಅಂಶ ಹರಿಹರನಲ್ಲಿದೆ. ಭೀಮಕವಿಯಲ್ಲಿ ಇಲ್ಲ. ಬಸವಣ್ಣನ ಮಾವ ಬಲದೇವ ಎಂಬ ಮಾತು ಭೀಮಕವಿಯಲ್ಲಿದೆ; ಹರಿಹರನಲ್ಲಿಲ್ಲ. ಹಾಗೆಯೇ ಪವಾಡಗಳಲ್ಲಿಯೂ ಕೆಲವಾರು ವ್ಯತ್ಯಾಸಗಳಿರುವುದನ್ನು ಗುರುತಿಸಿದ್ದಾರೆ.

**'ಕರ್ನಾಟಕಾಂಧ್ರ ಸಾಹಿತ್ಯ.ಭಾಷಾ ಬಾಂಧವ್ಯ' (ಐದು ಉಪನ್ಯಾಸಗಳು) :** ಕನ್ನಡ-ತೆಲುಗು ಭಾಷಾ ಮತ್ತು ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಐವರು ವಿದ್ವಾಂಸರು ಮಂಡಿಸಿರುವ ಐದು ಉಪನ್ಯಾಸಗಳು ಈ ಕೃತಿಯಲ್ಲಿವೆ. ಇದರಲ್ಲಿ ಕೆಳಗಿನ ಎರಡು ಲೇಖನಗಳು ಈ ಮಹಾಪ್ರಬಂಧಕ್ಕೆ ಪೂರಕವಾಗಿವೆ.

**'ಕನ್ನಡ-ತೆಲುಗು ಭಾಷಾ ಬಾಂಧವ್ಯ' :** ಎಂಬ ವಿಷಯದ ಕುರಿತು ಹಂಪ ನಾಗರಾಜಯ್ಯ ಅವರು ಲೇಖನವನ್ನು ಬರೆದಿದ್ದಾರೆ. ಈ ಲೇಖನದಲ್ಲಿ ಕನ್ನಡ-ತೆಲುಗು ಭಾಷೆಗಳ ನಡುವಿನ ಸಂಬಂಧವು ಶಾತವಾಹನರು, ಚಾಲುಕ್ಯರು, ಚೋಳರು, ಕಾಕತೀಯರು, ವಿಜಯನಗರದವರು ಹೀಗೆ ಮುಂತಾದ ರಾಜ ಮನೆತನಗಳ ಕಾಲದಿಂದ ನಿರಂತರವಾಗಿ ನಡೆದು ಬಂದಿದೆ. ಪಂಪ, ನಾಗವರ್ಮ, ದುರ್ಗಸಿಂಹ, ಭೀಮಕವಿ ಮೊದಲಾದ ಕನ್ನಡ ಕವಿಗಳು ಮೂಲತಃ ತೆಲುಗು ನಾಡಿನವರು. ಅಂದಿನಿಂದಲೂ ಈ ಎರಡು ಭಾಷೆಗಳ ಬಾಂಧವ್ಯ ಬೆಸೆದುಕೊಂಡಿದೆ ಎಂಬ ಮಾತುಗಳನ್ನು ಹೇಳಿದ್ದಾರೆ. ಲಿಪಿ ಮತ್ತು ಕೆಲವು ವ್ಯಾಕರಣಾಂಶಗಳಲ್ಲಿಯೂ ಸಾಮ್ಯತೆಗಳಿರುವುದನ್ನು ಅನೇಕ ಉದಾಹರಣೆಗಳ ಮೂಲಕ ವಿವರಿಸಿದ್ದಾರೆ.

**'ತೆಲುಗಿನ ವೀರಶೈವ ಸಾಹಿತ್ಯ'** : ಎಂ.ಎಸ್. ಮಹಂತಯ್ಯ ಅವರ ಈ ಲೇಖನವು ಅಧ್ಯಯನದ ವಿಷಯಕ್ಕೆ ಸಂಬಂಧಿಸಿದುದಾಗಿದೆ. ಶೈವಧರ್ಮ ಅತೀ ಪ್ರಾಚೀನ ಧರ್ಮ. ಮೆಹೆಂಜೋದಾರ್ ಮತ್ತು ಹರಪ್ಪ ಪಟ್ಟಣಗಳಲ್ಲಿ ದೊರೆತ ಶಿವಲಿಂಗವನ್ನು ಆಧಾರವಾಗಿಟ್ಟುಕೊಂಡು ಸರ್‌ಜಾನ್ ಮಾರ್ಷಲ್ ಅವರು ಶೈವ ಸಂಸ್ಕೃತಿಯು ಎಲ್ಲಾ ಸಂಸ್ಕೃತಿಗಿಂತಲೂ ಪುರಾತನವಾದದ್ದೆಂದು ಅಭಿಪ್ರಾಯಪಟ್ಟಿದ್ದಾರೆ ಎಂಬ ಮಾತುಗಳನ್ನು ಹೇಳುತ್ತಾ, ಶೈವ ಸಾಹಿತ್ಯ ಭಾರತದ ಎಲ್ಲಾ ಕಡೆಯೂ ಇತ್ತು. ತಮಿಳು ನಾಡಿನಲ್ಲಿ ಹೆಚ್ಚು ಪ್ರಚಲಿತದಲ್ಲಿತ್ತು ಎಂಬ ಅಂಶಗಳನ್ನು ಇಲ್ಲಿ ಚರ್ಚಿಸಿದ್ದಾರೆ. ಹಾಗೆಯೇ ತೆಲುಗು ನಾಡಿನಲ್ಲಿ ಈ ವೀರಶೈವ ಸಾಹಿತ್ಯ ಹೇಗೆ ಪ್ರಚಾರದಲ್ಲಿತ್ತು ಎಂಬುದನ್ನು ಚರ್ಚಿಸಿದ್ದಾರೆ. ಕರ್ನಾಟಕದಲ್ಲಿನ ಬಸವಣ್ಣನವರಂತೆ ತೆಲುಗಿನಲ್ಲಿ ಮಲ್ಲಿಕಾರ್ಜುನ ಪಂಡಿತಾರಾಧ್ಯರು ವೀರಶೈವ ಸಾಹಿತ್ಯ ಮತ್ತು ಧರ್ಮವನ್ನು ಬೆಳೆಸಿದ್ದಾರೆ. ಶ್ರೀಪತಿ ಪಂಡಿತ, ಶಿವಲೆಂಕ ಮಂಚನ ಪಂಡಿತ, ಮಲ್ಲಿಕಾರ್ಜುನ ಪಂಡಿತ ಈ ಮೂವರನ್ನು ಪಂಡಿತತ್ರಯರೆಂದು ಕರೆಯುವ ರೂಢಿಯಿದೆ. ತೆಲುಗಿನಲ್ಲಿ ವೀರಶೈವ ಸಾಹಿತ್ಯ ರಚನಾಕಾರರು ಪಾಲ್ಕುರಿಕೆ ಸೋಮನಾಥ, ಇಗಡೂರಿ ರುದ್ರಕವಿ, ಪುಲ್ಲಕವಿ, ಚಕ್ರಪಾಣಿ ರಂಗನಾಥ, ಅನ್ನಮಯ್ಯ, ದುರ್ಜಟ, ತೆನಾಲಿ ರಾಮಲಿಂಗ, ಪಿಡುಪರ್ತಿ ಸೋಮನಾಥ, ಬಸವಕವಿ ಮುಂತಾದ ತೆಲುಗು ವೀರಶೈವ ಕವಿಗಳು ಮತ್ತು ಅವರ ಕೃತಿಗಳ ಪರಿಚಯವನ್ನು ಕೊಟ್ಟಿದ್ದಾರೆ.

**'ಭೀಮಕವಿಯ ಬಸವಪುರಾಣ : ಸಾಂಸ್ಕೃತಿಕ ಅಧ್ಯಯನ', ಬಿ.ಎಸ್. ತಂಬೂಳಿ** : ಈ ಪಿಎಚ್.ಡಿ. ಮಹಾಪ್ರಬಂಧವು ಭೀಮಕವಿಯ ಬಸವಪುರಾಣದ ಸಾಂಸ್ಕೃತಿಕ ಅಧ್ಯಯನವಾಗಿದ್ದು, ಸಾಮಾಜಿಕ ಮತ್ತು ಸಾಂಸ್ಕೃತಿಕವಾಗಿ ಈ ಕಾವ್ಯದಲ್ಲಿ ಬಂದಿರುವ ಅಂಶಗಳ ಕಡೆಗೆ ಸಂಶೋಧಕರು ಬೆಳಕು ಚೆಲ್ಲಿದ್ದಾರೆ. ಪುರಾಣದ ಪರಿಕಲ್ಪನೆಗಳನ್ನು ಆರಂಭದಲ್ಲಿ ಹೇಳುತ್ತಾ ಕವಿಯ ಕಾಲ, ಕೃತಿಗಳನ್ನು ಚರ್ಚಿಸಿದ್ದಾರೆ. ಅನಂತರ ಕಾವ್ಯದಲ್ಲಿನ ನಾಯಕನ ಜನನ, ಬಾಲ್ಯ, ಉಪನಯನ, ವಿವಾಹ, ಮಂತ್ರಿ ಪದವಿ ಕೃತಿ ನಾಯಕನ ಐಕ್ಯದ ವಿಷಯಗಳನ್ನು ಚರ್ಚಿಸಿದ್ದಾರೆ. ಸಾಮಾಜಿಕ ಅಂಶಗಳಾದ ಜಾತಿ ವ್ಯವಸ್ಥೆ, ಸಂಸ್ಕಾರಗಳು, ಸಂಪ್ರದಾಯಗಳು, ಸ್ತ್ರೀಯರ ಸ್ಥಾನಮಾನಗಳನ್ನು ಕುರಿತು ವಿಶ್ಲೇಷಿಸಿದ್ದಾರೆ. ಆ ಕಾಲದ ಆಡಳಿತ ವ್ಯವಸ್ಥೆ ಕಾವ್ಯದಲ್ಲಿ ಹೇಗೆ ಚಿತ್ರಿತಗೊಂಡಿದೆ ಎಂಬುದನ್ನು ವಿವರಿಸಿದ್ದಾರೆ. ಅಷ್ಟಾವರಣಗಳು, ಪಂಚಾಚಾರಗಳು, ಕಲೆ, ಸಂಗೀತ ವಿವಿಧ ರಾಗಗಳನ್ನು ಸಂಶೋಧಕರು ಗುರುತಿಸಿದ್ದಾರೆ.

**'ಪಾಲ್ಕುರಿಕೆ ಸೋಮನಾಥ ಮತ್ತು ಭೀಮಕವಿಯ ಬಸವಪುರಾಣ : ತೌಲನಿಕ ಅಧ್ಯಯನ', ಎಸ್. ಎಂ. ಧನರಾಜ್** : ಈ ಎಂ.ಫಿಲ್. ನಿಬಂಧದಲ್ಲಿ ಕವಿಗಳ ಕಾಲ, ಸ್ಥಳ, ಕೃತಿಗಳ ವಿಶ್ಲೇಷಣೆ, ಪುರಾಣಗಳ ಗುಣಲಕ್ಷಣಗಳನ್ನು ಹೇಳುತ್ತಾ ಬಸವಪುರಾಣದ ಕಥಾವಸ್ತು ಎರಡು ಕೃತಿಗಳಲ್ಲಿ ಹೇಗಿವೆ ಎಂಬುದನ್ನು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ಸನ್ನಿವೇಶಗಳು, ಪಾತ್ರ ಚಿತ್ರಣ, ಪವಾಡಗಳನ್ನು ಕುರಿತು ಚರ್ಚಿಸಿದ್ದಾರೆ ಮತ್ತು ಎರಡೂ ಕೃತಿಗಳ ಮುಖ್ಯವಾದ ಅಂಶಗಳನ್ನು ಕುರಿತು ಚರ್ಚಿಸಲಾಗಿದೆ.

ತೆಲುಗು 'ಬಸವಪುರಾಣಮು'ವಿಗೆ ಸಂಬಂಧಿಸಿದ ಅಧ್ಯಯನಗಳು ಹೆಚ್ಚಾಗಿ ತೆಲುಗು ಭಾಷೆಯಲ್ಲಿ ನಡೆದಿವೆ. ತೆಲುಗು ಸಾಹಿತ್ಯ ಚರಿತ್ರೆಗಳನ್ನು ಬರೆದ ಆರುದ್ರ, ಕುಂದಕೂರಿ ವೀರೇಶಲಿಂಗಂ, ಜಿ.

ನಾಗಯ್ಯ, ಮುಂತಾದವರು ಪಾಲ್ಕುರಿಕೆ ಸೋಮನಾಥ ಮತ್ತು ಅವನ ಕೃತಿಗಳನ್ನು ಕುರಿತು ಚರ್ಚಿಸಿದ್ದಾರೆ. ಹಾಗೆಯೇ ಅನೇಕ ವಿದ್ವಾಂಸರು ತೆಲುಗು ವೀರಶೈವ ಸಾಹಿತ್ಯವನ್ನು ವಿಶ್ಲೇಷಿಸುವ ಸಂದರ್ಭದಲ್ಲಿ ಸೋಮನಾಥನ ಕುರಿತು ಹೇಳಿದ್ದಾರೆ. ತೆಲುಗು ವೀರಶೈವ ಸಾಹಿತ್ಯದ ನಿರ್ಮಾಪಕನಾದ ಸೋಮನಾಥ ಆ ಭಾಷೆಯ ಸಾಹಿತ್ಯದಲ್ಲಿ ತುಂಬಾ ಪ್ರಸಿದ್ಧಿಯನ್ನು ಪಡೆದಿದ್ದಾನೆ. ಆದ್ದರಿಂದ 'ಶಿವಕವಿಯುಗ'ವೆಂದೇ ಕರೆಸಿಕೊಂಡಿರುವ ತೆಲುಗು ವೀರಶೈವ ಸಾಹಿತ್ಯದಲ್ಲಿ ಸೋಮನಾಥನ ಕಾವ್ಯಕೌಶಲ್ಯ, ದೇಸಿ ಚಿಂತನೆಯಂತಹ ಹಲವು ವಿಚಾರಗಳನ್ನು ಸಾಕಷ್ಟು ಚರ್ಚೆಮಾಡಿದ್ದಾರೆ. ಅಂತಹ ಕೆಲವು ಅಧ್ಯಯನಗಳ ಸಂಕ್ಷಿಪ್ತ ಮಾಹಿತಿಯನ್ನು ಮುಂದೆ ನೀಡಲಾಗಿದೆ.

**ಬಂಡಾರು ತಮ್ಮಯ್ಯ ಅವರು 'ಬಸವಪುರಾಣಮು'**ವನ್ನು ಮೊದಲು ಸಂಪಾದಿಸಿದವರು. ಈ ಸಂಪಾದನೆಯ ಕೃತಿಯ ಪೀಠಿಕೆಯಲ್ಲಿ ಸೋಮನಾಥನ ಜೀವನ ವಿಚಾರಗಳನ್ನು ಮತ್ತು ಅವನು ಬರೆದ ಇತರೆ ತೆಲುಗು, ಸಂಸ್ಕೃತ, ಕನ್ನಡ ಕೃತಿಗಳ ಪರಿಚಯವನ್ನು ನೀಡಿದ್ದಾರೆ. ಸೋಮನಾಥನ ಕುರಿತು ಅತೀ ಹೆಚ್ಚು ಅಧ್ಯಯನ ಕೈಗೊಂಡವರಲ್ಲಿ ಇವರು ಮೊದಲಿಗರು. ಪಾಲ್ಕುರಿಕೆ ಸೋಮನಾಥನ ದ್ವಿಪದ ಸಾಹಿತ್ಯ ಛಂದಸ್ಸು, ಅಲಂಕಾರ, ವರ್ಣನೆ ದೇಸಿ ರಚನೆಯ ಸೊಬಗನ್ನು ಅತ್ಯಂತ ಸೂಕ್ಷ್ಮವಾಗಿ ಅಭ್ಯಾಸ ಮಾಡಿ ವಿಶ್ಲೇಷಣೆ ಮಾಡಿದ್ದಾರೆ. ಸೋಮನಾಥನ ಅನುಭವಸಾರಮು, ಚತುರ್ವೇದಸಾರಮು ಮುಂತಾದ ಲಘು ಕೃತಿಗಳನ್ನು ಕೂಡ ಸಂಪಾದಿಸಿ ಉತ್ತಮ ಪ್ರಸ್ತಾವನೆಯೊಂದಿಗೆ ಪ್ರಕಟಿಸಿದ್ದಾರೆ. ಹಾಗೆಯೇ 'ಪಾಲ್ಕುರಿಕೆ ಸೋಮನಾಥ ಕವಿ' ಎಂಬ ಗ್ರಂಥವನ್ನು ಬರೆದಿದ್ದಾರೆ. ಇದರಲ್ಲಿ ಅವನ ಒಟ್ಟಾರೆ ಸಾಹಿತ್ಯವನ್ನು ವಿವರವಾಗಿ ವಿಶ್ಲೇಷಿಸಿದ್ದಾರೆ.

**ಗೂಡ ವೆಂಕಟ ಸುಬ್ರಹ್ಮಣ್ಯಂ ಅವರು ಸಂಪಾದಿಸಿರುವ 'ಬಸವಪುರಾಣಮು'**ವಿನಲ್ಲಿ ಪ್ರಥಮಾಂಧ್ರ ವೀರಶೈವ ಪುರಾಣವಾಗಿ 'ಬಸವಪುರಾಣ'ದ ಪ್ರಾಮುಖ್ಯತೆ, ಪುರಾಣದ ಲಕ್ಷಣಗಳು, ಜೈನ ಪುರಾಣಗಳ ಪ್ರಭಾವ, ಜಾನು ತೆಲುಗಿನ ಬಳಕೆ ಮುಂತಾದ ವಿಚಾರಗಳನ್ನು ವಿಶ್ಲೇಷಿಸಿದ್ದಾರೆ. ಹಾಗೆಯೇ ಕವಿಯ ಜೀವನ ವಿಚಾರಗಳಾದ ಜನ್ಮಸ್ಥಳ, ಕುಲಗೋತ್ರಗಳು ಕಾವ್ಯ ವಿಶಿಷ್ಟತೆಗಳನ್ನು ಕುರಿತು ವಿವರಿಸಿದ್ದಾರೆ.

**ಶ್ರೀಮತಿ ಪಿ. ಯಶೋಧಾ ರೆಡ್ಡಿ ಅವರು ರಚಿಸಿದ 'ದ್ವಿಪದ ವಾಙ್ಮಯಮು'** ಎಂಬ ಕೃತಿಯಲ್ಲಿ ಪಾಲ್ಕುರಿಕೆ ಸೋಮನಾಥನಿಂದ ಆರಂಭವಾದ ದ್ವಿಪದ ಸಾಹಿತ್ಯ ನಂತರ ತೆಲುಗು ಸಾಹಿತ್ಯದಲ್ಲಿ ಬೆಳೆದು ಬಂದ ಬಗೆಯನ್ನು ಗುರುತಿಸಿದ್ದಾರೆ. ವಿಶೇಷವಾಗಿ ಜಾನು ತೆಲುಗಿನಲ್ಲಿ ರಚಿತವಾದ ಮೊದಲ ದ್ವಿಪದ ಪುರಾಣವಾದ 'ಬಸವಪುರಾಣಮು'ವಿನ ದ್ವಿಪದ ಛಂದದ ಲಯ, ವಿನ್ಯಾಸಗಳ ಕುರಿತು ವಿವರವಾಗಿ ಈ ಕೃತಿಯಲ್ಲಿ ತಿಳಿಸಿದ್ದಾರೆ.

**ಸುರವರಂ ಪುಷ್ಪಲತ ಅವರ ಪಿಎಚ್.ಡಿ. ಮಹಾಪ್ರಬಂಧವಾದ 'ಮಧುರಭಕ್ತಿ-ಮುಗ್ಧಭಕ್ತಿ (ಆಂಧ್ರ ಮಹಾಭಾಗವತಂ-ಬಸವಪುರಾಣಮು)'** ಎಂಬ ಗ್ರಂಥದಲ್ಲಿ ಭಕ್ತಿಯ ವಿವಿಧ ಮಾದರಿಗಳನ್ನು ಪರಿಚಯಿಸುತ್ತಾ ಭಾಗವತದ ಮಧುರಭಕ್ತಿಗೂ, ಬಸವಪುರಾಣದ ಶರಣರ ಮುಗ್ಧಭಕ್ತಿಗೂ ಇರುವ ಬೇಧ-ಅಬೇಧಗಳನ್ನು ಗುರುತಿಸಿದ್ದಾರೆ. ಹಾಗೂ ಬಸವಪುರಾಣ ಭಕ್ತಿಕಾವ್ಯ ಇದರಲ್ಲಿ ಬರುವ ಅನೇಕ

ಮುಗ್ಧಭಕ್ತರ ಚರಿತ್ರೆಯನ್ನು ಕುರಿತು ತುಂಬಾ ವಿಸ್ತಾರವಾಗಿ ವಿವರಿಸಿದ್ದಾರೆ. ಮುಗ್ಧಭಕ್ತಿಯ ಅಭಿವ್ಯಕ್ತಿಯ ಸ್ವರೂಪವು 'ಬಸವಪುರಾಣ'ದಲ್ಲಿ ಹೇಗೆ ಚಿತ್ರಿಸಲಾಗಿದೆ ಎಂಬ ವಿಷಯಗಳನ್ನು ಈ ಗ್ರಂಥದಲ್ಲಿ ಚರ್ಚಿಸಿದ್ದಾರೆ.

**ಶಿಷ್ಟಾ ರಾಮಕೃಷ್ಣಶಾಸ್ತ್ರಿ ಅವರು ರಚಿಸಿರುವ 'ವೀರಶೈವಾಂಧ್ರ ವಾಙ್ಮಯಮು'** ಎಂಬ ಗ್ರಂಥದಲ್ಲಿ ಶೈವ, ವೀರಶೈವ ಮತ, ಸಂಪ್ರದಾಯ, ಸಿದ್ಧಾಂತಗಳ ಕುರಿತು ಹೇಳಲಾಗಿದೆ. ಕರ್ನಾಟಕಾಂಧ್ರ ಪ್ರದೇಶಗಳಲ್ಲಿ ವೀರಶೈವ ಮತದ ಪ್ರಾಬಲ್ಯವನ್ನು ಕುರಿತು ಸಂಕ್ಷಿಪ್ತವಾಗಿ ತಿಳಿಸಲಾಗಿದೆ. ಅನಂತರ ತೆಲುಗು ವೀರಶೈವ ಸಾಹಿತ್ಯದ ಮೊದಲ ಕವಿ ಮತ್ತು ಮೊದಲ ವೀರಶೈವ ಮತ ಸ್ಥಾಪನಾಚಾರ್ಯನಾದ ಮಲ್ಲಿಕಾರ್ಜುನ ಪಂಡಿತಾರಾಧ್ಯರಿಂದ ಹಿಡಿದು, ಪಾಲ್ಕುರಿಕೆ ಸೋಮನಾಥ, ಪಿಡುಪರ್ತಿ ಕವಿಗಳು, ಆನಂತರದ ವೀರಶೈವ ಕವಿಗಳು ಮತ್ತು ಅವರ ಕಾವ್ಯಗಳ ಮಹತ್ವವನ್ನು ವಿಶ್ಲೇಷಿಸಲಾಗಿದೆ. ವಿಶೇಷವಾಗಿ ಸೋಮನಾಥನಿಗೆ ಸಂಬಂಧಿಸಿದಂತೆ ಪೂರ್ವಾಪರಗಳನ್ನು ತಿಳಿಸಿ 'ಬಸವಪುರಾಣಮು'ವಿನ ಕುರಿತು ಸಂಕ್ಷಿಪ್ತವಾಗಿ ತಿಳಿಸಲಾಗಿದೆ.

**ಆಚಾರ್ಯ ತಿಮ್ಮವಜ್ಜಲ ಕೋದಂಡರಾಮಯ್ಯ ರಚಿಸಿದ 'ಪಾಲ್ಕುರಿಕೆ ಸೋಮನಾಥಂಡು-ವೀರಶೈವ ಸಿದ್ಧಾಂತಮು'** ಎಂಬ ಕೃತಿಯು ಬಹಳ ಮಹತ್ವದ್ದಾಗಿದೆ. ಇದರಲ್ಲಿ ಸೋಮನಾಥನ ದೇಶಿ ಕವಿತ್ವದ ಕುರಿತು ವಿವರವಾಗಿ ಚರ್ಚಿಸಿದ್ದಾರೆ. ದೇಸಿ ಛಂದಸ್ಸು, ದೇಸಿ ವರ್ಣನೆಗಳು ದೇಸಿ ರಚನಾ ವಿಧಾನಗಳು, ದೇಸಿ ಭಾಷೆ, ದೇಸಿ ವಿಜ್ಞಾನ, ದೇಸಿ ಸಂಪ್ರದಾಯಗಳು, ಸಂಗೀತ ಪರಿಜ್ಞಾನ, ವಿವಿಧ ವಾದ್ಯಗಳು ಮುಂತಾದ ಅಂಶಗಳನ್ನು ವಿವರವಾಗಿ ತಿಳಿಸಿದ್ದಾರೆ. ಸೋಮನಾಥನ ನಂತರ ವೀರಶೈವ ಸಾಹಿತ್ಯದ ಮೇಲೆ ಇವನು ಹೇಗೆ ಪ್ರಭಾವ ಬೀರಿದ ಎಂಬ ಅಂಶಗಳನ್ನು ಇಲ್ಲಿ ವಿವರಿಸಲಾಗಿದೆ.

**ಕೆಲ್ಲಾ ಪರಮೇಶ್ವರಪ್ಪ ಅವರ ಗ್ರಂಥ 'ವೀರಶೈವ ಸಾಹಿತ್ಯ ಸಮತಾದೃಕ್ಪಥಮು'** ಎಂಬ ಗ್ರಂಥವು ತೆಲುಗು ವೀರಶೈವ ಸಾಹಿತ್ಯದ ಪ್ರಮುಖ ಕೃತಿಗಳಲ್ಲಿ ಸಾಮಾಜಿಕ, ಸಾಂಸ್ಕೃತಿಕ ಸಂಗತಿಗಳ ಮೇಲೆ ಬೆಳಕು ಚೆಲ್ಲುತ್ತದೆ. ಈ ಗ್ರಂಥದಲ್ಲಿ ವೀರಶೈವ ಮತವು ವಿಶ್ವಮತವಾಗಿ ಬೆಳೆದುದು, ದಲಿತ ಜನರ ಕಾಯಕ ಸಿದ್ಧಾಂತ, ಮತ ಸಂಸ್ಕರಣ, ರಾಜಕೀಯ ಸಂಸ್ಕೃತಿ, ಶಿವಶರಣರ ಜೀವನ ಚಿತ್ರಣ, ಜನ ಸಂಸ್ಕೃತಿ, ಸ್ತ್ರೀಸಂಸ್ಕೃತಿ ಮುಂತಾದ ಅಂಶಗಳು ತೆಲುಗು ವೀರಶೈವ ಸಾಹಿತ್ಯದಲ್ಲಿ ಹೇಗೆ ಚಿತ್ರಿಸಲ್ಪಟ್ಟಿವೆ ಎಂಬುದನ್ನು ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ಈ ವಿಶ್ಲೇಷಣೆಗೆ 'ಬಸವಪುರಾಣಮು'ವನ್ನು ಅಧ್ಯಯನಕ್ಕೊಳಪಡಿಸಿ ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ.

**ಎನ್. ಮಲ್ಲಿಕಾರ್ಜುನ ಅವರ ಪಿಎಚ್.ಡಿ. ಮಹಾಪ್ರಬಂಧವಾದ 'ಪಾಲ್ಕುರಿಕೆ ಸೋಮನಾಥನ ಕೃತಿಗಳಲ್ಲಿ ಜಾನಪದ ಚಿತ್ರಣ'** ಎಂಬ ಗ್ರಂಥದಲ್ಲಿ ಸೋಮನಾಥನ 'ಬಸವಪುರಾಣಮು', 'ಪಂಡಿತಾರಾಧ್ಯ ಚರಿತ್ರೆ', 'ಅನುಭವಸಾರ' ಮುಂತಾದ ಕೃತಿಗಳಲ್ಲಿ ಜಾನಪದ ಜನಜೀವನಕ್ಕೆ ಸಂಬಂಧಿಸಿದ ಅಂಶಗಳನ್ನು ಕುರಿತು ಬೆಳಕು ಚೆಲ್ಲಿದ್ದಾರೆ. 'ಬಸವಪುರಾಣ'ದಲ್ಲಿ ಬರುವ ವಿವಿಧ ಜಾತಿಯ, ಸಂಸ್ಕೃತಿಯ ಜನರು ತಮ್ಮದೇ ಆದ ಸಂಪ್ರದಾಯಗಳನ್ನು ಅನುಕರಿಸಿ, ಆಚರಿಸಿಕೊಂಡು ಜೀವಿಸಿರುತ್ತಾರೆ. ಮುಖ್ಯವಾಗಿ

ಇಲ್ಲಿನ ದಲಿತ ಶರಣರ ಜೀವನವು ಇಂತಹ ಸಂಪ್ರದಾಯ ಬದ್ಧವಾಗಿರುತ್ತದೆ. ಅಂತಹ ಶರಣರ ಜಾನಪದ ಕೌಶಲ್ಯಗಳ ಅಭಿವ್ಯಕ್ತಿಯನ್ನು ಇಲ್ಲಿ ವಿಶ್ಲೇಷಣೆಗೊಳಪಡಿಸಲಾಗಿದೆ. ಜಾನಪದ ಆಟಗಳು, ಕುಣಿತಗಳು, ಹಾಡುಗಳು, ಹಬ್ಬಗಳು, ನಂಬಿಕೆ, ಸಂಪ್ರದಾಯ, ಒಗಟು, ಒಡಪು ಮುಂತಾದ ಜಾನಪದಕ್ಕೆ ಸಂಬಂಧಿಸಿದ ಅಂಶಗಳನ್ನು ಇಲ್ಲಿ ವಿವರಿಸಲಾಗಿದೆ.

**ಸಿ.ಎಚ್. ಶ್ಯಾಮಲ ಅವರ ಎಂ.ಫಿಲ್. ಪ್ರಬಂಧ 'ಬಸವಪುರಾಣದಲ್ಲಿನ ಸ್ತ್ರೀಯರು'** ಎಂಬುದಾಗಿದೆ. 'ಬಸವಪುರಾಣ'ದಲ್ಲಿ ಗಂಗಾಂಬಿಕೆಯಿಂದ ಹಿಡಿದು ಅಲ್ಲಿ ಬರುವ ಸಾಮಾನ್ಯ ಸ್ತ್ರೀಯರವರೆಗೂ ಎಲ್ಲಾ ವರ್ಗದ ಮಹಿಳೆಯರ ಜೀವನ, ಅವರ ಪಾತ್ರ ಹೇಗೆ ಚಿತ್ರಣಗೊಂಡಿದೆ ಎಂಬುದನ್ನು ವಿವರಿಸಿದ್ದಾರೆ. ಇಲ್ಲಿ ವಿವಿಧ ವರ್ಗಕ್ಕೆ ಸೇರಿದ ಸ್ತ್ರೀಯರಿದ್ದಾರೆ. ಹಲವು ಕಟ್ಟುಪಾಡುಗಳಿಗೆ ಬದ್ಧರಾಗಿ ಜೀವಿಸುವ ಸ್ತ್ರೀಯರಿದ್ದಾರೆ, ವೇಶ್ಯೆಯರಿದ್ದಾರೆ, ಮಡಿವಂತರಿದ್ದಾರೆ, ದಲಿತರಿದ್ದಾರೆ. ಇವರನ್ನೆಲ್ಲಾ ಕವಿ ಹೇಗೆ ತನ್ನ ಪುರಾಣದಲ್ಲಿ ಚಿತ್ರಿಸಿದ್ದಾನೆ ಎಂಬುದರ ಜೊತೆಗೆ ಆ ಕಾಲದ ಸ್ತ್ರೀಯರಿಗಿದ್ದ ಸ್ಥಾನಮಾನವನ್ನು ಕುರಿತು ವಿವರಿಸಿದ್ದಾರೆ.

ಕನ್ನಡ ಹಾಗೂ ತೆಲುಗಿನಲ್ಲಿ ಪ್ರಧಾನವಾಗಿ ಮೇಲಿನ ಮಾದರಿಯ ಅಧ್ಯಯನಗಳು ನಡೆದಿವೆ. ಎರಡೂ ಭಾಷೆಯ 'ಬಸವಪುರಾಣ'ಗಳನ್ನು ಕುರಿತಂತೆ ತೌಲನಿಕವಾಗಿ ಸಮಗ್ರವಾದ ಅಧ್ಯಯನ ಇದುವರೆಗೂ ನಡೆದಿಲ್ಲದಿರುವುದರಿಂದ ಇವುಗಳ ತೌಲನಿಕ ಅಧ್ಯಯವನ್ನು ಸಮಾಜೋ–ಸಾಂಸ್ಕೃತಿಕ ಭಾಷಾಂತರ ಚೌಕಟ್ಟಿನಲ್ಲಿ ಮಾಡುವ ಅಗತ್ಯವನ್ನು ಮನಗಂಡು ಅಧ್ಯಯನ ಕೈಗೊಳ್ಳಲಾಗಿದೆ. ಇದರಿಂದ ಎರಡು ಭಾಷೆಯ, ಎರಡು ಸಂಸ್ಕೃತಿಗಳ ಕೊಡುಕೊಳುಗೆ ಮತ್ತು ಸಾಮರಸ್ಯವನ್ನು, ಕಾವ್ಯ ಮಹತ್ವವನ್ನು ತಿಳಿಯುವಲ್ಲಿ ಉಪಯುಕ್ತವಾಗಿದೆ.

# ಅಧ್ಯಾಯ – ೨

# ಕವಿ, ಕಾವ್ಯ, ಕಥಾವಸ್ತುಗಳ ಸ್ವರೂಪ ವಿವೇಚನೆ

## ಅಧ್ಯಾಯ – ಎರಡು

# ಕವಿ, ಕಾವ್ಯ, ಕಥಾವಸ್ತುಗಳ ಸ್ವರೂಪ ವಿವೇಚನೆ

ಸಾಹಿತ್ಯ ಸಂಶೋಧನೆಯಲ್ಲಿ ಕಾವ್ಯಗಳು ಅತ್ಯಂತ ಪ್ರಮುಖ ಅಧ್ಯಯನ ವಿಷಯಗಳಾಗಿವೆ. ಕಾವ್ಯಗಳನ್ನು ರಚನೆ ಮಾಡುವ ಕವಿಗಳು ತಾವು ರಚಿಸುವ ಕಾವ್ಯಗಳಲ್ಲಿ ಆ ಕಾಲದ ಜನ ಜೀವನ, ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಸಂಗತಿಗಳನ್ನು ತಮ್ಮ ಕಥೆಯ ಜೊತೆ ಜೊತೆಗೆ ಚಿತ್ರಿಸಿರುತ್ತಾರೆ. ಇಂತಹ ಕಾವ್ಯಾಧ್ಯಯನಗಳ ಮೂಲಕ ಕಳೆದುಹೋದ ನಮ್ಮ ಜೀವನ ಸಂಸ್ಕೃತಿಯ ಹುಡುಕಾಟವನ್ನು ಮಾಡಬಹುದು. ಗತಕಾಲದ ಅನೇಕ ವಿಚಾರಗಳನ್ನು ತಿಳಿಸುವ ಕಾವ್ಯಗಳ ಅಧ್ಯಯನ ಎಷ್ಟು ಪ್ರಾಮುಖ್ಯವೋ ಆ ಕಾವ್ಯಗಳನ್ನು ರಚನೆ ಮಾಡಿದ ಕವಿಗಳೂ, ಅವರ ಹಿನ್ನೆಲೆ, ಸಾಮಾಜಿಕ ಬದುಕು, ಮುಂತಾದ ವಿಚಾರಗಳು ಅಷ್ಟೇ ಪ್ರಮುಖವಾದವುಗಳಾಗಿವೆ. ಈ ಹಿನ್ನೆಲೆಯಲ್ಲಿ 'ಬಸವಪುರಾಣ'ಗಳನ್ನು ರಚನೆ ಮಾಡಿ ಹನ್ನೆರಡನೆಯ ಶತಮಾನದ ಶಿವಶರಣರ ಚಳವಳಿಯ ಭವ್ಯ ಚರಿತ್ರೆಯನ್ನು ಕಟ್ಟಿಕೊಟ್ಟಿರುವ ತೆಲುಗಿನ ಪಾಲ್ಕುರಿಕೆ ಸೋಮನಾಥ ಮತ್ತು ಕನ್ನಡದ ಭೀಮಕವಿ ಅವರ ಜೀವನ ಮತ್ತು ಹಿನ್ನೆಲೆಯನ್ನು ತಿಳಿಯುವುದು ಮುಖ್ಯವಾಗಿದೆ.

### ೨.೧. ಪಾಲ್ಕುರಿಕೆ ಸೋಮನಾಥ :

ವೀರಶೈವ ಪುರಾಣ ಪರಂಪರೆಯ ಪ್ರವರ್ತಕ ಪಾಲ್ಕುರಿಕೆ ಸೋಮನಾಥನು ಆಂಧ್ರಪ್ರದೇಶದ ಪ್ರಮುಖ ವೀರಶೈವ ಕವಿ. ಮಾರ್ಗ ಸಾಹಿತ್ಯವು ಅತ್ಯಂತ ಪರಿಣಾಮಕಾರಿಯಾಗಿ ಇದ್ದಂತಹ ಸಂದರ್ಭದಲ್ಲಿ ಸಂಸ್ಕೃತ ಕಾವ್ಯ ಸಂಪ್ರದಾಯಗಳನ್ನು ತಿರಸ್ಕರಿಸಿ ಜನಸಾಮಾನ್ಯರಿಗೂ ಅರ್ಥವಾಗುವಂತಹ 'ಸರಸದಿ ಮೆರೆಯುವ ಜಾನು ತೆಲುಗು' ಪ್ರಕಾರವಾದ 'ದ್ವಿಪದ' ಛಂದಸ್ಸಿನಲ್ಲಿ ಪುರಾಣ ರಚಿಸಿ ಹೊಸ ಕಾವ್ಯ ಪರಂಪರೆಗೆ ನಾಂದಿ ಹಾಡಿದನು. ಜೊತೆಗೆ ಶತಕ, ಉದಾಹರಣ, ಗೇಯ ಮುಂತಾದ ಪ್ರಕಾರಗಳನ್ನು ಸೃಷ್ಟಿಸಿ ಈ ಕಾವ್ಯ ಪ್ರಕಾರಗಳಿಗೆ ಮೊದಲಿಗನಾಗಿದ್ದಾನೆ. ಇವನ ನಂತರದ ವೀರಶೈವ ಕವಿಗಳು ತಮ್ಮ ಕಾವ್ಯಗಳಲ್ಲಿ ಇವನನ್ನು ವಿಶೇಷವಾಗಿ ನೆನಪಿಸಿಕೊಳ್ಳುವುದರ ಜೊತೆಗೆ ಸಣ್ಣಪುಟ್ಟ ಗ್ರಂಥಗಳನ್ನು ರಚಿಸಿ

ಇವನಿಗೆ ಅರ್ಪಿಸಿದ್ದಾರೆ. ವೀರಶೈವರೇ ಅಲ್ಲದೆ ತೆಲುಗಿನ ಪೋತನ, ಶ್ರೀನಾಥ, ದೂರ್ಜಟಿ ಮೊದಲಾದ ಕವಿಗಳು ಕೂಡ ಈತನ ಕಾವ್ಯ ರಚನಾ ಶೈಲಿಗಳನ್ನು ಅನುಸರಿಸಿದ್ದಾರೆ. ಹಾಗೆಯೇ ಸಂಸ್ಕೃತ ಮತ್ತು ಕನ್ನಡದ ಕೆಲವು ಕವಿಗಳೂ ಈತನ ಪ್ರಭಾವದಿಂದ ಬೆಳೆದವರಾಗಿದ್ದಾರೆ. ಕನ್ನಡದ ವಿರಕ್ತ ತೋಂಟದಾರ್ಯ ಎಂಬ ಕವಿ 'ಪಾಲ್ಕುರಿಕೆ ಸೋಮೇಶ್ವರ ಪುರಾಣ' ಎಂಬ ಕಾವ್ಯವನ್ನೇ ರಚನೆ ಮಾಡಿದ್ದಾನೆ. ಹೀಗೆ ಪಾಲ್ಕುರಿಕೆ ಸೋಮನಾಥನು ಸೋದರ ಭಾಷೆಗಳಲ್ಲಿ ಸ್ವತಃ ಕೃತಿ ರಚನೆ ಮಾಡುವುದರ ಮೂಲಕ ಆಯಾ ಸಾಹಿತ್ಯದ ಇತರ ಕವಿಗಳಿಗೆ, ಸ್ಫೂರ್ತಿಯಾಗಿ ಮಾರ್ಗದರ್ಶಿಯೂ ಆಗಿದ್ದಾನೆ.

ಸೋಮನಾಥ ಕವಿಯು ತೆಲುಗು, ಸಂಸ್ಕೃತ, ಕನ್ನಡ ಭಾಷೆಗಳಲ್ಲಿ ಉತ್ತಮ ಪಾಂಡಿತ್ಯವನ್ನು ಗಳಿಸಿಕೊಂಡಿದ್ದನು. ಈತನು ಈ ಮೂರು ಭಾಷೆಗಳಲ್ಲಿ ಕಾವ್ಯಗಳನ್ನು ರಚನೆ ಮಾಡಿ ತ್ರಿಭಾಷಾ ಕವಿಯೆಂದು ಗುರುತಿಸಿಕೊಂಡಿದ್ದಾನೆ. ವೀರಶೈವ ಮತದ ಪ್ರಸಾರ ಮತ್ತು ಅದರ ಉನ್ನತಿಯನ್ನೇ ಪ್ರಧಾನ ಧ್ಯೇಯವನ್ನಾಗಿಸಿಕೊಂಡಿದ್ದ ಸೋಮನಾಥನು ಅದನ್ನು ನಿರಂತರವಾಗಿ ಕಾಪಾಡಲು ಮತ್ತು ಬೆಳೆಸಲು ಸಾಹಿತ್ಯದ ಮಾರ್ಗವನ್ನು ಅನುಸರಿಸಿದ. ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ವೀರಶೈವ ಮತಾಚರಣೆಯ ಪ್ರಮುಖ ಅಂಶಗಳನ್ನು ಹೇಳುತ್ತಾ ಶಿವಭಕ್ತರ ಚರಿತ್ರೆಗಳನ್ನು ರಚಿಸಿದನು. ಮತ್ತು ಅವರು ರೂಪಿಸಿಕೊಂಡಿದ್ದ ಜೀವನ ವಿಧಾನಗಳನ್ನು ಅನುಸರಿಸುತ್ತಿದ್ದ ಮಾರ್ಗಗಳನ್ನು ಜನಸಾಮಾನ್ಯರಿಗೆ ತಿಳಿಸುವ ಸಲುವಾಗಿ ಅವರ ಚರಿತ್ರೆಗಳನ್ನು ರಚನೆ ಮಾಡುತ್ತಾ ಬಂದನು. ಇಂತಹ ಶರಣರ ಬದುಕನ್ನು ನೋಡಿದ ಮತ್ತು ತಿಳಿದ ಜನಸಾಮಾನ್ಯರು ಆ ಪುಣ್ಯಪುರುಷರ ಅನುಯಾಯಿಗಳಾಗಿ ವೀರಶೈವ ಮತಾವಲಂಬಿಗಳಾಗಿ ಆ ಭಕ್ತಿ ಮತವನ್ನು ಸ್ವೀಕರಿಸಿ ಶಿವನ ಭಕ್ತಿಯಲ್ಲಿ ಮುಳುಗುತ್ತಿದ್ದರು. ಹೀಗೆ ತನ್ನ ಧರ್ಮವನ್ನು ಕಾಪಾಡುವ ಮತ್ತು ಉನ್ನತೀಕರಿಸುವ ಕೆಲಸದಲ್ಲಿ ತೊಡಗಿದ ಪಾಲ್ಕುರಿಕೆ ಸೋಮನಾಥನು ತೆಲುಗು ಸಾಹಿತ್ಯದಲ್ಲಿ ವೀರಶೈವ ಯುಗದ ಪ್ರವರ್ತಕನಾಗಿ ಮೊದಲ ವೀರಶೈವ ಕವಿಯಾಗಿದ್ದಾನೆ.

**ಸ್ಥಳ :**

ಪಾಲ್ಕುರಿಕೆ ಸೋಮನಾಥನ ಸ್ಥಳದ ವಿಚಾರವಾಗಿ ಬೇರೆ ಬೇರೆ ಅಭಿಪ್ರಾಯಗಳಿವೆ. ಪಾಲ್ಕುರಿಕೆ ಎಂಬ ಗ್ರಾಮವು ತುಮಕೂರು ಜಿಲ್ಲೆಯಲ್ಲಿ ಬರುವ ಪಾಲ್ಕುರಿಕೆ ಎಂದು ಕೆಲವರು ಅಭಿಪ್ರಾಯಪಟ್ಟರೆ, ಇನ್ನು ಕೆಲವರು ಪಾಲ್ಕುರಿಕೆ ಎಂಬುದು ಆಂಧ್ರಪ್ರದೇಶದ ಓರಂಗಲ್‌ಗೆ ಸಮೀಪದಲ್ಲಿರುವ ಜನಗಾಮ ತಾಲೂಕಿಗೆ ಸೇರಿದ ಗ್ರಾಮವಾಗಿದೆ ಎಂದು ಹೇಳುವರು. ಬಹುಜನ ವಿದ್ವಾಂಸರು ಒಪ್ಪಿರುವಂತೆ ಪಾಲ್ಕುರಿಕೆ ಸೋಮನಾಥನ ಜನ್ಮಸ್ಥಳವು ಕರ್ನಾಟಕದ ಪಾಲ್ಕುರಿಕೆಯಲ್ಲ, ಆಂಧ್ರಪ್ರದೇಶದ ಶ್ರೀಶೈಲಕ್ಕೆ ಈಶಾನ್ಯ ದಿಕ್ಕಿನಲ್ಲಿರುವ ಓರಂಗಲ್‌ಗೆ ೧೨ ಕಿ.ಮೀ. ದೂರದಲ್ಲಿರುವ ಪಾಲ್ಕುರಿಕೆ ಎಂಬ ಗ್ರಾಮ. ಈ ವಿಷಯವನ್ನು ಆಂಧ್ರ ವೀರಶೈವ ಕಾವ್ಯಗಳು ಮತ್ತು ಕನ್ನಡ ವೀರಶೈವ ಕಾವ್ಯಗಳು ಸ್ಪಷ್ಟಪಡಿಸುತ್ತವೆ. 'ಪಾಲ್ಕುರಿಕೆ ಸೋಮೇಶ್ವರ ಪುರಾಣ'ವನ್ನು ರಚನೆ ಮಾಡಿದ ವಿರಕ್ತ ತೋಂಟದಾರ್ಯನು ಕೂಡ 'ಪಾಲ್ಕುರಿಕೆ' ಎಂಬುದು ಆಂಧ್ರಪ್ರದೇಶಕ್ಕೆ ಸೇರಿದ ಗ್ರಾಮ ಎಂಬುದನ್ನು ಹೇಳುತ್ತಾನೆ. ಹೀಗೆ ಆಂಧ್ರಪ್ರದೇಶದಲ್ಲಿ ಜನಿಸಿದ ಪಾಲ್ಕುರಿಕೆ ಸೋಮನಾಥನು ತನ್ನ ಕೊನೆಯ ದಿನಗಳನ್ನು ಕರ್ನಾಟಕದಲ್ಲಿನ

ಬೆಂಗಳೂರಿಗೆ ಸಮೀಪದಲ್ಲಿರುವ ಮಾಗಡಿ ತಾಲೂಕಿನ 'ಕಲ್ಯ' ಎಂಬ ಗ್ರಾಮದಲ್ಲಿ ಕಳೆದು ಕೊನೆಗೆ ಇಲ್ಲಿಯೇ ಲಿಂಗೈಕ್ಯರಾಗಿದ್ದಾರೆ. ಇದಕ್ಕೆ ನಿದರ್ಶನವಾಗಿ ಇಲ್ಲಿ ಪಾಲ್ಕುರಿಕೆ ಸೋಮನಾಥನ ಸಮಾಧಿ ಸ್ಥಳವಿದೆ.

**ಕಾಲ :**

ಪಾಲ್ಕುರಿಕೆ ಸೋಮನಾಥನು ಯಾವುದೇ ಕೃತಿಯಲ್ಲಿ ತನ್ನ ಕಾಲದ ವಿಚಾರವಾಗಿ ತಿಳಿಸಿಲ್ಲವಾದ್ದರಿಂದ ಇವನ ಕಾಲದ ಕುರಿತು ಹಲವು ಅಭಿಪ್ರಾಯಗಳಿವೆ. ಕನ್ನಡ ಹಾಗೂ ತೆಲುಗು ವಿದ್ವಾಂಸರು ಇವನ ಕಾಲವನ್ನು ಕುರಿತು ಹೀಗೆ ಹೇಳಿದ್ದಾರೆ.

* ಕನ್ನಡದಲ್ಲಿ 'ಉದ್ಭಟ' ಕಾವ್ಯ ಬರೆದ ಸೋಮರಾಜು ಎಂಬ ಕವಿ ತನ್ನ ಕಾವ್ಯದ ಪೂರ್ವ ಕವಿ ಸ್ತುತಿಯಲ್ಲಿ 'ವೃಷಭಸ್ತಾವಾಮರ ಮಹಿಜಾರಾಮನಂ ಸೋಮನಂ' ಎಂದು ಹೇಳಿದ್ದಾನೆ. ಕನ್ನಡದಲ್ಲಾಗಲೀ, ತೆಲುಗಿನಲ್ಲಾಗಲೀ 'ವೃಷಭಸ್ತವಮು' ರಚನೆ ಮಾಡಿದವರಲ್ಲಿ ಸೋಮನಾಥನನ್ನು ಬಿಟ್ಟರೆ ಬೇರೆ ಯಾರೂ ಇಲ್ಲವಾದ್ದರಿಂದ ಅದು ಪಾಲ್ಕುರಿಕೆ ಸೋಮನಾಥನನ್ನೇ ಕುರಿತು ಹೇಳಿರುವುದಾಗಿದೆ. ಸೋಮನಾಥನ 'ವೃಷಾದಿಪ ಶತಕ'ವೇ ಆ ವೃಷಭಸ್ತವಮು ಆಗಿರಬಹುದೆಂದು ಊಹಿಸಲಾಗಿದೆ. (ಪಿಂಗಳಿ ಲಕ್ಷ್ಮಿಕಾಂತಂ, ಪುಟ–೧೨೩) 'ಉದ್ಭಟ' ಕಾವ್ಯ ರಚನೆ ಮಾಡಿದ ಸೋಮರಾಜನ ಕಾಲ ಕ್ರಿ.ಶ. ೧೨೨೨ ಆಗಿರುವುದರಿಂದ ಪಾಲ್ಕುರಿಕೆ ಸೋಮನಾಥನು ಇವನಿಗೂ ಪೂರ್ವದವನಿರಬೇಕು.

* ಸೋಮನಾಥನ 'ಬಸವಪುರಾಣ' ರಚನೆಗೆ ಪ್ರೋತ್ಸಾಹಿಸಿದ ಕರಸ್ಥಲಿ ಸೋಮನಾಥಯ್ಯನ ಗುರುವಾದ ಮಲ್ಲಿಕಾರ್ಜುನ ಪಂಡಿತಾರಾಧ್ಯರು ಕ್ರಿ.ಶ. ೧೧೭೦ರಲ್ಲಿ ಜೀವಿಸಿದ್ದರು ಎಂಬುದು ವಿದ್ವಾಂಸರ ಅಭಿಪ್ರಾಯ. ಈ ಪಂಡಿತನ ಶಿಷ್ಯನಾದ ಕರಸ್ಥಲಿ ಸೋಮನಾಥನು ಪಾಲ್ಕುರಿಕೆ ಸೋಮನಾಥನ ಸಮಕಾಲೀನನಾಗಿದ್ದಾನೆ. ಹಾಗಾದಾಗ ೧೧೭೦ಕ್ಕಿಂತ ಮುಂಚೆ 'ಬಸವಪುರಾಣ' ರಚನೆಯಾಗಿಲ್ಲವೆಂಬುದು ಸ್ಪಷ್ಟ.

* 'ಬಸವಪುರಾಣ' ಕಥೆಯನ್ನು ಹೇಳಿದವರಲ್ಲೊಬ್ಬಳಾದ ದೋಚಮಾಂಬೆಯು ಕ್ರಿ.ಶ. ೧೨೯೦ರ ನೀಲಗಂಗವರ ಶಾಸನದಲ್ಲಿ ಉಕ್ತಳಾಗಿದ್ದಾಳೆ. (ನಾರಾಯಣ ಪಿ.ವಿ., ಪುಟ–೪೨೪) ಹೀಗಾಗಿ ಅವನು ೧೨೯೦ಕ್ಕೆ ಮುಂಚೆಯೇ ಕಾವ್ಯ ರಚನೆ ಮಾಡಿರಬೇಕು.

ಎಸ್. ವಿದ್ಯಾಶಂಕರ ಅವರು ತಾವು ಸಂಪಾದಿಸಿರುವ 'ಬಸವಪುರಾಣ' ಕಾವ್ಯದ ಪೀಠಿಕೆಯಲ್ಲಿ (ಪುಟ–೧೦–೧೧) ಪಾಶ್ಚಾತ್ಯ, ತೆಲುಗು ಮತ್ತು ಕನ್ನಡ ವಿದ್ವಾಂಸರು ಚರ್ಚಿಸಿರುವ ವಿಚಾರಗಳನ್ನು ಮುಂದಿನಂತೆ ಪಟ್ಟಿ ಮಾಡಿದ್ದಾರೆ.

| | |
|---|---|
| ೧. ಇ.ಪಿ. ರೈಸ್ | –ಕ್ರಿ.ಶ. ೧೧೯೫ |
| ೨. ಸಿ.ಪಿ. ಬ್ರೌನ್ | –ಕ್ರಿ.ಶ. ೧೩೦೦ |
| ೩. ಫರ್ಡಿನಾಂಡ್ ಕಿಟ್ಟೆಲ್ | –ಕ್ರಿ.ಶ. ೧೩೦೦ |

೪. ವೇಟೂರಿ ಪ್ರಭಾಕರಶಾಸ್ತ್ರೀ ('ಬಸವಪುರಾಣಮು', ಪೀಠಿಕೆ) –ಕ್ರಿ.ಶ. ೧೨೦೦
೫. ಭಂಡಾರು ತಮ್ಮಯ್ಯ (ಪಾಲ್ಕುರಿಕೆ ಸೋಮನಾಥ ಕವಿ) –ಕ್ರಿ.ಶ. ೧೬೦೦–೧೨೪೦
೬. ಎನ್. ವೆಂಕಟರಾವ್ ('ಬಸವಪುರಾಣಮು', ಪೀಠಿಕೆ) –ಕ್ರಿ.ಶ. ೧೧೯೦–೧೨೬೦
೭. ಚಿಲಕೂರಿ ನಾರಾಯಣರಾವ್ (ಪಂಡಿತಾರಾಧ್ಯ ಚರಿತ, ಪೀಠಿಕೆ)–ಕ್ರಿ.ಶ. ೧೨೪೭–೧೨೮೦
೮. ಎನ್. ವೆಂಕಟರಮಣಯ್ಯ –ಕ್ರಿ.ಶ. ೧೩೪೦
(ಪಾಲ್ಕುರಿಕೆ ಸೋಮನಾಥುಡು ಎಪ್ಪತಿವಾಡು)
೯. ವೀರೇಶಲಿಂಗಂ ಪಂತಲು –ಕ್ರಿ.ಶ. ೧೧೯೦
೧೦. ಸೋಮನಾಥ ಶರ್ಮ –ಕ್ರಿ.ಶ. ೧೩೦೦
೧೧. ಆರ್. ನರಸಿಂಹಾಚಾರ್ಯ ('ಕರ್ನಾಟಕ ಕವಿಚರಿತೆ') –ಕ್ರಿ.ಶ. ೧೧೯೫
೧೨. ರಂ.ಶ್ರೀ. ಮುಗಳಿ ('ಕನ್ನಡ ಸಾಹಿತ್ಯ ಚರಿತ್ರೆ') –ಕ್ರಿ.ಶ. ೧೨೦೦
೧೩. ಡಿ.ಎಲ್. ನರಸಿಂಹಾಚಾರ್ –ಕ್ರಿ.ಶ. ೧೩೦೫

ಮೇಲಿನ ಎಲ್ಲಾ ವಿದ್ವಾಂಸರ ಅಭಿಪ್ರಾಯಗಳನ್ನು ಗಮನಿಸಿದಾಗ ಪಾಲ್ಕುರಿಕೆ ಸೋಮನಾಥನು ಹನ್ನೆರಡನೆಯ ಶತಮಾನದ ಮಧ್ಯಭಾಗ ಅಥವಾ ಕೊನೆಯ ಭಾಗದಲ್ಲಿ ಜೀವಿಸಿದ್ದನೆಂಬುದು ಸ್ಪಷ್ಟವಾಗುತ್ತದೆ. ಪಾಲ್ಕುರಿಕೆ ಸೋಮನಾಥನ ಕುರಿತು ಸಮಗ್ರವಾಗಿ ಅಧ್ಯಯನ ಮಾಡಿದ ಶ್ರೀ ಭಂಡಾರು ತಮ್ಮಯ್ಯನವರ ಅಭಿಪ್ರಾಯವನ್ನೇ ಪ್ರಸ್ತುತ ತೆಲುಗು ಸಾಹಿತ್ಯ ವಲಯದಲ್ಲಿ ಒಪ್ಪಿದ್ದರಿಂದ ಪಾಲ್ಕುರಿಕೆ ಸೋಮನಾಥನು ಕ್ರಿ.ಶ. ೧೧೬೦ರಲ್ಲಿ ಜನಿಸಿ ಕ್ರಿ.ಶ. ೧೨೨೦ರ ಸುಮಾರಿಗೆ ಲಿಂಗೈಕ್ಯರಾಗಿರಬಹುದೆಂದು ನಿರ್ಧರಿಸಲಾಗಿದೆ.

**ಕೃತಿಗಳು :**

ಹದಿನೇಳನೆಯ ಶತಮಾನದ ತೆಲುಗಿನ ಮತ್ತೊಬ್ಬ ವೀರಶೈವ ಕವಿ ಪಿಡುವರ್ತಿ ಸೋಮನಾಥನು ತನ್ನ ಪದ್ಯ 'ಬಸವ ಪುರಾಣಮು'ದಲ್ಲಿ ಪಾಲ್ಕುರಿಕೆ ಸೋಮನಾಥನ ಕೃತಿಗಳ ಪಟ್ಟಿಯನ್ನು ನೀಡಿದ್ದಾನೆ.

> "ಬಸವ ಪುರಾಣಂಬು, ಪಂಡಿತಾರಾಧ್ಯಲ ಚರಿತಂಬು ನನುಭವಸಾರಮನು ಚ
> ತುರ್ವೇದಸಾರಸೂಕ್ತುಲು, ಸೋಮನಾಥ ಭಾಷ್ಯಮ್ಮು ಶ್ರೀರುದ್ರಭಾಷ್ಯಂಬುಬಸವ।
> ರಗಡ ಗಂಗೋತ್ಪತ್ತಿ ರಗಡ ಶ್ರೀ ಬಸವಾಢ್ಯ ರಗಡಮು, ಸದ್ಗುರು ರಗಡ, ಚೆನ್ನ
> ಮಲ್ಲು ಸೀಸಮುಲು ನಮಸ್ಕಾರ ಗದ್ಯ, ವೃಷಾಧಿಪ ಶತಕಂಬುನಕ್ಷರಾಂಕ"॥

> "ಗದ್ಯಪದ್ಯಮುಲು ಪಂಚ ಪ್ರಕಾರಗದ್ಯ
> ಯಷ್ಟಕಮು ಪಂಚಕಮು ನುದಾಹರಣಯುಗಮ್ಮು।
> ನಾದಿಯಾಗುಕೃತುಲು ಭಕ್ತಿ ಹಿತಾರ್ಥಬುದ್ಧಿ

ಜೆಪ್ಪೆ ನವಿಭಕ್ತ ಸಭಲಲೋ ಜೆಲ್ಲುಚುಂಡು"॥

(ಪೆದ್ದಮಟಮು ರಾಚವೀರ ದೇವರ (ಸಂ) ಆ.೧, ಪ.೩೩,೩೪)

ಇವಲ್ಲದೆ ಸಂಸ್ಕೃತ ಮತ್ತು ಕನ್ನಡ ಭಾಷೆಗಳ ಕೃತಿಗಳೂ ಸೇರಿ ಸುಮಾರು ಮೂವತ್ತು ಕೃತಿಗಳನ್ನು ರಚಿಸಿರುವುದಾಗಿ, ಅವುಗಳಲ್ಲಿ ತೆಲುಗು ಕೃತಿಗಳೇ ಹೆಚ್ಚಾಗಿವೆ ಎಂದು ತೆಲುಗು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಪಾಲ್ಕುರಿಕೆ ಸೋಮನಾಥನ ಈ ಮೇಲಿನ ಕೃತಿಗಳನ್ನು ಭಾಷಾ ದೃಷ್ಟಿಯಿಂದ ತೆಲುಗು ಕೃತಿಗಳು, ಸಂಸ್ಕೃತ ಕೃತಿಗಳು, ಕನ್ನಡ ಕೃತಿಗಳೆಂದು ಮೂರು ಭಾಗಗಳಲ್ಲಿ ವಿಂಗಡಿಸಬಹುದು.

**೧. ತೆಲುಗು ಕೃತಿಗಳು :**

ಛಂಧಸ್ಸಿನ ದೃಷ್ಟಿಯಿಂದ ಸೋಮನಾಥನ ತೆಲುಗು ಕೃತಿಗಳನ್ನು ಪದ್ಯ ಕೃತಿಗಳು, ಲಘು ಕೃತಿಗಳು, ದ್ವಿಪದಿ ಕೃತಿಗಳು ಎಂದು ವಿಭಾಗಿಸಿ ಪರಿಶೀಲಿಸಬಹುದಾಗಿದೆ.

**ಪದ್ಯ ಕೃತಿಗಳು :**

**ಅ. 'ಅನುಭವಸಾರಮು'** : ಪಾಲ್ಕುರಿಕೆ ಸೋಮನಾಥನ 'ಅನುಭವಸಾರಮು' ಕೃತಿಯ ರಚನಾ ವೈವಿಧ್ಯ ಮತ್ತು ಶೈಲಿಯ ದೃಷ್ಟಿಯಿಂದ ಇದು ಅವನ ಮೊದಲ ಕೃತಿ ಎಂಬುದಾಗಿ ವಿದ್ವಾಂಸರು, ವಿಮರ್ಶಕರು ಅಭಿಪ್ರಾಯಪಟ್ಟಿದ್ದಾರೆ. ಇದರಲ್ಲಿ ೨೪೩ ಪದ್ಯಗಳಿವೆ. ಇದು 'ಶ್ರೀ'ಯಿಂದ ಆರಂಭವಾಗಿ 'ಮಂಗಳ ಮಹಾಶ್ರೀ'ಯೊಂದಿಗೆ ಮುಗಿಯುತ್ತದೆ. ಈ 'ಅನುಭವಸಾರಮು'ದಲ್ಲಿ ಗುರುಭಕ್ತಿ ಮಹಿಮೆ, ಭಕ್ತಿಯ ಸ್ವರೂಪ, ಭಕ್ತಿಯ ಲಕ್ಷಣಗಳು, ಶಿವಪೂಜಾ ಪದ್ಧತಿ, ಇಷ್ಟಲಿಂಗಾರ್ಚನ ವಿಧಿ, ಜಂಗಮ ಸೇವೆ, ಷಟ್‌ಸ್ಥಲ ವಿವರಣೆ ಮುಂತಾದ ವೀರಶೈವ ಧರ್ಮಕ್ಕೆ ಸಂಬಂಧಿಸಿದ ವಿಚಾರಗಳಿವೆ. ಈ ಕೃತಿಯ ಶೋತೃ ಗೋಡಗಿ ತ್ರಿಪುರಾರಿ ಎಂದು ಕವಿ ತಿಳಿಸಿದ್ದಾನೆ. ವಿಶೇಷತೆ ಎಂದರೆ ತನ್ನ ಕಾವ್ಯಗಳಿಗೆಲ್ಲಾ ಬಸವಣ್ಣನನ್ನೇ ನಾಯಕನನ್ನಾಗಿ ಮಾಡಿಕೊಂಡ ಕವಿ ಈ ಕೃತಿಯಲ್ಲಿ ಬಸವಣ್ಣನ ಬಗ್ಗೆ ಎಲ್ಲಿಯೂ ಪ್ರಸ್ತಾಪಿಸಿಲ್ಲ. ಆದರೆ ಪಂಡಿತಾರಾಧ್ಯರನ್ನು ಕುರಿತು ಮೂರು ಪದ್ಯಗಳಲ್ಲಿ ಪ್ರಸ್ತಾಪಿಸಿದ್ದಾನೆ. ಹಾಗಾಗಿ ಅನುಭವಸಾರವನ್ನು ರಚಿಸುವ ಕಾಲಕ್ಕೆ ಸೋಮನಾಥನಿಗೆ ಬಸವಣ್ಣನ ವಿಚಾರವಾಗಿ ಏನೂ ತಿಳಿದಿರಲಿಕ್ಕಿಲ್ಲ. ಬಹುಶಃ ಅವನು ಕಲ್ಯಾಣಕ್ಕೆ ಬರುವ ಮೊದಲು ಈ ಕೃತಿಯನ್ನು ರಚಿಸಿರಬಹುದೆಂದು ಖಚಿತವಾಗಿ ಹೇಳಬಹುದು.

**ಆ. 'ವೃಷಾಧಿಪ ಶತಕ'** : 'ಬಸವಾ ಬಸವಾ ಬಸವಾ ವೃಷಾಧಿಪಾ' ಎಂಬ ಸಂಬೋಧನೆಯಿಂದ ಇಲ್ಲಿನ ಪ್ರತಿಪದ್ಯವು ಸಮಾಪ್ತಿಯಾಗುವುದು ಮತ್ತು ಚಂಪಕಮಾಲ ಮತ್ತು ಉತ್ಪಲಮಾಲಾ ವೃತ್ತಗಳಲ್ಲಿ ರಚಿಸಿರುವ ಶತಕ ಕೃತಿಯಿದು. ಸೋಮನಾಥನು ಬಸವಣ್ಣನವರನ್ನು ಶಿವನ ಸ್ವರೂಪದಂತೆ ಕಂಡು ತನ್ನ ಹೃದಯಂತರಾಳದ ನೋವನ್ನು ಬಸವ ಸಂಭೋಧನೆಯ ಮೂಲಕ ವ್ಯಕ್ತಪಡಿಸುತ್ತಾ ಭಕ್ತಿ ಪರವಶನಾಗುತ್ತಾನೆ. ಈ ಕೃತಿಯಲ್ಲಿ ಕವಿಯು ತನ್ನ ಭಾಷಾ ಪಾಂಡಿತ್ಯವನ್ನು ತೋರಿಸಿರುವುದು ಕಂಡುಬರುತ್ತದೆ. ತೆಲುಗು, ಸಂಸ್ಕೃತ, ತಮಿಳು, ಕನ್ನಡ, ಮರಾಠಿ ಭಾಷೆಗಳಲ್ಲಿ ಪದ್ಯಗಳನ್ನು ರಚಿಸಿ

ಎಲ್ಲಿಯೂ ಅರ್ಥ ಕೆಡದಂತೆ ಕೃತಿ ರಚನೆ ಮಾಡಿದ್ದಾನೆ. ಈ ಶತಕದಲ್ಲಿ ಮೊದಲಿನಿಂದ ೪೯ನೇ ಪದ್ಯದವರೆಗೆ ಸಾಮಾನ್ಯವಾಗಿ ಶತಕ ರೂಪದಲ್ಲಿ ಶಿವಪರವಾದ ಸ್ತೋತ್ರಗಳಿವೆ. ೬೭ನೇ ಪದ್ಯದಿಂದ ೭೯ನೇ ಪದ್ಯದವರೆಗೆ ಬಸವೇಶ್ವರನ ಲೀಲೆಗಳು ಬಸವಪುರಾಣದಲ್ಲಿ ವರ್ಣಿಸಿರುವಂತೆ ಬಿಜ್ಜಳನ ತಿರಸ್ಕಾರ, ಭಂಡಾರದ ಹಣವನ್ನು ಭಕ್ತರಿಗೆ ನೀಡುವುದು, ಬ್ರಾಹ್ಮಣ ದ್ವೇಷ, ವಿಪ್ರರೊಂದಿಗೆ ವಾದ ಮಾಡಿ ಅವರನ್ನು ಸೋಲಿಸಿ ಶಿವಮಹಾತ್ಮ್ಯೆವನ್ನು ತೋರಿಸುವುದು ಮೊದಲಾದವುಗಳನ್ನು ಒಂದೊಂದು ಪದ್ಯಗಳಲ್ಲಿ ವರ್ಣಿಸಲಾಗಿದೆ. ೭೯ರಿಂದ ೧೦೨ರವರೆಗೆ ೨೩ ಜನ ಶಿವಭಕ್ತರ ಚರಿತ್ರೆಗಳು ಒಂದೊಂದು ಪದ್ಯದಲ್ಲಿ ರಚನೆಗೊಂಡಿವೆ. ಹೀಗೆ ವೀರಶೈವಮತದ ಆವೇಶ ಪೂರಿತವಾದ ರಚನೆಯನ್ನು 'ವೃಷಾಧಿಪ ಶತಕ'ದಲ್ಲಿ ಕಾಣಬಹುದಾಗಿದೆ.

ಇ. **'ಚತುರ್ವೇಧ ಸಾರಮು'** : ಇದು ಪ್ರತಿ ಪದ್ಯವು 'ಬಸವಲಿಂಗ' ಎಂಬ ಸಂಬೋಧನೆಯೊಂದಿಗೆ ಮುಕ್ತಾಯವಾಗುವ ೩೫೭ ಸೀಸ ಪದ್ಯಗಳಿಂದ ರಚನೆಗೊಂಡಿರುವ ಕೃತಿಯಾಗಿದೆ. ಇದಕ್ಕೆ 'ಬಸವಲಿಂಗ ಶತಕ' ಎಂಬುದಾಗಿಯೂ ಕರೆಯುತ್ತಾರೆ. ಇದರಲ್ಲಿ ಬಸವಶಬ್ದ ವಿಚಾರ, ಬಸವ ನಾಮೋಚ್ಚರಣ ಮಹಿಮೆ, ಶಿವಾದಿಕ್ಯ, ವಿಭೂತಿ, ರುದ್ರಾಕ್ಷಿ, ಲಿಂಗಧಾರಣ ಮಹಾತ್ಮೆ ಮುಂತಾದ ವೀರಶೈವಧರ್ಮಕ್ಕೆ ಸಂಬಂಧಿಸಿದ ವಿಚಾರಗಳು ಈ ಕೃತಿಯಲ್ಲಿವೆ.

**ಈ. 'ಚೆನ್ನಮಲ್ಲು ಸೀಸಮುಲು'** : ಇದು ಚೆನ್ನಮಲ್ಲು ಎಂಬ ನಾಮವಿರುವ ೩೪ ಸೀಸ ಪದ್ಯಗಳಿರುವ ಕೃತಿ. ಇದರಲ್ಲಿ ಭಕ್ತಸ್ಥಲ, ಮಹೇಶ್ವರ ಸ್ಥಲ, ಪ್ರಸಾದಿ ಸ್ಥಲ, ಪ್ರಾಣಲಿಂಗ ಸ್ಥಲ, ಶರಣ ಸ್ಥಲ, ಐಕ್ಯಸ್ಥಲ ಎಂಬ ಷಟ್‌ಸ್ಥಲಗಳು ವರ್ಣಿತವಾಗಿವೆ. ಪಾಲ್ಕುರಿಕೆ ಸೋಮನಾಥನು ಜೀವ ಸಮಾಧಿಯಾಗುವ ಸಂದರ್ಭದಲ್ಲಿ ಸಮಾಧಿಯೊಳಗೆ ಪ್ರವೇಶಿಸಿ ಒಂದೊಂದು ಮೆಟ್ಟಿಲು ಇಳಿಯುವಾಗ ಒಂದೊಂದು ಪದ್ಯ ಹೇಳಿದಂತೆ ೩೨ ಮೆಟ್ಟಿಲುಗಳಿಗೆ ೩೨ ಪದ್ಯಗಳನ್ನು ಹೇಳಿದ್ದಾನೆಂದು ಕೆಲವು ತೆಲುಗು ವೀರಶೈವರು ಹೇಳುತ್ತಾರೆ. ಆದರೆ ಇದು ನಿರಾಧಾರವಾದ ಹೇಳಿಕೆ ಎಂದು ಶ್ರೀ ಭಂಡಾರು ತಮ್ಮಯ್ಯ ಅವರು ಅಭಿಪ್ರಾಯಪಡುತ್ತಾರೆ. "ಚೆನ್ನಮಲ್ಲು ಎಂಬುದು ಶ್ರೀಶೈಲ ಮಲ್ಲಿಕಾರ್ಜುನಸ್ವಾಮಿಯೇ ಆಗಿದ್ದಾನೆ. ಇದನ್ನು ಸೋಮನಾಥನು ಅವನ ಮಧ್ಯ ವಯಸ್ಸಿನಲ್ಲಿ ರಚಿಸಿದ್ದಾನೆಂದು ಭಂಡಾರು ತಮ್ಮಯ್ಯ ಅವರು ಹೇಳಿದ್ದಾರೆ" (ಜಿ. ನಾಗಯ್ಯ, ಪುಟ-೧೪೫)

**ಲಘು ಕೃತಿಗಳು :**

**ಅ. 'ಪಂಚ ಪ್ರಕಾರ ಗದ್ಯ'** : ಸೋಮನಾಥನ ಗದ್ಯ ಕೃತಿಗಳಲ್ಲಿ ಇದು ಸ್ವಲ್ಪ ದೊಡ್ಡ ಕೃತಿ. ಐದು ವಿಧವಾದ ಗದ್ಯ ಪ್ರಕಾರಗಳಿಂದ ಕೂಡಿರುವುದರಿಂದ ಇದಕ್ಕೆ 'ಪಂಚ ಪ್ರಕಾರ ಗದ್ಯ' ಎಂಬ ಹೆಸರಿಟ್ಟಿದ್ದಾನೆ. ಇದು ಬಸವಣ್ಣನವರನ್ನು ಕುರಿತು ರಚಿಸಿದ ಗದ್ಯ ಸ್ತೋತ್ರ. ಗದ್ಯದ ಆರಂಭದಲ್ಲಿ ಸಂಸ್ಕೃತ ಶ್ಲೋಕವಿರುವ ವೃತ್ತದಿಂದ ಆರಂಭವಾಗಿ ನಂತರ ಐದು ವಿಧವಾದ ಗದ್ಯಗಳಲ್ಲಿ ಬಸವಣ್ಣನನ್ನು ಸ್ತುತಿಸಿದ್ದಾನೆ. ಪ್ರತಿ ಪದ್ಯದ ಕೊನೆಯ ಪಾದವು 'ದೇವ ಬಸವ' ಎಂಬ ಸಂಬೋಧನೆಯಿಂದ ಮುಕ್ತಾಯವಾಗುತ್ತದೆ. ಗದ್ಯದ ಕೊನೆಯಲ್ಲಿ ಜಯ ಜಯಶ್ರೀ ಬಸವ ದಂಡನಾಥ ನಮಸ್ತೆ ನಮಸ್ತೇ ನಮಃ ಎಂದು ಪೂರ್ಣಗೊಂಡಿದೆ.

ಆ. **'ನಮಸ್ಕಾರ ಗದ್ಯ'** : ಇದು ಕೂಡ ಬಸವ ಸ್ತುತಿಯನ್ನೊಳಗೊಂಡ ಸಂಸ್ಕೃತ ಶಾರ್ದೂಲ ವೃತ್ತದಿಂದ ಪ್ರಾರಂಭವಾಗಿದೆ. ೧೬ ಮಾತ್ರೆಗಳಿರುವ ೧೧೮ ಪಾದಗಳು ಈ ಗದ್ಯದಲ್ಲಿವೆ. ಪ್ರತಿ ಪಾದವು ಸಂಸ್ಕೃತ ಚತುರ್ಥಿ ವಿಭಕ್ತಿ ಪ್ರತ್ಯಯದಿಂದ ಕೂಡಿದ ನಮಃ ವಾಕ್ಯದಿಂದ ಅಂತ್ಯವಾಗಿದೆ. ಅದಕ್ಕಾಗಿಯೇ ಈ ಗದ್ಯಕ್ಕೆ ನಮಸ್ಕಾರ ಗದ್ಯ ಎಂಬ ಹೆಸರಿಟ್ಟಿರಬಹುದೆಂದು ತಿಳಿಯುತ್ತದೆ. ಇದು ದ್ವಿಪದಿ, ರಗಡ(ಳೆ) ಮಾದರಿಯಲ್ಲಿ ದ್ವಿಪಾದ ಪ್ರಾಸದಿಂದ ಕೂಡಿದೆ. ಮತ್ತು ಪ್ರಾಸಯತಿಯಿಂದಲೂ ಕೂಡಿದೆ. ಕೊನೆಗೆ ಬಸವ ಸ್ತುತಿಗೆ ಪೂರಕವಾಗಿ ೨ ಸಂಸ್ಕೃತ ವಚನ ಶ್ಲೋಕಗಳಿವೆ.

ಇ. **'ಅಕ್ಷರಾಂಕ ಗದ್ಯ'** : ಪ್ರತಿ ಪಾದವು 'ಅ' ವರ್ಣದಿಂದ 'ಕ್ಷ' ವರ್ಣದವರೆಗಿರುವ ಎಲ್ಲಾ ೫೦ ವರ್ಣಗಳಿಂದ ಆರಂಭವಾಗುತ್ತದೆ. ಪ್ರತಿಯೊಂದು ಪಾದದ ಆದಿಯಲ್ಲಿ ವರ್ಣಮಾಲೆಯ ಮೊದಲ ಅಕ್ಷರವನ್ನಿರಿಸಿ ರಚಿಸಿದ ಸ್ತೋತ್ರವಾಗಿದೆ. ಹೀಗೆ 'ಅ' ಕಾರದಿಂದ 'ಕ್ಷ' ಕಾರದವರೆಗೆ ಒಟ್ಟು ೫೨ ಪಾದಗಳಿರುವ ಗದ್ಯ ಕೃತಿ. ಮಾತ್ರಗಣ ನಿಯಮದಿಂದ ಕೂಡಿದ ಅನುಪ್ರಾಸದಿಂದ ರಚಿಸಲ್ಪಟ್ಟಿದೆ.

ಈ. **'ಅಷ್ಟೋತ್ತರ ಶತನಾಮ ಗದ್ಯ'** : ಬಸವಸ್ತುತಿ ಪ್ರತಿಪಾದಿತವಾದ ನಮ: ವಾಕ್ಯಗಳಿಂದ ಅಂತ್ಯವಾಗುವ ೧೦೮ ಪಾದಗಳಿರುವ ಸ್ತೋತ್ರ ರಚನೆಯಿದು.

ಉ. **'ಅಕ್ಷರಾಂಕ ಪದ್ಯಮುಲು'** : 'ಅ'ಕಾರದಿಂದ 'ಕ್ಷ'ಕಾರದವರೆಗಿನ ಎಲ್ಲಾ ವರ್ಣಗಳಿಂದ ಆರಂಭವಾಗುವ ಪಾದಗಳಿಂದ ಕೂಡಿದ ಸ್ತೋತ್ರವಿದು. ೫೦ ಅಕ್ಷರಗಳು ಕ್ರಮವಾಗಿ ಪಾದದ ಆದಿ ಅಕ್ಷರವಾಗಿ, ರಚನೆಗೊಂಡಿರುವ ಬಸವಣ್ಣನವರನ್ನು ಸ್ತುತಿಸುತ್ತಿರುವ ಲಘು ಕೃತಿ ಇದು.

ಊ. **'ಪಂಚಕಮು'** : ೫ ಮಾಲಿನೀ ವೃತ್ತಗಳಿಂದ ರಚನೆಗೊಂಡಿರುವ ಬಸವ ಸ್ತೋತ್ರವಿದು.

ಋ. **'ಸ್ತವಮುಲು'** : ಪಾಲ್ಕುರಿಕೆ ಸೋಮನಾಥನು, ಸೋಮನಾಥ ಸ್ತವಮು, ಭಕ್ತಸ್ತವಮುಲು ಎಂಬ ಎರಡು ಕೃತಿಗಳನ್ನು ರಚಿಸಿದ್ದಾನೆ. ಇದನ್ನು ಅನುಭವಸಾರವನ್ನು ರಚಿಸಿದ ನಂತರ ರಚಿಸಿರುವುದಾಗಿ ಬಂಡಾರ ತಮ್ಮಯ್ಯ ಅವರು ಹೇಳಿದ್ದಾರೆ.

**'ರಗಡ(ಳೆ)'ಗಳು :**

ಪಿಡುಪರ್ತಿ ಸೋಮನಾಥನು ತನ್ನ ಪದ್ಯ 'ಬಸವಪುರಾಣ'ದಲ್ಲಿ ಪಾಲ್ಕುರಿಕೆ ಸೋಮನಾಥನು ಬಸವ ರಗಡ, ಬಸವಾಢ್ಯ ರಗಡ, ಗಂಗೋತ್ಪತ್ತಿ ರಗಡ, ಸದ್ಗುರು ರಗಡಗಳನ್ನು ರಚಿಸಿರುವುದಾಗಿ ತಿಳಿಸಿದ್ದಾನೆ. ಆದರೆ ಇವುಗಳಲ್ಲಿ ಬಸವ ರಗಡ ಮಾತ್ರ ದೊರೆತಿದೆ. ಉಳಿದವು ದೊರೆತಿಲ್ಲ. ರಗಡ(ಳೆ) ಎಂಬುದು ಒಂದು ಸಾಹಿತ್ಯ ಪ್ರಕಾರ. ಉಪಲಬ್ದವಾದ ರಗಡಗಳಲ್ಲಿ ಪಾಲ್ಕುರಿಕೆ ಸೋಮನಾಥನ ಬಸವ ರಗಡವೇ ಮೊತ್ತ ಮೊದಲನೆಯದು. ಕನ್ನಡದಲ್ಲಿ ಮಂದಾನಿಲ, ಲಲಿತ, ಉತ್ಸಾಹ ಎಂಬ ಮೂರು ರಗಳೆಗಳಿವೆ. ಇವು ಮಾತ್ರಾಗಣ ಪ್ರಧಾನವಾದವುಗಳು. ತೆಲುಗಿನಲ್ಲಿ ಹಲವು ವಿವಿಧ ರಗಳೆಗಳಿವೆ. ಒಟ್ಟು ೧೦೮ ಪಾದಗಳಿರುವ ಬಸವ ರಗಡದಲ್ಲಿ ಮೊದಲ ೭೮ ಪಾದಗಳಲ್ಲಿ ದ್ವಿಪಾದಾಂತ್ಯ ಪ್ರಾಸ ನಿಯಮವಿದೆ. ನಂತರದ ೧೪ ಪಾದಗಳಲ್ಲಿ ದ್ವಿಪದ ಪಂಕ್ತಿಗಳಲ್ಲಿ ಅಲ್ಲಲ್ಲಿ ಪ್ರಾಸ ಯತಿಯನ್ನು ಹೊಂದಿದೆ.

ಶರಣುಬಸವ ಎಂಬ ನಾಮದಿಂದ ಈ ರಗಳೆಯ ಪ್ರತೀ ಪಾದವು ಅಂತ್ಯವಾಗುತ್ತದೆ. ಇದಕ್ಕೆ 'ಬಸವೋತ್ತರ ಶತನಾಮಮು' ಎಂಬ ಮತ್ತೊಂದು ಹೆಸರು ಇರುವಂತೆ ಕೊನೆಯಲ್ಲಿರುವ ಕಂದ ಪದ್ಯಗಳಿಂದ ತಿಳಿಯುತ್ತದೆ.

**'ಉದಾಹರಣಮುಲು' :**

ಉದಾಹರಣ ಕಾವ್ಯಗಳಿಗೆ ಭಾರತೀಯ ಭಾಷೆಗಳಲ್ಲಿ ತೆಲುಗು ಭಾಷೆಯು ಪ್ರತ್ತೇಕ ಸ್ಥಾನವನ್ನು ಸಂಪಾದಿಸಿದೆ. ಸಂಸ್ಕೃತದಲ್ಲಿಯೂ ಮೊದಲು ಈ ಕಾವ್ಯ ಪ್ರಕಾರವಿರಲಿಲ್ಲ. ಸಂಸ್ಕೃತ ಮತ್ತು ತೆಲುಗು ಭಾಷೆಗಳಲ್ಲಿ ಉದಾಹರಣ ಕಾವ್ಯಗಳಿಗೆ ಪಾಲ್ಕುರಿಕೆ ಸೋಮನಾಥನೇ ಆದಿ ಕವಿ. ಈ ಉದಾಹರಣ ಕಾವ್ಯವು ೮ ವಿಭಕ್ತಿಗಳು, ೮ ವೃತ್ತಗಳು, ೮ ಕಳಿಕ ಮತ್ತು ೮ ಉತ್ಕಳಿಕಗಳಿಂದ ರಚನೆಗೊಂಡು ಸ್ತೋತ್ರ ರೂಪಗಳಿಂದ ಕೂಡಿದೆ. ಸೋಮನಾಥನು ತೆಲುಗು 'ಬಸವೊದಾಹರಣಮು', ಸಂಸ್ಕೃತ 'ಬಸವೋದಾಹರಣಮು' ಎಂಬ ಎರಡು ಉದಾಹರಣ ಕಾವ್ಯಗಳನ್ನು ರಚಿಸಿದ್ದಾನೆ. ಈ ಎರಡೂ ಬಸವಣ್ಣನವರ ಮಹಿಮೆಯನ್ನು ಕುರಿತು ವರ್ಣಿಸಿರುವ ಕೃತಿಗಳಾಗಿವೆ.

**ದ್ವಿಪದ ಕಾವ್ಯಗಳು :**

ದ್ವಿಪದ ಕಾವ್ಯ ರಚನಕಾರನಾದ ಪಾಲ್ಕುರಿಗೆ ಸೋಮನಾಥನು ಈ ಪ್ರಕಾರದಲ್ಲಿ ರಚನೆ ಮಾಡಿದ ಪ್ರಸಿದ್ಧ ಪುರಾಣ ಕಾವ್ಯಗಳು 'ಬಸವಪುರಾಣಮು', 'ಪಂಡಿತಾರಾಧ್ಯ ಚರಿತಮು' ಮತ್ತು ದ್ವಿಪದಿಯಲ್ಲಿಯೇ ಬರೆದುದೆಂದು ಹೇಳಲಾಗುವ 'ಮಲ್ಲಮ್ಮದೇವಿ ಪುರಾಣಮು' ಇದು ಈವರೆಗೂ ಲಭ್ಯವಾಗಿಲ್ಲ.

**ಅ. 'ಬಸವಪುರಾಣಮು' :**

'ಬಸವಪುರಾಣ'ವು ಆಂಧ್ರ ಸಾಹಿತ್ಯದ ಮೊದಲ ದ್ವಿಪದಕಾವ್ಯ, ಕರ್ನಾಟಕದ ೧೨ನೇ ಶತಮಾನದಲ್ಲಿ ಅವತರಿಸಿದ ಬಸವಣ್ಣನವರ ಜೀವನ ಚರಿತ್ರೆಯನ್ನು ಕುರಿತು ರಚನೆಗೊಂಡ ಬೃಹತ್ ಕಾವ್ಯ. ಏಳು ಆಶ್ವಾಸಗಳಿಂದ ಕೂಡಿದ ಈ ಕಾವ್ಯದಲ್ಲಿ ಬಸವಣ್ಣನ ಸಮಕಾಲೀನ ಶಿವಶರಣರ ಜೀವನ ಚರಿತ್ರೆಯೂ ಅಡಕಗೊಂಡದೆ. ಬಸವಣ್ಣನ ಜನನಕ್ಕೆ ಕಾರಣ, ಬಾಲ್ಯ ಉಪನಯನ, ವಿದ್ಯಾಭ್ಯಾಸ, ಉಪನಯನ ತಿರಸ್ಕರಿಸಿ ಸಂಗಮೇಶ್ವರಕ್ಕೆ ಹೋದದ್ದು, ಸೋದರ ಮಾವನ ಮಗಳನ್ನು ವಿವಾಹವಾಗಿದ್ದು, ಬಿಜ್ಜಳನಲ್ಲಿ ಭಂಡಾರಿಯಾಗಿದ್ದು, ಶರಣ ಸಮೂಹವನ್ನು ಕಟ್ಟಿದ್ದು, ಕೊನೆಯಲ್ಲಿ ಬಿಜ್ಜಳನ ಸಾವು ಮತ್ತು ಬಸವಣ್ಣನವರ ಐಕ್ಯದೊಂದಿಗೆ ಈ ಪುರಾಣ ಕಾವ್ಯವು ಮುಕ್ತಾಯವಾಗುತ್ತದೆ. ಇದು ತೆಲುಗು ಮತ್ತು ಕನ್ನಡ ಸಾಹಿತ್ಯದ ವೀರಶೈವ ಕಾವ್ಯ ಪ್ರಕಾರಕ್ಕೆ ಮಾರ್ಗದರ್ಶಿಯಾಗಿ ಪ್ರೇರಣೆಯನ್ನೂ ನೀಡಿದೆ.

**ಆ. 'ಪಂಡಿತಾರಾಧ್ಯ ಚರಿತ್ರೆ' :**

ಈ ಕಾವ್ಯವು ಸೋಮನಾಥನ ಎರಡನೇ ದ್ವಿಪದ ಕಾವ್ಯ. ಇದು ತೆಲುಗು ವೀರಶೈವ ಸ್ಥಾಪನಾಚಾರ್ಯರಾದ ಪಂಡಿತಾರಾಧ್ಯರ ಜೀವನ ಚರಿತ್ರೆಯಾಗಿದೆ. ಇದರಲ್ಲಿ ದೀಕ್ಷಾ ಪ್ರಕರಣ, ಪುರಾತನ ಪ್ರಕರಣ, ವಾದ ಪ್ರಕರಣ, ಮಹಿಮೆ ಪ್ರಕರಣ, ಪರ್ವತ ಪ್ರಕರಣ ಎಂಬ ಐದು ಪ್ರಕರಣಗಳಿವೆ.

ಶೈವಧರ್ಮದ ಪ್ರತಿಷ್ಠೆಯನ್ನು ಎತ್ತಿತೋರಿಸುವ ಪಂಡಿತಾರಾಧ್ಯರ ಮನೋಧರ್ಮವನ್ನು ಈ ಕಾವ್ಯದಲ್ಲಿ ತುಂಬಾ ಪರಿಣಾಮಕಾರಿಯಾಗಿ ಚಿತ್ರಿಸಲಾಗಿದೆ. ಆರಾಧ್ಯರ ಕಣ್ಣುಗಳನ್ನು ಕೀಳಿಸುವುದು ಅವುಗಳನ್ನು ತನ್ನ ಭಕ್ತಿಯಿಂದ ಪುನಃ ಪಡೆಯುವುದು ಮತ್ತು ಆರಾಧ್ಯರ ಸಮಕಾಲೀನ ಹಾಗೂ ಪುರಾತನರ ಚರಿತ್ರೆಯನ್ನು ಈ ಕಾವ್ಯದಲ್ಲಿ ಚಿತ್ರಿಸಲಾಗಿದೆ. ವಿಶೇಷವೆಂದರೆ ಬಸವಣ್ಣನು ಐಕ್ಯವಾದ ವಿಷಯ ತಿಳಿದ ಪಂಡಿತಾರಾಧ್ಯರು ಬಸವಣ್ಣನನ್ನು ಕುರಿತು ಪ್ರಲಾಪಗೈದ ಸನ್ನಿವೇಷವು ತುಂಬಾ ಶೋಕಭರಿತವಾಗಿ ಅರ್ಥಪೂರ್ಣವಾಗಿ ವರ್ಣಿಸಲ್ಪಟ್ಟಿದೆ. ಇದರಿಂದ ಬಸವಣ್ಣನವರ ಮೇಲೆ ಆರಾಧ್ಯರಿಗಿದ್ದ ಭಕ್ತಿಯ ಭಾವ ಎಂತಹದ್ದು ಎಂಬುದು ತಿಳಿಯುತ್ತದೆ. ಹೀಗೆ ಸೋಮನಾಥನು ಎರಡು ಪುರಾಣ ಮಹಾಕಾವ್ಯಗಳನ್ನು ರಚನೆ ಮಾಡುವುದರ ಮೂಲಕ ತನ್ನ ಹೆಸರನ್ನು ಶಾಶ್ವತವಾಗಿರುವಂತೆ ಮಾಡಿದ್ದಾನೆ.

**೨. ಸಂಸ್ಕೃತ ಕೃತಿಗಳು :**

'ಸೋಮನಾಥ ಭಾಷ್ಯಂ', 'ತ್ರಿವಿಧ ಲಿಂಗಾಷ್ಟಕಂ', 'ರುದ್ರಭಾಷ್ಯಂ', 'ವೃಷಭಾಷ್ಟಕಂ', 'ಸಂಸ್ಕೃತ ಬಸವೋದಾಹರಣಂ' ಇವು ಸೋಮನಾಥನ ಸಂಸ್ಕೃತ ಕೃತಿಗಳು. ಇವುಗಳಲ್ಲಿ ರುದ್ರಭಾಷ್ಯಂ ಎಂಬ ಕೃತಿ ದೊರೆತಿಲ್ಲ.

೧. **'ಸೋಮನಾಥ ಭಾಷ್ಯಂ'** : ಇದು ಶೃತಿ, ಸ್ಮೃತಿ ಪ್ರಮಾಣಗಳಿಂದ ಶಿವಪಾರಮ್ಯವನ್ನು ನಿರೂಪಿಸುವ ೨೫ ಪ್ರಕರಣಗಳಲ್ಲಿ ರಚನೆಗೊಂಡಿರುವ ಕೃತಿಯಾಗಿದೆ. ಮನೋಹರನೆಂಬುವನು ಇದಕ್ಕೆ 'ವ್ಯವಹಾರಿಕಾಂಧ್ರ ಟೀಕೆ' ಯನ್ನು ಬರೆದಿದ್ದಾನೆ. ೨೫ ಪ್ರಕರಣಗಳಿರುವ ಈ ಕೃತಿಯ ಕೇವಲ ೧೦ ಪ್ರಕರಣಗಳು ಮಾತ್ರವೇ ಲಭ್ಯವಾಗಿದೆ.

೨. **'ತ್ರಿವಿಧ ಲಿಂಗಾಷ್ಟಕಮು'** : ಇದರಲ್ಲಿ ಇಷ್ಟಲಿಂಗಮು, ಪ್ರಾಣಲಿಂಗಮು, ಭಾವಲಿಂಗಮು ಎಂಬ ಮೂರನ್ನು ಕುರಿತು ಒಂದೊಂದನ್ನು ೭ ಅನುಷ್ಟುಪ್ ಶ್ಲೋಕಗಳಲ್ಲಿ ಹೇಳಲಾಗಿದೆ.

**೩. ಕನ್ನಡ ಕೃತಿಗಳು :**

ಪಾಲ್ಕುರಿಕೆ ಸೋಮನಾಥನು ಕನ್ನಡ ಭಾಷೆಯಲ್ಲೂ ಕೃತಿ ರಚನೆ ಮಾಡಿದ್ದಾನೆ. 'ಸದ್ಗುರು ರಗಡ', 'ಚೆನ್ನಬಸವ ರಗಡ', 'ಅಕ್ಷರಾಂಕ ಪದ್ಯಮುಲು', 'ಶರಣು ಬಸವ ರಗಡ', 'ಬಸವಲಿಂಗ ನಾಮಾವಳಿ', 'ಶೀಲ ಸಂಪಾದನೆ', 'ಶಿವಗಣ ಸಹಸ್ರಮಾಲ' ಇವು ಸೋಮನಾಥನ ಕನ್ನಡ ಕೃತಿಗಳು. ಸೋಮನಾಥನು ಕನ್ನಡ ಭಾಷೆಯಲ್ಲಿ ಕೃತಿ ರಚನೆ ಮಾಡಿರುವುದರಿಂದ ಕವಿ ಚರಿತ್ರಾಕಾರರು ಇವನನ್ನು ಕನ್ನಡ ಕವಿಯೆಂದೇ ಪರಿಗಣಿಸಿದ್ದಾರೆ.

# ಪಾಲ್ಕುರಿಕೆ ಸೋಮನಾಥನ ಕೃತಿಗಳ ಪಟ್ಟಿ



೨.೨. ಭೀಮಕವಿ :

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಬಸವಣ್ಣನವರನ್ನು ಪವಾಡ ಪುರುಷರನ್ನಾಗಿ ಚಿತ್ರಿಸಿ ಕೃತಿ ರಚನೆ ಮಾಡಿದ ಮೊದಲಿಗ ಹರಿಹರ ಕವಿ. ಅನಂತರ ಆಂಧ್ರಪ್ರದೇಶದ ಶ್ರೀಶೈಲದಲ್ಲಿದ್ದುಕೊಂಡು ಅಲ್ಲಿದ್ದ ಭಕ್ತರಿಂದ ಕೇಳಿದ ಮೌಖಿಕ ಚರಿತ್ರೆಯನ್ನು ಆಧಾರವಾಗಿಟ್ಟುಕೊಂಡೇ ಬಸವಣ್ಣ ಮತ್ತು ಅವರ ನೂರಾರು ಶರಣ ಸಮೂಹದ ಚರಿತ್ರೆಯನ್ನು ಒಟ್ಟುಗೂಡಿಸಿ ಪುರಾಣ ರೂಪದಲ್ಲಿ ಕೃತಿ ರಚನೆ ಮಾಡಿದವನು ತೆಲುಗಿನ ಪಾಲ್ಕುರಿಕೆ ಸೋಮನಾಥ. ಹೀಗೆ ರೂಪಗೊಂಡ ತೆಲುಗಿನ 'ಬಸವಪುರಾಣಮು' ಕಾವ್ಯವನ್ನು ಕನ್ನಡದ ಪರಿಸರಕ್ಕೆ ಹಾಗೂ ಕನ್ನಡಿಗರಿಗೆ ಬಸವ ಚರಿತ್ರೆಯನ್ನು ಅರುಹುವ ಸಲುವಾಗಿ ಅದನ್ನು ಕನ್ನಡೀಕರಿಸಿ ಕನ್ನಡಿಗರ ಮನೆ, ಮನಗಳಲ್ಲಿ ಶಾಶ್ವತವಾಗಿ ಉಳಿಯುವಂತೆ ಮಾಡಿದ ಕೀರ್ತಿ ಕನ್ನಡದ ಭೀಮಕವಿಗೆ ಸಲ್ಲುತ್ತದೆ.

'ಬಸವಪುರಾಣ' ಕಾವ್ಯವನ್ನು ಭೀಮಕವಿಯೇ ರಚಿಸಿದ್ದಾನೆಂಬುದಕ್ಕೆ ನಿದರ್ಶನವಾಗಿ ಪುರಾಣದ ಆರಂಭದಲ್ಲಿ ಕವಿ ಹೀಗೆ ಹೇಳಿದ್ದಾನೆ.

"...ಹಿಮಗು ಶಿವಕವಿದೇವನಾತ್ಮಜ
ಸುಮತಿ ಭೀಮನುಭಯಕವಿತ್ವ ಸಮರ್ಥನುಸುರುವಡೆ"

(ವಿದ್ಯಾಶಂಕರ ಎಸ್., ಬ.ಪು., ಸಂ.೧, ಪ.೧೭)

ಎಂದು ಕಾವ್ಯದ ಆರಂಭದಲ್ಲಿ ಹೇಳಿದರೆ, ಕಾವ್ಯದ ಕೊನೆಯಲ್ಲಿ

"....ಪಾಲ್ಕುರಿಕೆ ಸೋಮೇಶ್ವರನ ಕಾರುಣ್ಯ
ಒದವಿದಖಿಳ ಕಳಾಪ್ರಪೂರಿತ
ಹೃದಯ ಭೀಮಕವಿ ಪ್ರಣೀತಾ
ಭ್ಯುದಯ ಬಸವ ಪುರಾಣ ಕಥೆಯೊಳಗಷ್ಟಮಾಶ್ವಾಸ"

(ವಿದ್ಯಾಶಂಕರ ಎಸ್., ಬ.ಪು.,ಸಂ.೬೦, ಪ.೯೨)

ಎಂಬ ಮಾತುಗಳಿಂದ 'ಬಸವಪುರಾಣ' ಕಾವ್ಯವನ್ನು ರಚನೆ ಮಾಡಿದವರು ಭೀಮಕವಿಯೇ ಎಂಬುದು ಸ್ಪಷ್ಟವಾಗುತ್ತದೆ.

ಭೀಮಕವಿಯು ಕನ್ನಡ ವೀರಶೈವ ಸಾಹಿತ್ಯದ ಪ್ರಮುಖ ಕವಿ. 'ರಾಜಶೇಖರ ವಿಳಾಸ'ವನ್ನು ಬರೆದ ಷಡಕ್ಷರದೇವ ಎಂಬ ಕನ್ನಡ ಕವಿಯು ಭೀಮಕವಿಯನ್ನು ಕುರಿತು "ತತಗರ್ವೋದ್ಧತದುರ್ವಿದಗ್ಧ ಜನತಾ ಹೃದ್ಭೀಮನಂ ಭೀಮನಂ" (ಗರ್ವದಿಂದ ಉನ್ನತ್ತರಾದ ಕುಪಂಡಿತರ ಹೃದಯಕ್ಕೆ ಭಯಂಕರನಾದ ಭೀಮಕವಿ) ಎನ್ನುತ್ತಾನೆ. (ಹಿರೇಮಠ ಆರ್.ಸಿ., ರಾಜಶೇಖರ ವಿಳಾಸ, ಸಂ.೧, ಪ.೧೮) ಹಾಗೆಯೇ ವಿರೂಪಾಕ್ಷ ಪಂಡಿತ, ಸಿದ್ದನಂಜೇಶ, ಪದ್ಮಣಾಂಕ, ಷಡಕ್ಷರದೇವ, ಗರಣಿಯ ಬಸವಲಿಂಗ ಮುಂತಾದ ವೀರಶೈವ ಕವಿಗಳು ತಮ್ಮ ಕಾವ್ಯಾರಂಭದಲ್ಲಿ ಭೀಮಕವಿಯನ್ನು ಭೀಮಕವೀಶ್ವರ, ಭೀಮಕವೀಶ, ಭೀಮರಸ, ಭೀಮನಾಥ, ಭೀಮನು, ಭೀಮ ಎಂಬ ಹೆಸರುಗಳಿಂದ ನೆನೆದಿದ್ದಾರೆ. ಹೀಗೆ ಪ್ರಶಂಸೆ

ಮತ್ತು ಪ್ರಸಿದ್ಧಿಯನ್ನು ಪಡೆದ ಭೀಮಕವಿ ಕನ್ನಡದಲ್ಲಿ ಮೊತ್ತಮೊದಲ ಬಾರಿಗೆ ಇಡೀ ಕಾವ್ಯವನ್ನು ಒಂದೇ ಛಂದೋಪ್ರಕಾರದಲ್ಲಿ ರಚನೆ ಮಾಡಿದ ಕೀರ್ತಿಗೆ ಪಾತ್ರವಾಗಿದ್ದಾರೆ. ತೆಲುಗಿನಲ್ಲಿ 'ಬಸವಪುರಾಣಮು'ವು ನಿರ್ಲಕ್ಷ್ಯಕ್ಕೊಳಪಟ್ಟು ಮುದಿಸೂಳೆ ಎಂದು ಮೂಲೆಗುಂಪಾಗಿದ್ದ ದೇಸೀ ದ್ವಿಪದ ಛಂದಸ್ಸಿನಲ್ಲಿ ರಚನೆಗೊಂಡಿದ್ದರೆ, ಕನ್ನಡದ 'ಬಸವಪುರಾಣ'ವು ಚಂಪೂ ಸಾಹಿತ್ಯದಿಂದ ಬಿಡಿಸಿಕೊಂಡು ಸಾಮಾನ್ಯರಿಗೂ ತಿಳಿಯುವಂತಹ ಷಟ್ಪದಿ ಛಂದಸ್ಸಿನ ಪ್ರಕಾರದಲ್ಲಿ, ಅದರಲ್ಲೂ ಸಂಪೂರ್ಣವಾಗಿ ಭಾಮಿನಿ ಷಟ್ಪದಿಯಲ್ಲಿ ರಚಿತವಾದ ಮೊದಲ ಕನ್ನಡ ಪುರಾಣ ಕಾವ್ಯವಾಗಿದೆ.

ಭೀಮಕವಿಯ ವೈಯಕ್ತಿಕ ವಿಚಾರಗಳಲ್ಲಿ ಸಾಕಷ್ಟು ಗೊಂದಲಗಳಿವೆ. ಇವನ 'ಬಸವಪುರಾಣ' ಮತ್ತು 'ಭೀಮಕವೀಶ್ವರ ರಗಳೆ'ಯನ್ನು ಮತ್ತು ಇತರ ಕೆಲವು ಕೃತಿಗಳನ್ನು ಆಧರಿಸಿ ಅವನ ಹಿನ್ನೆಲೆ, ಸ್ಥಳ, ಕಾಲ, ಮುಂತಾದ ವಿಚಾರಗಳನ್ನು ಗುರುತಿಸಬಹುದು.

ಭೀಮಕವಿಯು ತನ್ನನ್ನು 'ಉಭಯಕವಿತ್ವಸಮರ್ಥ'ನೆಂದು ಹೇಳಿಕೊಂಡಿರುವುದರಿಂದ ಇವನು ತೆಲುಗು ಭಾಷೆಯಲ್ಲಿಯೂ ಪಾಂಡಿತ್ಯವನ್ನು ಪಡೆದಿರಬೇಕು. ಇವನು ತನ್ನ ಆರಾಧ್ಯ ದೈವವಾದ ಸಿದ್ದವಟನಾಥನನ್ನು ಮತ್ತು ಸಿದ್ದವಟಪುರವನ್ನು ಹೆಸರಿಸಿರಿವುದರಿಂದ ಇವನ ಮೂಲ ಆಂಧ್ರಪ್ರದೇಶವಿರಬೇಕು ಎಂದು ವಿದ್ವಾಂಸರು ಊಹಿಸಿದ್ದಾರೆ. ಇದಕ್ಕೆ ಪುಷ್ಟಿಯಾಗಿ 'ರಾಘವಾಂಕ ಚಾರಿತ್ರ್ಯ'ಯನ್ನು ಬರೆದ ಸಿದ್ದನಂಜೇಶನು ಭೀಮಕವಿಯ ತಂದೆ ಶಿವದೇವಕವಿಯು 'ಆಂಧ್ರಭಾಷಾ ಸತ್ಕವಿಕೋವಿದ'ನಾಗಿದ್ದನು ಎಂದು ಹೇಳಿರುವುದು. ಭೀಮಕವಿಯು ಮೂಲತಃ ಆಂಧ್ರಪ್ರದೇಶದವನು ಎಂಬುದನ್ನು ಸಮರ್ಥಿಸುತ್ತದೆ. ಭೀಮಕವಿ ತಾನು ಶಿವಕವಿ ದೇವನಾತ್ಮಜ(೧.೧೭) ಎಂದು 'ಬಸವಪುರಾಣ'ದಲ್ಲಿ ಮತ್ತು 'ಭೃಂಗಿದಂಡಕ'ದಲ್ಲಿ

"ಶಿವಕವಿ ದೇವಾರ್ಯರ ತನು
ಭವಾಗ್ರಣಿಯೆನಿಪ್ಪ ಭೀಮನಾಥಂ ಪೇಳ್ದೀ
ಪ್ರವಿಮಳ ಭೃಂಗೀಶ್ವರನೊ
ಪ್ಪುವ ದಂಡಕಂ ಸಮಸ್ತಮಂಗಳ ಮಹಾಶ್ರೀ"

(ರಾಜೂರ ವೀರಣ್ಣ (ಸಂ), 'ಭೃಂಗೀಶ್ವರ ದಂಡಕ', ಸಂ.೧, ಪ.೨೪)

ಎಂಬ ಭಾಗಗಳಿಂದ ಭೀಮಕವಿಯ ತಂದೆಯ ಹೆಸರು ಶಿವಕವಿದೇವ, ಶಿವದೇವಕವಿ ಎಂಬುದು ತಿಳಿಯುತ್ತದೆ. ಇಲ್ಲಿ ಕವಿ ಎಂಬ ನಾಮವು ಭೀಮಕವಿಯ ತಂದೆಯೂ ಕವಿಯಾಗಿದ್ದು, ಕಾವ್ಯ ರಚನೆ ಮಾಡಿರಬಹುದೆಂದು ಊಹಿಸಬಹುದು. ಹಾಗೆಯೇ ಸಿದ್ದನಂಜೇಶ ಹೇಳುವಂತೆ ಇವನು "ಆಂಧ್ರಭಾಷಾ ಸತ್ಕವಿಕೋವಿದ" ಎಂದು ಹೇಳಿರುವುದು ಇಲ್ಲಿ ಗಮನಿಸಬೇಕಾದಂತಹ ಅಂಶ. ಆದರೆ ಕನ್ನಡ ಮತ್ತು ತೆಲುಗು ಭಾಷೆಯಲ್ಲಿ ಶಿವದೇವ ಎಂಬ ಕವಿಯಿಂದ ರಚನೆಗೊಂಡ ಯಾವ ಕೃತಿಗಳು ಈವರೆಗೆ ಲಭ್ಯವಾಗಿಲ್ಲದ ಕಾರಣ ಇದನ್ನು ಊಹೆ ಎಂದು ಮಾತ್ರ ಪರಿಗಣಿಸಿಬಹುದಾಗಿದೆ.

ಭೀಮಕವಿಯ ವಿಚಾರವಾಗಿ ಸಿದ್ದನಂಜೇಶನ ರಾಘವಾಂಕ ಚರಿತೆಯು ಮತ್ತೊಂದು ವಿಷಯವನ್ನು ಹೇಳುತ್ತದೆ. ಈ ಕಾವ್ಯದಲ್ಲಿ ಭೀಮಕವಿಯ ತಂದೆ ಶಿವದೇವಕವಿಯು ತನಗೆ ಅನೇಕ ವರ್ಷಗಳು ಕಳೆದರೂ ಮಕ್ಕಳಾಗಿರಲಿಲ್ಲ ಒಮ್ಮೆ ಪಂಪಾಪುರಕ್ಕೆ ಬಂದು ಹರೀಶ್ವರನನ್ನು ಭಕ್ತಿಯಿಂದ ಕೈಮುಗಿದು

"ಎನಗೆ ಸತ್ಪುತ್ರನಾದೊಡೆ ನಿಮ್ಮಪಾದ ಸೇವೆ
ಯನೆ ಮಾಡುತೋದುದೆಹ ರಾಘವಾಂಕ ಸೇವೆ
ಯನೆ ಮಾಡಿಸುವೆನೋದಿಸುವೆನೆಂದು ಕಾರುಣ್ಯವೆಂ ಪಡೆದು ಮಗುಳುವುವನು"

(ಮಾಳವಾಡ ಸ.ಸ.(ಸಂ), ಸಂ.೧೫, ಪ.೪)

ಹೀಗೆ ಆಶೀರ್ವಾದ ಪಡೆದು ಹೋದ ಶಿವದೇವಕವಿಗೆ ಕೆಲವು ವರ್ಷಗಳ ನಂತರ ಗಂಡುಮಗು ಜನಿಸುತ್ತದೆ. ಅವನಿಗೆ ಭೀಮ ಎಂಬ ಹೆಸರಿಟ್ಟು ಅವನನ್ನು ಹರೀಶ್ವರನಲ್ಲಿಗೆ ಕರೆತಂದು ಇವನಿಗೆ ಸಕಲ ವಿದ್ಯೆಗಳನ್ನು ಕಲಿಸಿ, ಸದ್ಬುದ್ಧಿ ಕಲಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡಿ ಎಂದು ವಿನಮ್ರತೆಯಿಂದ ಕೇಳಿಕೊಳ್ಳುತ್ತಾ ಭೀಮನನ್ನು ಅಲ್ಲಿ ಬಿಟ್ಟು ಹೋಗುವನು. ಆಗ ಹರೀಶ್ವರನು

"ವರ ತನಯನಂ ಸಮರ್ಪಿಸಿ ಪೋದಭಾವಕ್ಕೆ
ಹರಿಹರೇಶಂ ಬೆರಗುವಟ್ಟು ರಾಘವನ ಹ
ತ್ತಿರೆ ಕರೆದು ನೀನಖಿಳ ವಿದ್ಯೆಗಳನೀತಂಗೆ ಕಲಿಸೆಂದು ನಿರವಿಸಲೊಡಂ"

(ಮಾಳವಾಡ ಸ.ಸ.(ಸಂ), ಸಂ.೧೫, ಪ.೬)

ಎಂದು ಹೇಳಿದಾಗ ರಾಘವಾಂಕ ಭೀಮನಿಗೆ ಎಲ್ಲಾ ವಿದ್ಯೆಗಳನ್ನು ಕಲಿಸುತ್ತಾನೆ. ಸಕಲ ಶಾಸ್ತ್ರಗಳಲ್ಲೂ ಪಾರಂಗತನಾಗಿ ಹರೀಶ್ವರನ ಎದುರು 'ಭೃಂಗೀದಂಡಕ'ವನ್ನು ರಚಿಸಿ ಮೆಚ್ಚುಗೆ ಪಡೆಯುತ್ತಾನೆ. ಅನಂತರ ತನ್ನ ಊರಾದ ಸಿದ್ದವಟಪುರಕ್ಕೆ ಹೋಗುತ್ತಾನೆ.

ಶ್ರೇಷ್ಠ ಕವಿಗಳ ಮಾರ್ಗದರ್ಶನದಲ್ಲಿ ವಿದ್ಯಾರ್ಜನೆಗೈದು ಬಂದ ಮಗನನ್ನು ಪ್ರೀತಿಯಿಂದ ಆಲಂಗಿಸಿಕೊಂಡು 'ಭಕ್ತವೃಂದದಾಜ್ಞೆಯನ್ನು ಶಿರಸಾವಹಿಸಿ ಜೀವಿಸು' ಎಂದು ಶಿವದೇವ ಕವಿ ಆಶೀರ್ವಾದಿಸುತ್ತಾನೆ. ಅಂದಿನಿಂದ

"ಗುರುಲಿಂಗ ಜಂಗಮವನಾರಾಧಿಸುತ್ತೆ ಶಿವ
ಶರಣರ ಚರಿತ್ರಮಂ ಭೀಮ ಶಿವಕವಿ ಕೇಳು
ತಿರೆ ಪಾಲುಕುರಿಕೆ ಸೋಮೇಶ್ವರಂ ಶಿವದೇವಂ ಸ್ವಪ್ನದಲಿ ಬಂದು"

(ಮಾಳವಾಡ ಸ.ಸ.(ಸಂ), ಸಂ.೧೫, ಪ.೯)

'ಬಸವಪುರಾಣ'ವನ್ನು ರಚಿಸುವಂತೆ ಆಶೀರ್ವಾದಿಸುತ್ತಾರೆ. ಅಂತೆಯೇ ಭೀಮಕವಿ 'ಬಸವಪುರಾಣ'ವನ್ನು ರಚಿಸಿದನೆಂದು ಸಿದ್ದ ನಂಜೇಶನು ರಾಘವಾಂಕ ಚರಿತ್ರೆಯಲ್ಲಿ ಹೇಳುತ್ತಾನೆ. ಈ ವಿಷಯವು ಗೊಂದಲವನ್ನು ಉಂಟುಮಾಡುತ್ತದೆ. ಯಾಕೆಂದರೆ ಹರಿಹರನ ಕಾಲವನ್ನು ಕ್ರಿ.ಶ.೧೧೮೦ ರಿಂದ ೧೨೫೦ರವರೆಗೆ ಎಂದು ವಿದ್ವಾಂಸರು ಗುರುತಿಸಿದ್ದಾರೆ. ಮತ್ತು ಭೀಮಕವಿಯು 'ಬವಸಪುರಾಣ'

ಕಾವ್ಯವನ್ನು ೧೩೬೯ರಲ್ಲಿ ಬರೆದು ಮುಗಿಸಿದುದಾಗಿ ಹೇಳಿದ್ದಾನೆ. ಅಂದರೆ ಭೀಮಕವಿಯು ತನ್ನ ೨೦ನೆಯ ವಯಸ್ಸಿನಲ್ಲಿ ಕಾವ್ಯ ರಚನೆ ಮಾಡಿದ್ದಾನೆಂದುಕೊಂಡರೂ ಇವನು ಸು.೧೩೪೯-೫೦ರ ಸುಮಾರಿಗೆ ಜನಿಸಿರಬೇಕು. ಹರಿಹರನ ಅಂತ್ಯದ ಕಾಲಕ್ಕೂ ಭೀಮಕವಿಯ ಬಾಲ್ಯ ಕಾಲಕ್ಕೂ ಸುಮಾರು ನೂರು ವರ್ಷಗಳ ವ್ಯತ್ಯಾಸವಿದೆ. ಹಾಗಾಗಿ ಇದೊಂದು ಅಸಮರ್ಪಕವಾಗಿ ಹುಟ್ಟಿಕೊಂಡ ಕಥೆಯಾಗಿದೆ ಎಂದು ಈ ವಿಚಾರವನ್ನು ಪರಿಗಣಿಸಲಾಗಿಲ್ಲ.

**ಸ್ಥಳ :**

ಭೀಮಕವಿಯು ಕಾವ್ಯಾರಂಭದಲ್ಲಿ ತನ್ನ ಆರಾಧ್ಯದೈವ ಸಿದ್ದವಟನಾಥನನ್ನು ನೆನೆದಿದ್ದಾನೆ. ಮತ್ತು ಸಿದ್ದವಟಪುರವನ್ನು ಹೆಸರಿಸಿರುವುದರಿಂದ ಇವನು ಈ ಊರಿನವನೇ ಇರಬೇಕೆಂದು ಊಹಿಸಲಾಗಿದೆ. ಹಾಗೆಯೇ ಸಿದ್ದನಂಜೇಶನು ಕೂಡ ಸಿದ್ದವಟಪುರದವನೆಂದೇ ಹೇಳಿದ್ದಾನೆ. ಇದು ಶ್ರೀಶೈಲದ ದಕ್ಷಿಣ ದ್ವಾರವೆನಿಸಿದ ಒಂದು ಪ್ರಮುಖ ಸ್ಥಳವಾಗಿದೆ. ತೆಲುಗು ಸಾಹಿತ್ಯದಲ್ಲಿ ಮತ್ತೊಬ್ಬ ಭೀಮಕವಿ ಇದ್ದಾನೆ. ಇವನನ್ನು ವೇಮುಲವಾಡ ಭೀಮಕವಿ ಎಂದು ಗುರುತಿಸುವರು. ಕೆಲವು ವಿದ್ವಾಂಸರು 'ಬಸವಪುರಾಣ' ರಚನೆ ಮಾಡಿದ ಭೀಮಕವಿ ಮತ್ತು ವೇಮುಲವಾಡ ಭೀಮಕವಿ ಇಬ್ಬರೂ ಒಬ್ಬರೇ ಎಂದು ಹೇಳುತ್ತಾರೆ. ಹಾಗೆಯೇ ಅನಂತಪುರ ಜಿಲ್ಲೆ ಗುತ್ತಿ ತಾಲ್ಲೂಕು ಗಡೇಕಲ್ಲು ಗ್ರಾಮದಲ್ಲಿರುವ ಸಮಾಧಿ ಕನ್ನಡ ಭೀಮಕವಿಯದೆಂದೇ ಹೇಳುತ್ತಾರೆ. ವಾಸ್ತವವಾಗಿ ಇವರಿಬ್ಬರೂ ಬೇರೆ ಬೇರೆ ಕವಿಗಳು ಮತ್ತು ಗಡೇಕಲ್ಲು ಗ್ರಾಮದಲ್ಲಿರುವ ಸಮಾಧಿ ಕನ್ನಡ ಭೀಮಕವಿಯದಲ್ಲ. ಅದು ವೇಮುಲವಾಡ ಭೀಮಕವಿಯದು. ಕನ್ನಡ ಭೀಮಕವಿಯದು ಶ್ರೀಶೈಲಕ್ಕೆ ದಕ್ಷಿಣಕ್ಕಿರುವ ಸಿದ್ದವಟಪುರ. ತಂದೆ ಶಿವದೇವಕವಿ. ಹಾಗೆಯೇ ವೇಮುಲವಾಡ ಭೀಮಕವಿಯದು ಪಶ್ಚಿಮ ಗೋದಾವರಿ ಜಿಲ್ಲೆಯ ದ್ರಾಕ್ಷಾರಾಮದಿಂದ ೧೨ ಕಿ.ಮೀ. ದೂರದಲ್ಲಿರುವ ವೇಮುಲವಾಡ ಎಂಬ ಗ್ರಾಮ. ತಂದೆ ಸೋಮನಾಮಾತ್ಯ, ತಾಯಿ ಮಾಚಮ್ಮ. ಗಡೇಕಲ್ಲು ಗ್ರಾಮದಲ್ಲಿರುವ "ಶ್ರೀವೇಮುಲವಾಡ ಭೀಮಲಿಂಗೇಶ್ವರ ಸ್ವಾಮಿ" ದೇವಸ್ಥಾನದ ಅರ್ಚಕರು ಈ ವಿಷಯವನ್ನು ಹೇಳುತ್ತಾರೆ. ಹಾಗೆಯೇ ಈ ದೇವಸ್ಥಾನದವರು ಹಳೆಯ ಕಾಗದ ಹಸ್ತಪ್ರತಿಯ ಆಧಾರದಿಂದ ಒಂದು ಚಿಕ್ಕ ಪುಸ್ತಕವನ್ನು ಪ್ರಕಟಿಸಿದ್ದಾರೆ. ಇದರಲ್ಲಿ ವೇಮುಲವಾಡ ಭೀಮಕವಿಯ ಜನ್ಮವೃತ್ತಾಂತ, ಇವನ ತಂದೆ ತಾಯಿ, ಜನ್ಮಸ್ಥಳ, ಇವನು ತೋರಿದ ಪವಾಡಗಳು, ರಚಿಸಿದ ಕೃತಿಗಳನ್ನು ಪರಿಚಯಿಸಿದ್ದಾರೆ. ಈ ಕೃತಿಗಳಲ್ಲಿ ಪ್ರಮುಖವಾದವು, 'ನೃಸಿಂಹಪುರಾಣಮು'(ವರಹಪುರಾಣಂ), 'ಕವಿಜನಾಶ್ರಯಂ', 'ಕವಿರಾಕ್ಷಸೀಯಂ', 'ರಾಘವ ಪಾಂಡವೀಯಂ', 'ಹರವಿಲಾಸಮು', 'ಶತಕಂಠ ರಾಮಾಯಣಮು', 'ಜ್ಯೋತಿಷಾಮೃತ ಸಾರಮು', 'ಲಕೋಟಪ್ರಶ್ನ ಶಾಸ್ತ್ರಮು', 'ಸುಮತಿ ಶತಕಮು'. ಈ ಪಟ್ಟಿಯಲ್ಲಿ 'ಬಸವಪುರಾಣ' ಇಲ್ಲದೇ ಇರುವುದು ಕೂಡ ಈ ಕವಿಗಳು ಬೇರೆ ಬೇರೆ ಎಂಬುದನ್ನು ಸೂಚಿಸುತ್ತದೆ. ಹಾಗೆಯೇ ಮತ್ತೊಂದು ಪ್ರಮುಖ ಅಂಶ ಎಂದರೆ ಕೆಲವು ತೆಲುಗು ಕವಿಗಳು ತಮ್ಮ ಕಾವ್ಯಗಳಲ್ಲಿ ವೇಮುಲವಾಡ ಭೀಮಕವಿ ಎಂದೇ ನೆನೆದಿದ್ದಾರೆ. ಈ ಹಿನ್ನೆಲೆಯಲ್ಲಿ ಭೀಮಕವಿಯರು ಒಬ್ಬರಲ್ಲ ಇಬ್ಬರು ಹಾಗೆಯೇ ನಮ್ಮ ಕನ್ನಡ ಬಸವಪುರಾಣ ಕರ್ತೃವಾದ ಭೀಮಕವಿಯದು ಆಂಧ್ರಪ್ರದೇಶದ

ಕಡಪಾ ಜಿಲ್ಲೆಯ ತಾಲ್ಲೂಕು ಸ್ಥಳವಾದ 'ಸಿದ್ದವಟಪುರ'ವೇ ಈತನ ಜನ್ಮಸ್ಥಳ ಎಂಬುದನ್ನು ಬಹುತೇಕ ವಿದ್ವಾಂಸರು ಒಪ್ಪಿದ್ದಾರೆ.

**ಕಾಲ :**

ಭೀಮಕವಿಯು 'ಬಸವಪುರಾಣ' ಮುಕ್ತಾಯದ ಕಾಲವನ್ನು ನಿಖರವಾಗಿ ನೀಡಿರುವುದರಿಂದ ಕಾಲದ ವಿಚಾರವಾಗಿ ನಾವು ನಿರ್ದಿಷ್ಟತೆಯನ್ನು ತಾಳಬಹುದು. ಭೀಮಕವಿಯು ತನ್ನ ಕಾವ್ಯದ ಕೊನೆಯಲ್ಲಿ ಈ 'ಬಸವಪುರಾಣ'ವು ಪೂರ್ಣಗೊಂಡಿದ್ದನ್ನು ಹೀಗೆ ಹೇಳುತ್ತಾನೆ.

"ಕೋವಿದರು ಕೇಳ್ದೊಳ್ಳಿತೆನಲುಡು
ದೇವ ನಿಧಿನಯನೇಂದು ಸಂಖ್ಯೆಗ
ಳೋವಿ ಶಕವರುಷಂಗಳಾಗಲು ಸೌಮ್ಯವತ್ಸರದ
ಶ್ರಾವಣ ಬಹುಳ ಪಕ್ಷ ದಶಮೀ
ಜೀವವಾರದೊಳಾದಿ ವೃಷಭೇಂ
ದ್ರಾವತಾರದ ಬಸವಚರಿತೆ ಸಮಾಪ್ತವಾಯಿತ್ತು"

(ವಿದ್ಯಾಶಂಕರ ಎಸ್., ಬ.ಪು., ಸಂ.೬೦, ಪ.೯೨)

"ಈ ಪದ್ಯದ ಸೂಚನೆಯಂತೆ ಇಲ್ಲಿ ಉಡುದೇವ ಅಂದರೆ ಚಂದ್ರ, ಅವನ ಸಂಖ್ಯೆ–೧, ನಿಧಿ ಎಂದರೆ ಸಂಪತ್ತು ಅದರ ಸಂಖ್ಯೆ–೯, ಮತ್ತು ನಯನ ಎಂದರೆ ಕಣ್ಣು ಅವುಗಳ ಸಂಖ್ಯೆ–೨, ಇಂದು ಅಂದರೆ ಚಂದ್ರ ಅವನ ಸಂಖ್ಯೆ–೧, ಒಟ್ಟು ೧೯೨೧ ಆಯಿತು. ಇದನ್ನು ವಿಲೋಮವಾಗಿಟ್ಟರೆ ೧೨೯೧ ಆಗುತ್ತದೆ. ಇದು ಶಕವರ್ಷ. ಈ ಶಕವರ್ಷಕ್ಕೆ ೭೮ನ್ನು ಕೂಡಿಸಿದರೆ ಕ್ರಿ.ಶ. ಬರುತ್ತದೆ ೧೨೯೧+೭೮=೧೩೬೯ ಇದೇ ಭೀಮಕವಿಯ ಕಾಲ"(ರಾಜೂರ ವೀರಣ್ಣ(ಸಂ), ಭೃಂಗೀಶ್ವರ ದಂಡಕ, ಪು.೭೨–೭೩)

ಭೀಮಕವಿಯು ಈ ಮೇಲಿನ ಪದ್ಯದಲ್ಲಿ ಸೂಚಿಸಿರುವ ಹಿನ್ನೆಲೆಯಲ್ಲಿ ಕವಿ ಚರಿತಕಾರರು ಇವನ ಕಾಲವನ್ನು ಬೇರೆ ಬೇರೆ ರೀತಿಯಲ್ಲಿ ಚರ್ಚಿಸಿದ್ದಾರೆ.

* ಆರ್. ನರಸಿಂಹಾಚಾರ್ ಅವರು ಕ್ರಿ.ಶ.೧೩೬೯ ಎಂದು ಹೇಳಿದ್ದಾರೆ. (ಪ್ರ.ಸಂ.,ಪು.೪೯೬)
* ರಂ.ಶ್ರೀ. ಮುಗಳಿ ಅವರು ೧೪ನೇ ಶತಮಾನದ ಉತ್ತರಾರ್ಧ ಎಂದು ಹೇಳಿದ್ದಾರೆ. (ಕ.ಸಾ.ಚ.ಪು.೧೯೯)
* ತ.ಸು.ಶಾಮರಾಯ ಅವರು ಕ್ರಿ.ಶ.೧೩೬೦ ಎಂದು ಹೇಳಿ ೧೪ನೇ ಶತಮಾನದ ಕಡೆಯ ಭಾಗದಲ್ಲಿದ್ದವನು ಎಂದಿದ್ದಾರೆ. (ಕ.ಸಾ.ಚ.,ಪು.೭೯)
* ಟಿ.ವಿ.ಸುಬ್ಬಾರಾವ್ ಅವರು ೧೩೬೯ರಲ್ಲಿ ಕೃತಿ ಸಮಾಪ್ತವಾಯಿತು ಎಂದು ಹೇಳಬಹುದು. ಅಂದರೆ ೧೪ನೆಯ ಶತಮಾನದ ಮಧ್ಯಭಾಗದಲ್ಲಿ ಇವನು ಇದ್ದನು ಎಂದು ಅಭಿಪ್ರಾಯ ಪಡುತ್ತಾರೆ. (ಸಮಗ್ರ.ಕ.ಸಾ.ಚ. ಪು.೪೭೮)

ಈ ಎಲ್ಲಾ ಆಧಾರಗಳಿಂದ ನಾವು ಈ ಕವಿಯ ಕಾಲವನ್ನು ೧೪ನೇ ಶತಮಾನದ ಮಧ್ಯಭಾಗದಲ್ಲಿ

ಜೀವಿಸಿದ್ದು, ೧೩೬೯ರಲ್ಲಿ ಬಸವಪುರಾಣವನ್ನು ರಚನೆ ಮಾಡಿದ್ದಾನೆ ಎಂದು ನಿರ್ಣಯವನ್ನು ಮಾಡಬಹುದು.

**ಕೃತಿಗಳು :**

ಭೀಮಕವಿ ರಚನೆ ಮಾಡಿರುವುದು ೩ ಕೃತಿಗಳು ಅವು,

೧. 'ಬಸವಪುರಾಣ'

೨. 'ಭೀಮಕವೀಶ್ವರ ರಗಳೆ'(ಷಡಕ್ಷರ ರಗಳೆ)

೩. ಭೃಂಗೀದಂಡಕ

**೧. ಬಸವ ಪುರಾಣ :**

'ಬಸವಪುರಾಣ'ವು ಭೀಮಕವಿಯ ಪ್ರಧಾನ ಕಾವ್ಯ. ಈ ಕಾವ್ಯದ ವಿಸ್ತೃತ ಅಧ್ಯಯನವೇ ಈ ಮಹಾಪ್ರಬಂಧವಾಗಿರುವುದರಿಂದ ಇಲ್ಲಿ ಈ ಪುರಾಣ ರಚನೆಯ ಹಿನ್ನೆಲೆ, ಉದ್ದೇಶಗಳನ್ನು ಮಾತ್ರ ತಿಳಿಸಲಾಗಿದೆ. 'ಬಸವಪುರಾಣ' ಹಿಂದೆ ಹೇಳಿದಂತೆ ಇದು ತೆಲುಗಿನ ಪಾಲ್ಕುರಿಕೆ ಸೋಮನಾಥನ ಕಾವ್ಯದ ಭಾಷಾಂತರ ಕಾವ್ಯ. ಭಾಷಾಂತರವೆಂದರೆ ಇಲ್ಲಿ ನೇರವಾಗಿ ಮೂಲ ಕಾವ್ಯದ ಯಥಾವತ್ತಾದ ಭಾಷಾಂತರವಲ್ಲ. ಬದಲಾಗಿ ಪಾಲ್ಕುರಿಕೆ ಸೋಮನಾಥ ಹೇಳಿದ ವಿಷಯಗಳಿಗೆ ತನ್ನ ವಿಚಾರಗಳನ್ನು ಸೇರಿಸುವುದರ ಮೂಲಕ ಕೆಲವು ಭಾಗಗಳನ್ನು ವಿಸ್ತಾರ ಮಾಡಿದ್ದಾನೆ. ಮತ್ತು ಸೋಮನಾಥನಿಗೆ ತಿಳಿಯದೇ ಇದ್ದ ಕೆಲಸಂಗತಿಗಳನ್ನು ಹೊಸದಾಗಿ ಸೇರಿಸಿದ್ದಾನೆ. ಕೆಲವೊಂದು ಭಾಗಗಳನ್ನು ಸಂಕ್ಷಿಪ್ತವೂ ಮಾಡಿದ್ದಾನೆ. ಒಟ್ಟಾರೆಯಾಗಿ ಮೂಲದ ಕಥೆಯನ್ನು ಎಲ್ಲಿಯೂ ತಪ್ಪದಂತೆ ಕನ್ನಡೀಕರಿಸುವ ಮಹತ್ಕಾರ್ಯವನ್ನು ಭೀಮಕವಿ ತನ್ನ ಬಸವಪುರಾಣದಲ್ಲಿ ಮಾಡಿದ್ದಾನೆ.

ಭೀಮಕವಿಗೆ ಬಸವಣ್ಣನವರ ಮೇಲೆ ವಿಪರೀತ ಮೋಹವುಂಟಾಗಿ ಅವರ ಚರಿತ್ರೆಯನ್ನು ರಚಿಸಬೇಕೆಂಬ ಮಹದಾಸೆಯಾಗುತ್ತದೆ. ಆದರೆ ಬಡಮತಿಯಾದ ತಾನು ಬಸವರಾಜನ ಕಥೆಯನ್ನು ರಚಿಸುವುದು ಹೇಗೆ ಎಂದು ಒಂದು ದಿನ ನಿದ್ದೆ ಮಾಡುತ್ತಿರುವಾಗ ಪಾಲ್ಕುರಿಕೆ ಸೋಮನಾಥ ಮತ್ತು ತಂದೆಯಾದ ಶಿವದೇವನು ಕನಸಿನಲಿ ಬಂದು ಪ್ರಸಾದವನ್ನು ಕೊಟ್ಟು ಹೀಗೆ ಹೇಳುತ್ತಾರೆ.

"ಆವುದಕ್ಕನುಮಾನಿಸದಿರೊಲಿ
ದಾವ ಶಬ್ದಾರ್ಥಮುಮನಾದಡೆ
ಭಾವಿಸಲು ನಿನಗಜೆಪಿ ನಿನ್ನಾತ್ಮದೊಳಗಲದಿರ್ದು
ನಾವು ರಚಿಸುವೆವೆಸವ ಬಸವ ಕ
ಥಾವಿಸರಮಂ ಬರೆದುಕೋಯೆಂ
ದೋವಿದವರಾಜ್ಞೆಯನೆ ಶಿರದೊಳು ಧರಿಸಿ ಮುದವೆತ್ತು"

(ವಿದ್ಯಾಶಂಕರ ಎಸ್., ಬ.ಪು., ಸಂ.೧, ಪ.೧೫)

ಹೀಗೆ ನಾವು ನಿನ್ನ ಜೊತೆಗಿದ್ದು ನಿನಗೆ ಬಸವ ಕತೆಯನ್ನು ರಚಿಸಲು ಸಹಾಯ ಮಾಡುತ್ತೇವೆ ಎಂದು "ಮುನ್ನುಸುರ್ದುದನೆ ಕನ್ನಡಿಸಿ ಪೇಳೆಂದು" ಹೇಳಿದ ಕಾರಣ ಹೆಚ್ಚು ಆಯಾಸವಿಲ್ಲದೆಯೇ ಈ ಪುರಾಣವನ್ನು ರಚಿಸಿದ್ದೇನೆಂದು ಭೀಮಕವಿ ಹೇಳಿದ್ದಾನೆ. ಬಸವ ಚರಿತೆ, ಬಸವಕಥಾ, ಭಕ್ತಿಭಂಡಾರಿ ಚರಿತೆ, ಮುಂತಾದ ಹೆಸರುಗಳಿಂದ ಈ ಪುರಾಣವನ್ನು ಹೆಸರಿಸಿದ್ದಾನೆ.

**೨. ಭೀಮಕವೀಶ್ವರ ರಗಳೆ (ಷಡಕ್ಷರಿ ರಗಳೆ) :**

'ಷಡಕ್ಷರ ರಗಳೆ' ಎಂದು ಕರೆಯಲ್ಪಡುವ ಭೀಮಕವೀಶ್ವರ ರಗಳೆಯು ೧೦೫ ಪಾದಗಳಿಂದ ಕೂಡಿದ ಪುಟ್ಟ ಕಾವ್ಯ. ಷಡಕ್ಷರಿ ಮಂತ್ರದ ಹಿರಿಮೆಯೇ ಈ ರಗಳೆಯ ಕಥಾವಸ್ತು. ಪ್ರತೀ ಪಾದದ ಅಂತ್ಯವು 'ಓಂ ನಮಃ ಶಿವಾಯ' ಎನ್ನುವ ಮಂತ್ರದಿಂದ ಮುಕ್ತಾಯವಾಗುತ್ತದೆ. ಈ ರಗಳೆಯ ರಚನೆಗೆ ಹರಿಹರನ ಪ್ರಭಾವವಿರಬಹುದು ಎಂದು ಊಹಿಸಬಹುದು. ಉತ್ತಮವಾದ ಶಬ್ದ ಪಾಂಡಿತ್ಯದಿಂದ ರಚನೆಗೊಂಡಿದ್ದರೂ ಸಾಹಿತ್ಯದ ಗುಣ ಅಷ್ಟಾಗಿ ಕಂಡುಬರುವುದಿಲ್ಲವಾದ್ದರಿಂದ ಇದು ಪ್ರಾಮುಖ್ಯತೆಯನ್ನು ಗಳಿಸಿಲ್ಲ.

**೩. 'ಭೃಂಗೀದಂಡಕ' :**

ಸಿದ್ದನಂಜೇಶ ರಚನೆ ಮಾಡಿದ 'ರಾಘವಾಂಕ ಚರಿತೆ'ಯಲ್ಲಿ ಈ ದಂಡಕದ ಪ್ರಸ್ತಾಪ ಬರುತ್ತದೆ. ರಾಘವಾಂಕನ ಮಾರ್ಗದರ್ಶನದಲ್ಲಿ ಸಕಲ ವಿದ್ಯೆಗಳನ್ನು ಕಲಿತ ನಂತರ ಭೀಮಕವಿ ಹರಿಹರನ ಬಳಿಗೆ ಬಂದು ಆಶೀರ್ವಾದ ಪಡೆಯುತ್ತಾನೆ. ಆಗ ಹರಿಹರ ಅವನ ವಿದ್ಯೆಯನ್ನು ಪರೀಕ್ಷೆ ಮಾಡುವಾಗ ಭೀಮಕವಿಯು ಈ ಭೃಂಗೀಶ್ವರ ದಂಡಕವನ್ನು ಹೇಳಿದನಂತೆ. ಭೃಂಗೀ ಎಂದರೆ ನಂದಿ. ಇದು ನಂದಿಯ ಮಹಾತ್ಮ್ಯೆಯನ್ನು ವಿವರಿಸುವ ಪುಟ್ಟ ದಂಡಕ. ಇದು ಅಚ್ಚ ಕನ್ನಡ ಛಂದಸ್ಸುಗಳಲ್ಲಿ ಅತೀ ಪ್ರಾಚೀನವಾದ ಛಂದೋಪ್ರಕಾರ. ಕವಿರಾಜ ಮಾರ್ಗದಲ್ಲಿ ಇದರ ಪ್ರಸ್ತಾಪವಿದೆ. ಇದು ಗದ್ಯ ರೂಪದಲ್ಲಿದ್ದು, ಪ್ರಾರಂಭದಲ್ಲಿ ಒಂದು ಕೊನೆಯಲ್ಲಿ ಎರಡು ಕಂದ ಪದ್ಯಗಳಿವೆ.

ಪಾಲ್ಕುರಿಕೆ ಸೋಮನಾಥ ಮತ್ತು ಭೀಮಕವಿಯ ಕುರಿತಾಗಿ ಮೇಲಿನ ವಿವರಗಳು ತೆಲುಗು ಮತ್ತು ಕನ್ನಡ ಸಾಹಿತ್ಯ ಚರಿತ್ರೆಗಳಿಂದ ತಿಳಿದುಬರುತ್ತವೆ. ಇಲ್ಲಿನ ಮಾಹಿತಿಗಳು ಕವಿಗಳ ಹಾಗೂ ಅವರ ಕೃತಿಗಳ ಸಂಕ್ಷಿಪ್ತ ಪರಿಚಯವಾಗಿದ್ದು, ಮುಂದೆ ಈ ಸಂಶೋಧನಾ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಕನ್ನಡ ಹಾಗೂ ತೆಲುಗು ಬಸವಪುರಾಣಗಳನ್ನು ಸಮಗ್ರವಾಗಿ ತೌಲನಿಕ ದೃಷ್ಟಿಕೋನದಿಂದ ಅಧ್ಯಯನ ಮಾಡಬೇಕಾಗಿರುವುದರಿಂದ, ಒಟ್ಟಾರೆ ಕಥಾವಸ್ತುವನ್ನು ಸಂಕ್ಷಿಪ್ತವಾಗಿ ಮುಂದೆ ವಿವರಿಸಲಾಗಿದೆ.

**೨.೩. ತೆಲುಗು 'ಬಸವಪುರಾಣಮು' ಕಥಾವಸ್ತು :**

ತೆಲುಗು ವೀರಶೈವ ಸಾಹಿತ್ಯದಲ್ಲಿ ಪಾಲ್ಕುರಿಕೆ ಸೋಮನಾಥನು ಅಗ್ರಮಾನ್ಯ ಕವಿ. ಇವನು ಬಸವಣ್ಣನ ಚರಿತ್ರೆಯನ್ನು ಪುರಾಣ ಕಥೆಯಾಗಿ ನಿರೂಪಿಸಿ, ಅವನ ಘನ ಚರಿತ್ರೆಯನ್ನು ಜಗತ್ತಿಗೆ ಪರಿಚಯಿಸಿದವನಾಗಿದ್ದಾನೆ. ಶ್ರೀಶೈಲದಲ್ಲಿದ್ದುಕೊಂಡು ಅಲ್ಲಿದ್ದ ಕರಸ್ಥಲಿ ಸೋಮನಾಥ, ಮಲ್ಲಿನಾಥ,

ರೆಂಟಾಲ ಮಲ್ಲಿನಾಥ, ದೋಚಮಾಂಬೆ, ನೀಲಕಂಠಾಗ್ರಜ, ಗೋಡಗಿ ತ್ರಿಪುರಾರಿ ಮುಂತಾದವರಿಂದ ಬಸವಣ್ಣನ ಕಥೆಯನ್ನು ಕೇಳಿ, ಅವನ ಭವ್ಯ ವ್ಯಕ್ತಿತ್ವಕ್ಕೆ ಮಾರು ಹೋಗುತ್ತಾನೆ. ಬಸವಣ್ಣನ ವಿಚಾರಗಳು ಶೈವಾಚಾರನೀತಿ, ಭಕ್ತಿಯ ಸ್ವರೂಪ, ಸಾಮಾಜಿಕ ಕ್ರಾಂತಿ ಮುಂತಾದ ವಿಚಾರಗಳಿಂದ ಪ್ರಭಾವಿತನಾಗಿ ಅವನ ಮತ್ತು ಅವನ ಸಮಕಾಲೀನರ ವ್ಯಕ್ತಿತ್ವವನ್ನು, ಅವರು ರೂಪಿಸಿಕೊಂಡ ಜೀವನ ವಿಧಾನವನ್ನು ಸಮಾಜಕ್ಕೆ ದರ್ಶನ ಮಾಡಿಸಬೇಕೆಂಬ ಮಹಾದಾಸೆಯಿಂದ ಬಸವಣ್ಣನ ಚರಿತ್ರೆಯನ್ನು ರಚಿಸಲು ಮುಂದಾಗುತ್ತಾನೆ. ಈ ಚರಿತ್ರೆ ರಚನೆಗೆ ಮೇಲೆ ಉಲ್ಲೇಖಿಸಿದ ಎಲ್ಲಾ ಮಹನೀಯರು ಸಹಾಯಕರಾಗುತ್ತಾರೆ. ಹೀಗೆ ರೂಪಗೊಂಡು ಬೆಳೆದ ಪುರಾಣವೇ 'ಬಸವಪುರಾಣಮು'.

ಈ 'ಬಸವಪುರಾಣಮು' ಕಾವ್ಯವು ಒಟ್ಟು ಏಳು ಆಶ್ವಾಸಗಳನ್ನು ಒಳಗೊಂಡಿದ್ದು, ಸುಮಾರು ಆರು ಸಾವಿರದ ಮುನ್ನೂರಕ್ಕೂ ಹೆಚ್ಚಿನ ದ್ವಿಪದಗಳನ್ನು ಒಳಗೊಂಡ ಪುರಾಣ ಕೃತಿಯಾಗಿದೆ. ಇಲ್ಲಿ ಪ್ರಮುಖವಾಗಿ ಬಸವಣ್ಣನ ಚರಿತ್ರೆಯನ್ನು ಮುಖ್ಯ ವಸ್ತುವಾಗಿಟ್ಟುಕೊಂಡಿದ್ದರೂ ಸಾಂದರ್ಭಿಕವಾಗಿ ಪುರಾಣದುದ್ದಕ್ಕೂ ತಮಿಳನಾಡಿನ ಪುರಾತನರು, ಕರ್ನಾಟಕ ಮತ್ತು ತೆಲುಗು ನಾಡಿನ ನೂತನ ಶಿವಶರಣರ ಚರಿತ್ರೆಯು ಚಿತ್ರಿತವಾಗಿರುವುದು ವಿಶೇಷವಾಗಿದೆ. ಇದರಿಂದ ಪ್ರತಿಯೊಬ್ಬ ಸಾಮಾನ್ಯ ಶಿವಶರಣನ ಜೀವನ ಚರಿತ್ರೆಯನ್ನು ತಿಳಿಸುವಲ್ಲಿ ಈ ಪುರಾಣವು ಪ್ರಮುಖವಾದುದಾಗಿದೆ. ಹೀಗೆ ಸಮಗ್ರವಾಗಿ ಸಂಗ್ರಹಗೊಂಡು ರಚಿತವಾದ ಈ ಪುರಾಣದ ಕಥಾವಸ್ತುವನ್ನು ಸಂಕ್ಷಿಪ್ತವಾಗಿ ಮುಂದೆ ಪರಿಚಯಿಸಲಾಗಿದೆ.

'ಬಸವಪುರಾಣ'ದ ಮೊದಲ ಆಶ್ವಾಸದಲ್ಲಿ ಇಷ್ಟ ದೇವತಾ ಸ್ತುತಿಯಲ್ಲಿ ಶ್ರೀಶೈಲ ಮಲ್ಲಿಕಾರ್ಜುನನ್ನು ಮತ್ತು ಬಸವಣ್ಣ, ಪುರಾತನ, ನೂತನ ಶರಣರನ್ನು ಹಾಗೆಯೇ ಕರಸ್ಥಲ ಸೋಮನಾಥ, ದೋಚಮಾಂಬೆ ಮುಂತಾದ ಆಪ್ತರನ್ನು ಈ ಪುರಾಣದ ಶ್ರೋತೃ ಗೊಬ್ಬೂರು ವಿಭುವಾದ ಸಂಗನಮಾತ್ಯನನ್ನು ತಂದೆ-ತಾಯಿಯರಾದ ವಿಷ್ಣುರಾಮಿದೇವ, ಶ್ರೀಯಾದೇವಿಯನ್ನು ನೆನೆಯುತ್ತಾ ಅಸದೃಶ್ಯವೆನಿಸುವ 'ಬಸವಪುರಾಣಮು'ವನ್ನು ಆರಂಭಿಸುತ್ತಾನೆ. ಕಥಾರಂಭದಲ್ಲಿ ಶಿವನ ಕೈಲಾಸ(ರಜತಾದ್ರಿ)ದ ವರ್ಣನೆಯಿದೆ. ಶಿವನ ಒಡ್ಡೋಲಗಕ್ಕೆ ನಾರದ ಆಗಮಿಸಿ ಭೂಲೋಕದಲ್ಲಿ ಶಿವಭಕ್ತಿ ಕ್ಷೀಣಿಸಿ ಜನರಲ್ಲಿ ಭಕ್ತಿಯು ಇಲ್ಲವಾಗಿದೆಯೆಂದು ಶಿವನಲ್ಲಿ ವಿಜ್ಞಾಪಿಸುತ್ತಾನೆ. ಆಗ ಪರಮೇಶ್ವರನು ಅಲ್ಲಿಯೇ ಇದ್ದ ನಂದಿಯನ್ನು ಕರೆದು ಈ ನಂದಿಕೇಶ್ವರನಿಗೂ ನನಗೂ ಭೇದವೆಂಬುದಿಲ್ಲ, ಹಾಗಾಗಿ ಲೋಕ ಹಿತಾರ್ಥಕ್ಕಾಗಿ ನಂದಿಕೇಶ್ವರನು ಬಸವ ನಾಮದಿಂದ ಭೂಲೋಕದಲ್ಲಿ ಜನಿಸಿ ಲೋಕವನ್ನು ಮುನ್ನಡಿಸುತ್ತಾನೆಂದು ಹೇಳುವನು. ನಂತರ ಪಾರ್ವತಿಗೆ ಶಿಲಾದನ ತಪಸ್ಸು, ಆ ತಪಸ್ಸಿನಿಂದ ನಂದಿಕೇಶ್ವರನನ್ನು ಪುತ್ರನನ್ನಾಗಿ ಪಡೆದ ಕಥೆಯಿದೆ. ನಂದಿಕೇಶ್ವರನ ಅವತಾರದ ವಿಷಯ ಹೇಳಿದ ಮೇಲೆ ನಂದಿಕೇಶ್ವರನಿಗೆ ನೀನು ಭೂಲೋಕದಲ್ಲಿ ದ್ವಿತೀಯ ಶಂಭುವಾಗಿ ಜನಿಸಿ ಲೋಕವನ್ನುದ್ಧರಿಸು ಎಂದು ಶಿವನು ಆಜ್ಞಾಪಿಸುತ್ತಾನೆ. ಅಂತೆಯೇ ನಂದಿಕೇಶ್ವರ ಬಾಗೇವಾಡಿಯಲ್ಲಿ ಮಾದರಸ ಮತ್ತು ಮಾದಲಾಂಬೆಯರಿಗೆ ಮಗನಾಗಿ ಜನಿಸುತ್ತಾನೆ. ತಂದೆ-ತಾಯಿಯವರು ಮಗನಿಗೆ ಬಸವಣ್ಣ ಎಂದು ಹೆಸರಿಟ್ಟು, ಸಕಲ ವಿದ್ಯೆಗಳನ್ನು

ಕೊಡಿಸುತ್ತಾರೆ. ಬೆಳೆದ ಬಾಲಕ ಬಸವಣ್ಣನಿಗೆ ಮುಂಜಿಯ ಮಾಡುವ ವಿಚಾರದಲ್ಲಿ ತಂದೆ-ಮಗನಿಗೆ ಜಗಳವಾಗಿ ಅಕ್ಕ ನಾಗಮ್ಮನೊಡನೆ ಮನೆ ಬಿಟ್ಟು ಬಸವಣ್ಣ ಹೊರಟು ಹೋಗುತ್ತಾನೆ. ಮುಂಜಿ ಕಾರ್ಯಕ್ಕೆ ಬಂದ ಸೋದರಮಾವ ಬಲದೇವನು ತನ್ನ ಮಗಳು ಗಂಗಾಂಬಿಕೆಯನ್ನು ಬಸವಣ್ಣನಿಗೆ ಮದುವೆ ಮಾಡುತ್ತಾನೆ. ಅನಂತರ ಬಸವಣ್ಣ ಅಕ್ಕ ನಾಗಮ್ಮ, ಹೆಂಡತಿ ಗಂಗಾಂಬಿಕೆಯೊಡನೆ ಕಪ್ಪಡಿ ಸಂಗಮಕ್ಕೆ ಹೋಗಿ ಅಲ್ಲಿನ ಸಂಗಮನಾಥನನ್ನು ಪೂಜಿಸುತ್ತಾ ಕಾಲಕಳೆಯುತ್ತಾನೆ. ಒಮ್ಮೆ ಸಂಗಮೇಶ್ವರ ಪ್ರತ್ಯಕ್ಷನಾಗಿ ಬಸವಣ್ಣನಿಗೆ ನೀತಿ ಬೋಧನೆಯನ್ನು ಮಾಡುತ್ತಾನೆ. ಅಂದಿನಿಂದ ಆ ದೇವಸ್ಥಾನದಲ್ಲಿ ಭಕ್ತರೊಂದಿಗೆ ಪೂಜೆಗೈಯುತ್ತಾ, ದಾಸೋಹ ನೀಡುತ್ತಾ ಸುಖದಿಂದ ಇರುತ್ತಾನೆ. ಇಲ್ಲಿಗೆ ಪ್ರಥಮ ಆಶ್ವಾಸ ಮುಗಿಯುತ್ತದೆ.

ಎರಡನೆಯ ಆಶ್ವಾಸದಲ್ಲಿ ಬಿಜ್ಜಳನ ಆಸ್ಥಾನದಲ್ಲಿ ದಂಡನಾಯಕನಾಗಿದ್ದ ಹಾಗೂ ಬಸವಣ್ಣನ ಸೋದರಮಾವನೂ ಆದ ಬಲದೇವನು ತೀರಿಹೋಗಿರಲು, ಬಲದೇವನ ದಂಡನಾಯಕ ಸ್ಥಾನವನ್ನು ತುಂಬುವರು ಯಾರಾದರೂ ಇರುವರೇ ಎಂದು ಬಿಜ್ಜಳ ಕೇಳುತ್ತಾನೆ. ಆಗ ಅಲ್ಲಿದ್ದವರು ಬಲದೇವನ ಅಳಿಯ ಬಸವಣ್ಣನಿರುವನೆಂದು, ಅವನು ಈ ಪದವಿಗೆ ತಕ್ಕನಾಗಿರುವನೆಂದೂ ಸಲಹೆ ನೀಡುತ್ತಾರೆ. ಅಂತೆಯೇ ಬಿಜ್ಜಳ ಬಸವಣ್ಣನನ್ನು ಕರೆತರಲು ದೂತರನ್ನು ಕಳುಹಿಸುತ್ತಾನೆ. ಅವರು ಬಸವಣ್ಣನಲ್ಲಿಗೆ ಬಂದು ಬಿಜ್ಜಳನು ಹೇಳಿದ ವಿಚಾರವನ್ನು ತಿಳಿಸಿ, ತಾವು ದಯಮಾಡಿ ಬರಬೇಕೆಂದು ಕೇಳಿಕೊಳ್ಳುತ್ತಾರೆ. ಆಗ ಬಸವಣ್ಣ ಆಗಲಿ ಎನ್ನುತ್ತಾ ಸಮ್ಮತಿಸಿ ಬಂದು ಬಿಜ್ಜಳನ ದಂಡನಾಯಕ ಪದವಿಯನ್ನು ಸ್ವೀಕರಿಸುತ್ತಾನೆ. ಪದವಿ ಸ್ವೀಕರಿಸಿದ ಬಸವಣ್ಣ ಶಿವಭಕ್ತಿಯಲ್ಲಿರಬೇಕಾದ ಆಚಾರ-ವಿಚಾರಗಳ ಬಗೆಗೆ ಭಕ್ತಿಯ ಪ್ರತಿಜ್ಞೆಯನ್ನು ಮಾಡುತ್ತಾನೆ. ಅನಂತರ ಬಸವೇಶ್ವರನ ಶಿವಾಚಾರ ನೀತಿ, ಚನ್ನಬಸವಣ್ಣನ ಮಹಿಮೆ, ಚೆನ್ನಬಸವನು ಬಸವಣ್ಣನನ್ನು ಶಾಶ್ವತ ಸರ್ವಜ್ಞ, ವಿಶ್ವೇಶ, ಅಮಿತ ಪರಂಜ್ಯೋತಿಯ ಆಕಾರವೇ, ಸೃಷ್ಟಿ-ಸ್ಥಿತಿ-ಲಯ ಕತೃವೇ, ದಕ್ಷ ಕಟಾಕ್ಷ, ಗುರು ಪ್ರಸಾದಾಮೃತವೇ ಎಂದು ಮುಂತಾಗಿ ಸ್ತುತಿಸಿದ ವಿವರಗಳು ಬರುತ್ತವೆ. ನಂತರ ಅಲ್ಲಮನ ಆಗಮನವಾಗಿ ಬಸವಣ್ಣನನ್ನು ಕುರಿತು ಮುದ್ದಿನ ಬಸವ, ಸಂಗಮ ಬಸವ, ಪ್ರಸಾದದ ಬಸವ ಎಂದು ಭಕ್ತಿಯಿಂದ ಕೊಂಡಾಡುತ್ತಾನೆ. ಹಾಗೂ ಹಾರುವ ಹಕ್ಕಿಗಳಲ್ಲಿ, ಕೀಳು ಜಂತುಗಳಲ್ಲಿಯೂ ಬಸವಣ್ಣನೆಂದರೆ ಭಕ್ತಿಯ ಭಾವ ತುಂಬುತ್ತದೆ. ಕಡು ವಿಷಯವಾದರೂ ಅಮೃತವಾಗುತ್ತದೆ. ಶತೃಗಳೆಲ್ಲಾ ಮಿತ್ರರಾಗುತ್ತಾರೆ ಎಂದು ಅಲ್ಲಮ ಬಸವಣ್ಣನಿಗೆ ವಿಶೇಷ ಗೌರವ ಸೂಚಿಸಿ ಸ್ತುತಿಸುತ್ತಾನೆ. ನಂತರ ಪಾರ್ವತಿಯು ಪ್ರಮಥರಿಗೆ ಬೋನವಿಟ್ಟ ಕಥೆಯನ್ನು ಹೇಳುತ್ತಾನೆ. ಬದನೆಕಾಯಿಗಳನ್ನು ಲಿಂಗಗಳಂತೆ ಕಟ್ಟಿಕೊಂಡು ಬಂದ ಕಳ್ಳರನ್ನು ಲಿಂಗವಂತರನ್ನಾಗಿ ಮಾಡಿದ ಪವಾಡ ಕಥೆ, ಬಿಲ್ಲೇಶ ಮಲ್ಲಯ್ಯ ಕಥೆ, ಕಾಟಕೋಟನ ಕಥೆ, ಜೋಳವು ಮುತ್ತಾದ ಕಥೆ, ಮೊರಟದ ಬಂಕಯ್ಯನ ಕಥೆ, ಸಂಗಮೇಶನು ಬಸವನ ಮೂರನೆಯ ಕಣ್ಣನ್ನು ಕೇಳಿದ ಕಥೆ, ಮಜ್ಜಿಗೆ ಮಾರುವ ಗೊಲ್ಲತಿಯ ಕಥೆಯೊಂದಿಗೆ ಎರಡನೆಯ ಆಶ್ವಾಸ ಮುಗಿಯುತ್ತದೆ.

ಮೂರನೆಯ ಆಶ್ವಾಸದಲ್ಲಿ ಬಸವಣ್ಣನು ಭಂಡಾರದ ಹಣವನ್ನು ತನ್ನ ಭಕ್ತರಿಗಾಗಿ, ದಾಸೋಹಕ್ಕಾಗಿ ವ್ಯಹಿಸುತ್ತಿದ್ದಾನೆಂದು ಬಿಜ್ಜಳನಲ್ಲಿ ಕೆಲವರು ದೂರುತ್ತಾರೆ. ಆಗ ಬಸವಣ್ಣನು ತನ್ನ ಮಹಿಮೆಯಿಂದ ಭಂಡಾರದ ದ್ರವ್ಯವನ್ನು ನೂರ್ಮಡಿಯಾಗಿ ತೋರಿಸುತ್ತಾನೆ. ನಂತರ ಮಧುರ ಪಾಂಡ್ಯನ ಮಂತ್ರಿ ಚೊಕ್ಕನೈನಾರನ ಭಕ್ತಿಯಿಂದ ನರಿಗಳು ಕುರಿಗಳಾಗಿ ಬದಲಾದ ಸಂಗತಿಗಳನ್ನು ಬಸವಣ್ಣ ಬಿಜ್ಜಳನಿಗೆ ತಿಳಿಸುವ ವಿಚಾರಗಳು, ಬಸವನು ಬೇಡಿಬಂದ ಜಂಗಮನಿಗೆ ಹೆಂಡತಿಯ ಸೀರೆಯನ್ನು ನೀಡಿದ್ದು, ಹಾಗೆಯೇ ಹಿಂದೆ ತನ್ನಂತೆ ದಾನ ಮಾಡಿದ ಇಡಗುಡಿ ನಯನಾರ, ಜೇಡರ ದಾಸಿಮಯ್ಯ, ಪೆರ್ಮಾಡಿ, ಮಾನಕಂಜರರ ವಿವರಗಳು ಬರುತ್ತವೆ. ಅನಂತರ ಮುಗ್ಧ ಸಂಗಯ್ಯನ ಕಥೆ, ರುದ್ರಪಶುಪತಿಯ ಕಥೆ, ನಕ್ಕೈನೈನಾರು ಕಥೆ, ಬೆಜ್ಜ ಮಹಾದೇವಿಯ ಕಥೆ, ಕೋಳೂರು ಕೊಡಗೂಸು ಕಥೆ, ದೀಪದ ಕಲಿಯಾರ ಕಥೆ, ನಾಟ್ಯ ಮಿತ್ತಂಡಿಯ ಕಥೆ, ತನ್ನ ಕಣ್ಣುಗಳನ್ನೇ ಶಿವನಿಗರ್ಪಸಿದ ಕಣ್ಣಪ್ಪನ ಕಥೆ, ಸಕಲೇಶ ಮಾದಿರಾಜಯ್ಯನ ಕಥೆಯೊಂದಿಗೆ ಮೂರನೆಯ ಆಶ್ವಾಸ ಮುಗಿಯುತ್ತದೆ.

ನಾಲ್ಕನೆಯ ಆಶ್ವಾಸದಲ್ಲಿ ವೀರವ್ರತಾಚಾರಿ, ಜಂಗಮ ಶ್ರೇಷ್ಠನು, ನ್ಯಾಯನಿಷ್ಠುರನೂ ಆದ ಮಡಿವಾಳ ಮಾಚಯ್ಯನ ಕಥೆಯೊಂದಿಗೆ ಆರಂಭವಾಗುತ್ತದೆ. ಮಾಚಯ್ಯನು ಒಗೆದ ಬಟ್ಟೆಗಳೊಂದಿಗೆ ಪುರಬೀದಿಯಲ್ಲಿ ಬರುವಾಗ ಭವಿಗಳು ಶರಣರ ಬಟ್ಟೆಗಳನ್ನು ಸೋಕಿ ಮೈಲಿಗೆ ಮಾಡಿದರೆ ಅವರ ಶಿರ ಕಡಿಯುವೆನೆಂದು ಪ್ರತಿಜ್ಞೆ ಮಾಡಿರುತ್ತಾನೆ. ಒಮ್ಮೆ ಒಬ್ಬನು ಶರಣರ ಬಟ್ಟೆಗಳನ್ನು ಮುಟ್ಟಿ ಮೈಲಿಗೆ ಮಾಡಲು ಅವನನ್ನು ಮಾಚಯ್ಯ ಕೊಲ್ಲುವನು. ಆಗ ಕೆಲವರು ರಾಜನಿಗೆ ದೂರು ನೀಡುವುದು, ಮಡಿವಾಳನ ಮಹಿಮೆ, ಇರುವ ದಂಡಾರಿಯ ಕಥೆ, ಕೋಳಿ ಕೂಗುವ ಮುನ್ನವೇ ಹಲವು ಹೂದೋಟಗಳಲ್ಲಿ ಹೂವುಗಳನ್ನು ಕೊಯ್ದು ತಂದು ಲಿಂಗಾರ್ಚನೆ ಮಾಡುತ್ತಿದ್ದ ಬಾಹೂರ ಬ್ರಹ್ಮಯ್ಯನು ಮದವೇರಿದ ಆನೆಯನ್ನು ಕೊಂದು ನಂತರ ಪ್ರಾಣವನ್ನು ಕೊಟ್ಟ ಕಥೆ, ಶಂಕರ ದಾಸಿಮಯ್ಯನ ಕಥೆ, ನಿಂಬವ್ವೆಯ ಕಥೆ, ಮಾರು ವೇಷದಿ ಬಂದ ಶಿವನಿಗೆ ತನ್ನ ಮಗನನ್ನೇ ಬಲಿಕೊಟ್ಟು ಪ್ರಸಾದ ಸೇವನೆಗೆ ಅನುವು ಮಾಡಿದ ಭಕ್ತಸಿರಿಯಾಳನ ಕಥೆ, ಹಾಲಾಯುಧನ ಕಥೆ, ಪಾರ್ವತಿ–ಸಂಗಳವ್ವೆಯರ ಪ್ರಾರ್ಥನೆ, ಮಿಂಡನೈನಾರನ ಕಥೆ, ಬಾಣನ ಕಥೆ, ಕಲಿಕಾಮದೇವನ ಕಥೆ, ಅರಿವಾಳ ನಯನಾರ ಮೊದಲಾದವರ ಕಥೆಗಳು ಕೊನೆಯಲ್ಲಿ ಕುಂಬಾರ ಗುಂಡಯ್ಯನ ಕಥೆಗೆ ನಾಲ್ಕನೆಯ ಆಶ್ವಾಸ ಮುಗಿಯುತ್ತದೆ.

ಐದನೆಯ ಆಶ್ವಾಸವು ಕಿನ್ನರಿ ಬೊಮ್ಮಯ್ಯನ ಕಥೆಯೊಂದಿಗೆ ಆರಂಭವಾಗುತ್ತದೆ. ವೀರವ್ರತಾಚಾರಿ, ಅಘಟಿತ ವಿದ್ಯಾಪಂಡಿತನಾದ ಕಿನ್ನರಿ ಬೊಮ್ಮಯ್ಯನು ಬಸವಣ್ಣನ ಕೀರ್ತಿ ದೆಸೆ ದೆಸೆಗೆಲ್ಲಾ ಹಬ್ಬಿರಲು ಅವನನ್ನು ಕಾಣಬೇಕೆಂಬ ಮಹದಾಸೆಯಿಂದ ಬಂದು ತ್ರಿಪುರಾಂತಕ ದೇವಸ್ಥಾನದಲ್ಲಿ ಕುಳಿತಿದ್ದನು. ಅಲ್ಲಿಗೆ ಒಬ್ಬ ವಿಟನು ತನ್ನ ವೇಶ್ಯೆಯ ಆಸೆ ನೆರವೇರಿಸಲು ಕುರಿಯೊಂದನ್ನು ಅಟ್ಟಿಸಿಕೊಂಡು ಬಂದನು. ಇದನ್ನು ಕಂಡ ಕಿನ್ನರಯ್ಯನು ಅದನ್ನು ರಕ್ಷಣೆ ಮಾಡಬೇಕೆಂದು ನಿಶ್ಚಯಿಸಿ ಆ ವಿಟನಿಗೆ ಒಂದು ಸಾವಿರ ಹೊನ್ನನ್ನು ಕೊಟ್ಟು ಕುರಿಯನ್ನು ರಕ್ಷಣೆ ಮಾಡಿದನು. ಆಗ ವಿಟನು ಆ ಹಣದಲ್ಲಿ ಬೇರೊಂದು ಕುರಿಯನ್ನು ಕೊಂಡು ಹೋಗಲು ಇದು ಬೇರೆ ಕುರಿಯೆಂದು ತಿಳಿದ ವೇಶ್ಯೆ ಅವನನ್ನು ತಿರಸ್ಕರಿಸುತ್ತಾಳೆ.

ಇದರಿಂದ ಅವಮಾನಿತನಾದ ಆ ವಿಟನು ಮತ್ತೆ ಮೊದಲಿನ ಕುರಿಯನ್ನು ತರಲು ಹೋಗುತ್ತಾನೆ. ಅಲ್ಲಿ ಕಿನ್ನರಯ್ಯನಿಂದ ಹತನಾಗುತ್ತಾನೆ. ಈ ದೂರು ರಾಜನಿಗೆ ಹೋಗುತ್ತದೆ. ಕೊನೆಗೆ ತ್ರಿಪುರಾಂತಕನಿಂದ ಸತ್ಯವನ್ನು ನುಡಿಸಿ ಸತ್ತ ವಿಟನನ್ನು ಬದುಕಿಸುತ್ತಾನೆ.

ಕಲಕೇತ ಬ್ರಹ್ಮಯ್ಯನು ಮಹಾಶಿವಭಕ್ತ. ಶಿವನ ನಾಮಸ್ಮರಣೆ ಮಾಡುತ್ತಾ, ದಾಸೋಹ ನೀಡುತ್ತಾ ಜೀವನ ಸಾಗಿಸುತ್ತಿರುತ್ತಾನೆ. ಒಮ್ಮೆ ಒಬ್ಬ ಶಿವಭಕ್ತ ಕಿನ್ನರ ಬ್ರಹ್ಮಯ್ಯನನ್ನು ನೋಡಲೆಂದು ಬರುವಾಗ ಬಳಲಿ ಆಯಾಸಗೊಂಡು ಕಲಕೇತ ಬ್ರಹ್ಮಯ್ಯನ ಸನ್ನಿಧಿಯಲ್ಲಿ ಪ್ರಶಾಂತವಾಗಿ ಮಲಗಿರುತ್ತಾನೆ. ಅಲ್ಲಿಗೆ ಬಂದ ಕಲಕೇತ ಬ್ರಹ್ಮಯ್ಯ ಈ ರೀತಿ ಕಾಲುಗಳು ಬಿರಿಯುವಂತೆ ನಡೆದು ಬರಲು ಕಾರಣವೇನೆಂದು ಕೇಳುತ್ತಾನೆ. ಅದಕ್ಕೆ ಆ ಶಿವಭಕ್ತ ತಾನು ಕಿನ್ನರ ಬ್ರಹ್ಮಯ್ಯನ ಬಳಿ ಅಪಾರ ಹೊನ್ನನ್ನು ಬೇಡಲು ಹೋಗುತ್ತಿದ್ದೆ ಎಂಬುದಾಗಿ ತಿಳಿಸುತ್ತಾನೆ. ಆಗ ಕಲಕೇತ ಬ್ರಹ್ಮಯ್ಯ ಅಲ್ಲಿಯೇ ಇದ್ದ ಒಂದು ಕಲ್ಲನ್ನು ಗುದ್ದಿ ಅಪಾರ ಧನ-ಕನಕ ರಾಶಿಯನ್ನು ಸೃಷ್ಟಿಸುತ್ತಾನೆ. ಇದನ್ನು ನೋಡಿದ ಶಿವಭಕ್ತ ಬಸವಣ್ಣನಿಗೆ ಈ ವಿಷಯವನ್ನು ಮುಟ್ಟಿಸುತ್ತಾನೆ. ಬಸವಣ್ಣ ಮತ್ತು ಕಿನ್ನರಿ ಬ್ರಹ್ಮಯ್ಯ ಬಂದು ಕಲಕೇತ ಬ್ರಹ್ಮಯ್ಯನ ಮಹಿಮೆಯನ್ನು ಕಂಡು ಆಶ್ಚರ್ಯ ಚಕಿತರಾಗಿ ಅವನಿಗೆ ನಮಸ್ಕರಿಸುತ್ತಾರೆ. ಅನಂತರ ಕಟ್ಟಿಗೆಯನ್ನು ಮಾರಿ ಅದರಿಂದ ಬಂದ ಹಣದಲ್ಲಿ ದಾಸೋಹ ಮಾಡುತ್ತಿದ್ದ ಮೋಳಿಗೆ ಮಾರಯ್ಯನ ಕಥೆ, ಕಳ್ಳತನ ಮಾಡುತ್ತಾ ಅದರಿಂದ ಬಂದ ಹಣದಲ್ಲಿ ಜಂಗಮ ದಾಸೋಹ ಮಾಡುವ ಕನ್ನದ ಬ್ರಹ್ಮಯ್ಯನ ಕಥೆ, ಮುಸಿಡಿ ಚೌಡಯ್ಯನ ಪವಾಡಗಳಾದ ಆಕಾಶದಲ್ಲಿ ಕಂಡ ತಾಪಸಿಯ ಶವಕ್ಕೆ ಪ್ರಾಣ ನೀಡಿದ್ದು, ಹರಿಯುವ ನದಿಯನ್ನು ದಾರಿ ಬಿಡುವಂತೆ ಮಾಡಿದ್ದು, ಆಲದ ಮರದ ಕೆಳಗೆ ಮಲಗಿದ್ದ ಗೂಳಿಗಳಿಗೆ ಪ್ರಾಣ ಕೊಟ್ಟ ಪವಾಡಗಳ ಚಿತ್ರಣವಿದೆ. ಸುರಗಿ ಚೌಡಯ್ಯನ ಕಥೆ, ಕರಡಿಗಳಾಗಿದ್ದ ಗಂಧರ್ವರು ತೆಲುಗು ಜೊಮ್ಮಯ್ಯನಿಂದ ಶಾಪ ಮುಕ್ತರಾಗುವ ಕಥೆಗೆ ಐದನೆಯ ಆಶ್ವಾಸ ಮುಗಿಯುತ್ತದೆ.

ಆರನೆಯ ಆಶ್ವಾಸವು ಏಕಾಂತ ರಾಮಯ್ಯನ ಕಥೆಯೊಂದಿಗೆ ಆರಂಭವಾಗುತ್ತದೆ. ಏಕಾಂತ ರಾಮಯ್ಯನು ಧರ್ಮನಿಷ್ಠಭಕ್ತ. ಒಮ್ಮೆ ಶಿವಾಲಯಕ್ಕೆ ಜೈನನೊಬ್ಬ ಚಪ್ಪಲಿಗಾಲಿನಲ್ಲಿ ಪ್ರವೇಶಿಸುತ್ತಾನೆ. ಇದನ್ನು ಕಂಡ ರಾಮಯ್ಯ ಆ ಜೈನನನ್ನು ಬೈಯ್ಯುತ್ತಾ 'ಮುಂದಡಿಯಿಟ್ಟರೆ ನಿನ್ನ ಕಾಲುಗಳನ್ನು ಕಡಿಯುತ್ತೇನೆ' ಎಂದು ಹೇಳುತ್ತಾನೆ. ಆಗ ಆ ಜೈನನು ಇದು ಬಸದಿ ಇಲ್ಲಿರುವವನು ಜಿನನು. ನಿಜವಾಗಿಯೂ ಇಲ್ಲಿ ಶಿವನಿರುವುದಾದರೆ ನಿನ್ನ ತಲೆಯನ್ನು ಕಡಿದುಕೊಂಡು ಮತ್ತೆ ತಲೆಯನ್ನು ಪಡೆಯುವೆಯೋ ಎಂದು ಸವಾಲು ಹಾಕುತ್ತಾನೆ. ಈ ಮಾತುಕೇಳಿ ಕೋಪಗೊಂಡ ಏಕಾಂತ ರಾಮಯ್ಯ ಇವನನ್ನು ಕೊಲ್ಲುವುದು ತಡವಲ್ಲ, ಆದರೆ ಇವನಿಗೆ ಶಿವನ ಭಕ್ತಿಯನ್ನು ತೋರಿಸಬೇಕೆಂದು ತನ್ನ ತಲೆಯನ್ನು ಕತ್ತರಿಸಿಕೊಂಡು ಮತ್ತೆ ತಲೆಯನ್ನು ಪಡೆಯುತ್ತಾನೆ. ಇದನ್ನು ಕಂಡ ಜೈನನು ತಪ್ಪಿನ ಅರಿವಾಗಿ ರಾಮಯ್ಯನಿಗೆ ಕೈ ಜೋಡಿಸುತ್ತಾನೆ. ಈ ಕಥೆಯಾದ ನಂತರ ತಮಿಳನಾಡಿನ ಪುರಾತನರಾದ ಇರುತ್ತಾಂಡಿಯ ಕಥೆ, ಪಿಳ್ಳೈನೈನಾರನ ಕಥೆ, ನಿಡುಮಾರನ ಕಥೆ, ನಮಿನಂದಿಯ ಕಥೆ, ಬೌದ್ಧರನ್ನು ಪ್ರತಿರೋಧಿಸಿದ ಸಾಂಖ್ಯತೊಂಡನ ಕಥೆ, ತರ್ಕದಲ್ಲಿ ಜಿನ ಸಮಯಿಗಳನು ಸೋಲಿಸಿದ

ಕೋವೂರ ಬ್ರಹ್ಮಯ್ಯನ ಕಥೆ, ಪೊಟ್ಲ ಚೆರುವಿನಲ್ಲಿದ್ದ ಜೇಡರ ದಾಸಿಮಯ್ಯ-ಸುಗ್ಗಲದೇವಿಯ ಕಥೆ, ಸಾವಿರದ ಏಳನೂರು ಬಸದಿಗಳ ಮಧ್ಯೆ ಒಂದು ಶಿವಾಲಯವನ್ನು ಕಟ್ಟಿ ಆ ಶಿವಾಲಯವನ್ನು ಹಾಳುಮಾಡಲು ಬಂದ ಜೈನರನ್ನು ಎದುರಿಸಿ ನಿಂತ ಹಿರಿಯ ನಾಚಯ್ಯನ ಕಥೆ, ಹುಳಿಗರ ಎಂಬ ಪುರದ ಶೂಲಿಯ ಭಕ್ತನಾದ ಸೋಮಣ್ಣನ ಕಥೆ, ಜೈನನ ಹೆಂಡತಿಯಾದರೂ ಶಿವಭಕ್ತಿಯನ್ನು ಮೈದುಂಬಿಕೊಂಡಿದ್ದ ವೈಜಕವ್ವೆಯ ಕಥೆ, ನಂತರ ಸೊಡ್ಡಳ ಬಾಚಯ್ಯನ ಕಥೆ, ವೀರಶಂಕರನ ಕಥೆ, ಶಿವಲೆಂಕ ಮಂಚಯ್ಯನ ಕಥೆಯೊಂದಿಗೆ ಆರನೆಯ ಆಶ್ವಾಸ ಮುಕ್ತಾಯವಾಗುತ್ತದೆ.

ಕೊನೆಯ ಏಳನೆಯ ಆಶ್ವಾಸದಲ್ಲಿ ಬಸವಣ್ಣನು ಕಲ್ಯಾಣ ಪಟ್ಟಣವನ್ನೆಲ್ಲಾ ಹೊಲೆಯರ ಪಟ್ಟಣವನ್ನಾಗಿ ಮಾಡಿದನೆಂದು, ಹೊಲೆಯರ ಕಾಲಿಗೆ ಬೀಳುತ್ತಾನೆಂದೂ, ಅವರುಂಡು ಮಿಕ್ಕಿದ್ದನ್ನು ಉಣ್ಣುವನೆಂದೂ, ಈ ನಮ್ಮ ವಸುಧೆಯನ್ನು ಹೊಲೆಗೆಡುಸುತ್ತಿರುವನೆಂದೂ ಬಿಜ್ಜಳನಿಗೆ ಕೆಲವರು ದೂರುತ್ತಾರೆ. ಇದನ್ನು ವಿಚಾರ ಮಾಡಬೇಕೆಂದು ಬಸವಣ್ಣನನ್ನು ಕರೆಸಿದ ಬಿಜ್ಜಳ ಅರಮನೆಯ ಹೊರಗಡೆಯೇ ಓಲಗವನ್ನೇರ್ಪಡಿಸುತ್ತಾನೆ. ನಂತರ ಬಸವಣ್ಣ ಮಾಡಿದ ತಪ್ಪನ್ನು ತಿಳಿಸುವನು. ಆಗ ಬಸವಣ್ಣ ಹೊಲೆಯರ ಭಕ್ತಿ ಮತ್ತು ಚಾರಿತ್ರ್ಯವನ್ನು ಬಿಜ್ಜಳನಿಗೆ ತಿಳಿಸುತ್ತಾ ತಾನು ಮಾಡುವ ಕಾರ್ಯದಲ್ಲಿ ಯಾವ ತಪ್ಪುಗಳೂ ಇಲ್ಲವೆಂದು ಸ್ಪಷ್ಟಪಡಿಸುತ್ತಾನೆ. ಅನಂತರ ಹಾವಿನಹಾಳ ಕಲ್ಲಯ್ಯನ ಕಥೆಯಲ್ಲಿ ಕಲ್ಲಯ್ಯನನ್ನು ಕಚ್ಚಿದ ಹಾವು ತಾನೇ ಸಾಯುತ್ತದೆ. ಇದನ್ನು ಕಂಡ ಪುರಜನರೆಲ್ಲಾ ಆಶ್ಚರ್ಯರಾಗುತ್ತಾರೆ. ಅಂದಿನಿಂದ ಕಲ್ಲಯ್ಯ ಮಹಾಪುರುಷನಾಗುತ್ತಾನೆ. ಗೊಬ್ಬೂರಿನ ಬಬ್ಬಿ ಬಾಚಯ್ಯನ ಕಥೆ, ಮಾದರ ದೂಡಯ್ಯನ ಕಥೆ, ಭಾಸನ ಭೀಮಯ್ಯನ ಕಥೆ, ಶ್ವಪಚಯ್ಯನ ಕಥೆ, ಕುಷ್ಟ ರೋಗದಿಂದ ಅಪಹಾಸ್ಯಗೊಂಡು ಈ ರೋಗವನ್ನು ವಾಸಿಮಾಡಿಕೊಳ್ಳದೇ ಈ ಊರಿಗೆ ಬರುವುದಿಲ್ಲವೆಂದು ಶಪಥ ಮಾಡಿದ ಗುಡ್ಡವ್ವೆಯ ಕಥೆ, ಶಿವನಾಗಮಯ್ಯನ ಶ್ರೀ ಹಸ್ತದಿಂದ ಹಾಲು ಸುರಿಸಿದ ಕಥೆ, ಅನಂತರ ಕಲ್ಯಾಣಪುರದ ಕೆಲವು ಶರಣರ ಕಥೆಗಳು, ಬೇಡರು ಮಾಡಿದ ತಕರಾರು, ಬಸವಣ್ಣನು ವಿಷವನ್ನು ಕುಡಿದಿದ್ದು, ಸವರದ ನಾಚಯ್ಯನ ಕಥೆಯ ನಂತರ ಅಲ್ಲಯ್ಯ-ಮಧುಪಯ್ಯರ ಕಥೆಯಲ್ಲಿ ಬಿಜ್ಜಳ ಇವರಿಬ್ಬರ ಕಣ್ಣು ಕೀಳಿಸಿದ್ದು, ಬಸವಣ್ಣ ಬಿಜ್ಜಳನ ಮೇಲೆ ಕೋಪಗೊಂಡು ಕಲ್ಯಾಣವನ್ನು ತೊರೆದು ಹೋಗುತ್ತಾನೆ. ಜಗದೇವ ಮಲ್ಲೆ ಬೊಮ್ಮಯ್ಯರು ಬಿಜ್ಜಳನನ್ನು ಕೊಲ್ಲುವರು ಕೊನೆಯಲ್ಲಿ ಬಸವಣ್ಣ ಸಂಗಮನಾಥನಲ್ಲಿ ಐಕ್ಯವನ್ನು ಹೊಂದುವುದರೊಂದಿಗೆ 'ಬಸವಪುರಾಣಮು'ವು ಮುಕ್ತಾಯವಾಗುತ್ತದೆ.

**೨.೪. ಕನ್ನಡ 'ಬಸವಪುರಾಣ' ಕಥಾವಸ್ತು :**

ಬಸವಣ್ಣನ ಬದುಕಿನ ವಿವರಗಳನ್ನೊಳಗೊಂಡ ಸಮಗ್ರ ಚರಿತ್ರೆಯನ್ನು ಕನ್ನಡದಲ್ಲಿ ಮೊದಲು ಪರಿಚಯಿಸಿದವನು ಹರಿಹರ. 'ಬಸವರಾಜದೇವರ ರಗಳೆ'ಯಲ್ಲಿ ಬಸವಣ್ಣನ ಜೀವನವನ್ನು ಏಕವ್ಯಕ್ತಿ ನೆಲೆಯಲ್ಲಿ ಚಿತ್ರಿಸಲಾಗಿದೆ. ಹರಿಹರನಿಗೆ ಕೇವಲ ಬಸವಣ್ಣನ ಚರಿತ್ರೆಯನ್ನು, ಅವನ ಭಕ್ತಿಯ ಮಹತ್ವವನ್ನು ಸಾರುವ ಉದ್ದೇಶವಿಟ್ಟುಕೊಂಡು ರಚನೆ ಮಾಡಿದ್ದಾನೆ. ಇವನ ನಂತರ ಕನ್ನಡ ಸಾಹಿತ್ಯದಲ್ಲಿ ಬಸವಣ್ಣನ ಚರಿತ್ರೆಯನ್ನು ರಚನೆ ಮಾಡಿದ ಕೀರ್ತಿ ಭೀಮಕವಿಗೆ ಸಲ್ಲುತ್ತದೆ. ಭೀಮಕವಿ ವಿಶಾಲ ದೃಷ್ಟಿಕೋನದಿಂದ

ಬಸವಣ್ಣನ ಜೀವನವನ್ನು ಚಿತ್ರಿಸಿದ್ದಾನೆ. ಇವನ ಬಸವಪುರಾಣ ಕೃತಿಯಲ್ಲಿ ಬಸವಣ್ಣನ ಚರಿತ್ರೆಯ ಜೊತೆಜೊತೆಗೆ ಆ ಕಾಲದ ಅನೇಕ ಶಿವಶರಣರ ಜೀವನ ಚರಿತ್ರೆಗಳೂ ಚಿತ್ರಿಸಲ್ಪಟ್ಟಿವೆ. ಹನ್ನೆರಡನೆಯ ಶತಮಾನದಲ್ಲಿ ಬಾಳಿದ ಪ್ರಮುಖ ಶಿವಭಕ್ತ, ಶಿವಭಕ್ತೆಯರು ರೂಪಿಸಿಕೊಂಡಿದ್ದ ಜೀವನ ವಿಧಾನಗಳು, ಬದುಕಿನ ಕ್ರಮಗಳು, ಅವರ ಭಕ್ತಿಯ ಮಾರ್ಗ, ದೇವರನ್ನು ಕಾಣುವ ಮತ್ತು ಒಲಿಸಿಕೊಳ್ಳುವ ರೀತಿ ಮುಂತಾದ ವಿಷಯಗಳು ಈ ಕೃತಿಯಲ್ಲಿ ಚಿತ್ರಿತವಾಗಿರುವುದರಿಂದ ಬಸವಪುರಾಣ ಕೃತಿಯು ವೀರಶೈವ ಸಾಹಿತ್ಯದಲ್ಲಿ ಪ್ರಮುಖ ಸ್ಥಾನವನ್ನು ಪಡೆದುಕೊಂಡಿದೆ.

ಈ 'ಬಸವಪುರಾಣ' ಕೃತಿಯು ಮೂಲ ಮತ್ತು ರಚನೆಗೆ ಪ್ರೇರಣೆ ಒದಗಿಸಿದ ಕೃತಿ ತೆಲುಗಿನ ಪಾಲ್ಕುರಿಕೆ ಸೋಮನಾಥನ 'ಬಸವಪುರಾಣಮು' ಎಂಬುದನ್ನು ಭೀಮಕವಿ ಕಾವ್ಯದ ಆರಂಭದಲ್ಲಿಯೇ ಹೇಳಿದ್ದಾನೆ. ಹಾಗಾಗಿ ತೆಲುಗು ಬಸವಪುರಾಣಮುವಿನ ಕಥಾವಸ್ತುವನ್ನಿಟ್ಟುಕೊಂಡು ಭೀಮಕವಿ ಕನ್ನಡದಲ್ಲಿ ಹೇಗೆ ತನ್ನ ಕಾವ್ಯವನ್ನು ರಚನೆ ಮಾಡಿದ್ದಾನೆಂಬುದು ಮುಖ್ಯ. ಹಾಗಾಗಿ ಇಲ್ಲಿ ಕನ್ನಡ 'ಬಸವಪುರಾಣ'ದಲ್ಲಿನ ಮುಖ್ಯ ಕಥಾವಸ್ತು ಏನಿದೆ ಎಂಬುದನ್ನು ಸಂಕ್ಷಿಪ್ತವಾಗಿ ಇಲ್ಲಿ ವಿವರಿಸಲಾಗಿದೆ.

'ಬಸವಪುರಾಣ' ಕೃತಿಯು ಒಟ್ಟು ಎಂಟು ಕಾಂಡ, ಆರವತ್ತು ಸಂಧಿ, ಮೂರು ಸಾವಿರದ ಆರನೂರು ಇಪ್ಪತ್ತಾರು (೩೬೨೬) ಷಟ್ಪದಿ ಪದ್ಯಗಳನ್ನು ಒಳಗೊಂಡಿರುವ ಬೃಹತ್ ಕಾವ್ಯವಾಗಿದೆ. ಈ ರೀತಿ ಬೃಹತ್ ಕಾವ್ಯಾವು ರೂಪುಗೊಳ್ಳಲು ಮುಖ್ಯ ಕಾರಣವಾಗಿರುವುದು ಕವಿಯೇ ಹೇಳುವಂತೆ ಇದು,

"ಆದಿಲಿಂಗ ರಹಸ್ಯಸಿದ್ದಾಂ
ತಂದಿ ವೇದ ಪುರಾಣ ಸಮ್ಮತ
ವಾದ ಬಸವ ಪುರಾತನದ ಗೀತಾರ್ಥ ಮಾತೃಕವಿ
ಕೋದ ಮಣಿಗಣ ಸೂತ್ರದಂತಿರೆ
ಆದಿಗಣಚರಿತಂಗಳೊಳು ಸಂ
ವೇದಿಸಲು ಬಸವನ ಚರಿತೆಯಂ ಬಣ್ಣಿಸುವೆನೊಸೆದು"

(ವಿದ್ಯಾಶಂಕರ ಎಸ್., ಬ.ಪು., ಸಂಧಿ.೧, ಪದ್ಯ.೨೩)

ಬಸವನ ಚರಿತೆಯ ಜೊತೆಗೆ ಪುರಾತನ ಭಕ್ತರ(ಆದಿಗಣ) ಚರಿತ್ರೆಯನ್ನು ಸೇರಿಸಿರುವುದರಿಂದ ಈ ಕಾವ್ಯ ತನ್ನ ಗಾತ್ರವನ್ನು ಹೆಚ್ಚಿಸಿಕೊಂಡಿದೆ.

'ಬಸವಪುರಾಣ'ದ ಮೊದಲ ಕಾಂಡದಲ್ಲಿ ನಾಲ್ಕು ಸಂಧಿಗಳಿವೆ. ಕಥಾರಂಭದಲ್ಲಿ ಸಾಮಾನ್ಯವಾಗಿರುವ ಇಷ್ಟದೇವತಾಸ್ತುತಿ, ಹಿರಿಯ ಕವಿಗಳ ಸ್ತುತಿ, ಕಾವ್ಯ ರಚನೆಗೆ ಕಾರಣ, ಕಾವ್ಯ ವಸ್ತು ಮುಂತಾದ ವಿಷಯಗಳಿವೆ. ಕೈಲಾಸದ ವರ್ಣನೆಯೊಂದಿಗೆ ಕಾವ್ಯ ಆರಂಭವಾಗುತ್ತದೆ. ಶಿವನ ಒಡ್ಡೋಲಗ, ಅಲ್ಲಿಗೆ ನಾರದ ಬಂದು ಭೂಲೋಕದಲ್ಲಿ ಶಿವಧರ್ಮ ಇಲ್ಲವಾಗಿ ಕೆಲ ಜನರು ಅತಿ ಸುಖ ಪರವಶದಿಂದ ಮೆರೆಯುತ್ತಿರುವರು. ಹಾಗಾಗಿ ಶಿವಧರ್ಮವನ್ನು ಗಟ್ಟಿಗೊಳಿಸಲು ಅದರ ಮಹತ್ವವನ್ನು ಜನರಿಗೆ

ತಿಳಿಸುವ ಸಲುವಾಗಿ ತಾವು ಭೂಲೋಕಕ್ಕೆ ಬರಬೇಕೆಂದು ನಾರದ ಭಿನ್ನವಿಸುತ್ತಾನೆ. ಆಗ ಶಿವನು ಅಲ್ಲಿಯೇ ಇದ್ದ ನಂದಿಯನ್ನು ಕರೆದು ನಂದಿಗೂ ನನಗೂ ಯಾವುದೇ ಬೇಧವಿಲ್ಲದಿರುವುದರಿಂದ ಇವನು ಭೂಲೋಕಕ್ಕೆ ಬಸವ ನಾಮದಿಂದ ಬಂದು ಜನಿಸುತ್ತಾನೆ. ಶಿವಧರ್ಮವನ್ನು ಕಾಪಾಡುತ್ತಾನೆ ಎಂದು ಭರವಸೆ ನೀಡುತ್ತಾನೆ. ಅನಂತರ ಪಾರ್ವತಿಗೆ ಈ ನಂದಿಯು ಶಿಲಾದ ಮುನಿಗೆ ಮೂರುಕೋಟಿ ವರ್ಷ ತನ್ನನ್ನು ಕುರಿತು ಮಾಡಿದ ತಪಸ್ಸಿನ ಫಲವಾಗಿ ಹುಟ್ಟಿದ ಕತೆಯನ್ನು ಹೇಳುತ್ತಾನೆ. ನಂತರ ಶಿವನ ಅಪ್ಪಣೆಯ ಮೇರೆಗೆ ನಂದಿಯು ಭೂಲೋಕಕ್ಕೆ ಬರುತ್ತಾನೆ.

ಕರ್ನಾಟಕದ ಇಂಗಳೇಶ್ವರ ಬಾಗೇವಾಡಿಯಲ್ಲಿ ಮಾದರಸ ಮತ್ತು ಮಾದಲಾಂಬೆ ಎಂಬ ದಂಪತಿಗಳಿಗೆ ಹಲವು ವರ್ಷಗಳು ಕಳೆದರು ಮಕ್ಕಳಾಗಿರುವುದಿಲ್ಲ. ಜೋಯಿಸರ ಸಲಹೆಯಂತೆ ನಂದಿಪೂಜೆ ಮಾಡುತ್ತಾರೆ. ಇದರ ಫಲವೆಂಬಂತೆ ಮಾದಲಾಂಬೆ ಗರ್ಭವತಿಯಾಗುತ್ತಾಳೆ. ಸುಂದರವಾದ ಗಂಡು ಮಗುವಿಗೆ ಜನ್ಮ ನೀಡಿದ ಮಾದಲಾಂಬೆ ತನ್ನ ಹರಕೆಯಂತೆ ಬಸವ ಎಂದು ನಾಮಕರಣ ಮಾಡುತ್ತಾಳೆ. ಬಸವಣ್ಣನಿಗೆ ೧೪ ವರ್ಷಗಳಾದ ಬಳಿಕ ತಂದೆ ಉಪನಯನ ಮಾಡಬೇಕೆಂದುಕೊಂಡಾಗ ಇಬ್ಬರಲ್ಲೂ ಈ ವಿಚಾರವಾಗಿ ವಾದ ಪ್ರತಿವಾದಗಳು ನಡೆಯುತ್ತವೆ. ಕೊನೆಯಲ್ಲಿ ಬಸವಣ್ಣ 'ನೀವು ನನ್ನ ತಂದೆಯಲ್ಲ ಈಶ್ವರನ ಭಕ್ತರೇ ನನ್ನ ತಂದೆ–ತಾಯಿಗಳು', 'ಹಾರುವ ಕುಲಕೆ ಹಾರುವನಲ್ಲ ನುಡಿಯದಿರು' ಎಂದು ಅಕ್ಕ ನಾಗಮ್ಮನೊಡನೆ ಮನೆ ಬಿಟ್ಟು ಹೊರಟು ಹೋಗುತ್ತಾನೆ. ಈ ಉಪನಯನ ಕಾರ್ಯಕ್ಕೆ ಬಂದಿದ್ದ ಸೋದರಮಾವ ಬಲದೇವನು ತನ್ನ ಮಗಳು ಗಂಗಾಂಬಿಕೆಯನ್ನು ಬಸವಣ್ಣನಿಗೆ ಮದುವೆ ಮಾಡಿಕೊಡಲು ನಿಶ್ಚಯಿಸುತ್ತಾನೆ. ಈ ಕಾಂಡದ ಕೊನೆಯ ಸಂಧಿಯಲ್ಲಿ ಬಲದೇವನು ಗಂಗಾಂಬಿಕೆ ಮತ್ತು ಬಸವಣ್ಣನ ಮದುವೆಯನ್ನು ವೈಭವವಾಗಿ ಮಾಡಿದ ಕಥೆಯಿದೆ.

ಎರಡನೆಯ ಕಾಂಡದಲ್ಲಿ ಒಟ್ಟು ಆರು ಸಂಧಿಗಳಿವೆ. ಗಂಗಾಂಬಿಕೆಯನ್ನು ಮದುವೆಯಾದ ಬಸವಣ್ಣ ಕಲ್ಯಾಣದಿಂದ ಕಪ್ಪಡಿ ಸಂಗಮ ಕ್ಷೇತ್ರಕ್ಕೆ ಬಂದು ಅಲ್ಲಿನ ಸಂಗಮನಾಥನ ಸನ್ನಿದಿಯಲ್ಲಿ ಉಳಿದು ಭಕ್ತಿ ಪರವಶನಾಗಿ ಸಂಗಮೇಶ್ವರನನ್ನು ನಾನಾ ರೀತಿಯಿಂದ ಸ್ತುತಿಸುತ್ತಾನೆ. ಬಸವಣ್ಣನ ಮಾವನು, ಬಿಜ್ಜಳನ ಮಂತ್ರಿಯೂ ಆದ ಬಲದೇವನು ಮೃತ ಹೊಂದಿದ ನಂತರ ಅವನ ಸ್ಥಾನವನ್ನು ತುಂಬುಂತಹ ವ್ಯಕ್ತಿ ಯಾರಾದರೂ ಇದ್ದಾರೆಯೇ ಎಂದು ಬಿಜ್ಜಳ ವಿಚಾರಿಸಿದಾಗ ಜನರು ಬಸವಣ್ಣನ ಹೆಸರನ್ನು ಸೂಚಿಸುತ್ತಾರೆ. ನಂತರ ಸಂಗಮನಾಥನ ಒಪ್ಪಿಗೆಯ ಮೇರೆಗೆ ಬಸವಣ್ಣ ಬಿಜ್ಜಳನ ಅರಮನೆಗೆ ಬರುತ್ತಾನೆ. ಅರಮನೆಯ ಸಭಾಂಗಣದಲ್ಲಿರುವಾಗ ಹರಲಿಖಿತವೊಂದು ಮೇಲಿಂದ ಬೀಳುತ್ತದೆ. ಅದರ ಲಿಪಿಯನ್ನು ಅಲ್ಲಿನ ಯಾವ ವಿದ್ವಾಂಸರೂ ಓದಲು ಸಾಧ್ಯವಾಗದಿದ್ದಾಗ ಬಸವಣ್ಣ ಆ ಲಿಪಿಯನ್ನು ಓದಿ ರಾಜನ ಮೆಚ್ಚುಗೆ ಗಳಿಸಿ ಭಂಡಾರಿ ಪದವಿಯನ್ನು ಪಡೆಯುತ್ತಾನೆ. ನಂತರ ಶಿವಭಕ್ತರೊಡನೆ ಸೇರಿ ಶಿವನನ್ನು ಪೂಜಿಸುವ ಮತ್ತು ಶಿವನನ್ನು ಒಲಿಸಿಕೊಳ್ಳುವಲ್ಲಿ ತೋರಬೇಕಾಗಿರುವ ಭಕ್ತಿಯ ಸ್ವರೂಪಗಳನ್ನು ತಿಳಿಸುತ್ತಾ ಶಿವಭಕ್ತನಾಗಿ ಶಿವನ ಆಚಾರ–ವಿಚಾರಗಳ ಬಗೆಗಿನ ಸುಮಾರು ಮೂವತ್ತೆರಡು (೩೨) ಭಕ್ತಿಯ ಪ್ರತಿಜ್ಞೆಗಳನ್ನು ಮಾಡುತ್ತಾನೆ.

ನಂತರದ ಭಾಗದಲ್ಲಿ ಚೆನ್ನಬಸವಣ್ಣನ ಉದಯದ ವಿವರಗಳಿವೆ. ಬಳಿಕ ಕಲ್ಯಾಣಕ್ಕೆ ಆಗಮಿಸಿದ ಅಲ್ಲಮಪ್ರಭುವಿಗೆ ಬಸವಣ್ಣ ಎದುರುಗೊಂಡು ಪ್ರೀತಿಯಿಂದ ಸ್ವಾಗತಿಸುತ್ತಾನೆ. ಮನೆಗೆ ಕರೆತಂದು ಭಕ್ತಿಯಿಂದ ಉಪಚರಿಸುತ್ತಾನೆ. ಬಸವಣ್ಣನ ಭಕ್ತಿಗೆ ಮೆಚ್ಚಿದ ಅಲ್ಲಮಪ್ರಭು ಬಸವಣ್ಣನನ್ನು ಕೊಂಡಾಡುತ್ತಾನೆ. ಶಿವನು ಮಾರುವೇಶದಿಂದ ಬಂದು ಬಸವಣ್ಣನಲ್ಲಿ ಮೂರನೆಯ ಕಣ್ಣನ್ನು ಬೇಡುತ್ತಾನೆ. ಇದರ ಮರ್ಮವನ್ನು ಅರಿತ ಬಸವಣ್ಣ ಕನ್ನಡಿಯನ್ನಿಡಿದು ವೇಷದಾರಿ ಶಿವನಿಗೆ ತೋರಿಸುತ್ತಾನೆ. ಆಗ ಶಿವನು ನಾಚಿಕೆಯಿಂದ ಓಡಿ ಹೋಗುತ್ತಾನೆ.

ಬಸವಣ್ಣನನ್ನು ಬಂಧಿಯನ್ನಾಗಿ ಮಾಡುವ ಸಲುವಾಗಿ ಕೆಲ ಕಳ್ಳರು ಬದನೆಕಾಯಿಗಳನ್ನು ಲಿಂಗಗಳಂತೆ ಕಟ್ಟಿಕೊಂಡು ಬಂದಾಗ ಅವರನ್ನು ಪ್ರೀತಿಯಿಂದ ಸ್ವಾಗತಿಸಿ ಪೂಜೆ ಮಾಡಿಸುತ್ತಾನೆ ಬಸವಣ್ಣ. ಅನಂತರ ಮೊಸರು ಪವಾಡ ಕಥೆಯೊಂದಿಗೆ ಎರಡನೆಯ ಕಾಂಡ ಮುಗಿಯುತ್ತದೆ.

ಮೂರನೆಯ ಕಾಂಡದಲ್ಲಿ ಒಟ್ಟು ಹತ್ತು ಸಂಧಿಗಳಲ್ಲಿ ಕಥಾ ಭಾಗವು ವಿಸ್ತರಿಸಿಕೊಂಡಿದೆ. ಅವುಗಳೆಂದರೆ

* ಬಿಜ್ಜಳನ ಭಂಡಾರದ ಹಣವನ್ನು ಬಸವಣ್ಣ ತನ್ನ ಶಿವಭಕ್ತರಿಗಾಗಿ ವ್ಯಯಿಸುತ್ತಿದ್ದಾನೆಂದು ಕೆಲವರು ಬಿಜ್ಜಳನಿಗೆ ದೂರುತ್ತಾರೆ. ಸಿಟ್ಟಿಗೆದ್ದ ಬಿಜ್ಜಳ ಅದನ್ನು ಪರೀಕ್ಷಿಸಲು ಬಂದಾಗ ಆ ಹೊನ್ನ ಪೆಟ್ಟಿಗೆಯಲ್ಲಿದ್ದ ಭಂಡಾರದ ಹಣವು ನೂರುಪಟ್ಟು ಹೆಚ್ಚಾಗಿರುವುದನ್ನು ಕಂಡು ಬಸವಣ್ಣನ ಬಗ್ಗೆ ಸುಳ್ಳು ಅಪವಾದಗಳನ್ನು ಮಾಡಿದರೆ ಇನ್ನು ಮುಂದೆ ತಕ್ಕ ಶಿಕ್ಷೆ ಮಾಡುವೆನೆಂದು ಚಾಡಿಕೋರರಿಗೆ ಎಚ್ಚರಿಸುತ್ತಾನೆ.
* ಮುಗ್ಧಸಂಗಯ್ಯ ಎಂಬ ಶಿವಭಕ್ತ ಒಂದು ದಿನ ಬಸವಣ್ಣನಲ್ಲಿಗೆ ಬಂದು ನಾನು ಕೂಡ ಇತರರಂತೆ ಸೂಳೆಯರ ಮನೆಗೆ ಹೋಗಬೇಕು ಅದಕ್ಕೆ ಬೇಕಾದ ಸಿದ್ಧತೆಯನ್ನು ಮಾಡಬೇಕೆಂದು ಕೇಳುತ್ತಾನೆ. ಅಂತೆಯೇ ಬಸವಣ್ಣ ಸಕಲ ಸಿದ್ಧತೆಯನ್ನು ಮಾಡಿ ಸಂಗಯ್ಯನನ್ನು ಸೂಳೆಯ ಮನೆಗೆ ಕಳಿಸುತ್ತಾನೆ. ಅಲ್ಲಿಗೆ ಹೋದ ಸಂಗಯ್ಯ ಅತ್ಯಂತ ಭಕ್ತಿಯಿಂದ ನಡೆದುಕೊಳ್ಳುತ್ತಾನೆ.
* ರುದ್ರಪಶುಪತಿ ಎಂಬುವನು ಪುರಾಣ ಪ್ರವಚನದಲ್ಲಿ ಶಿವನು ನಂಜನ್ನು(ವಿಷವನ್ನು) ಕುಡಿದ ಎಂಬ ಮಾತು ಕೇಳಿ, ತಾನೂ ವಿಷವನ್ನು ಸೇವಿಸುತ್ತಾನೆ. ತನ್ನ ಪ್ರಾಣವನ್ನು ಪಣಕ್ಕಿಟ್ಟಾದರೂ ಶಿವನನ್ನು ಬದುಕಿಸುತ್ತೇನೆಂದು ಮುಗ್ಧಭಕ್ತಿಯನ್ನು ತೋರುವ ಪಶುಪತಿಯ ಭಕ್ತಿಗೆ ಶಿವನು ಮೆಚ್ಚಿ ತನ್ನ ಬಲತೊಡೆಯ ಮೇಲೆ ಕೂರಿಸಿಕೊಳ್ಳುತ್ತಾನೆ.
* ನಕ್ಕೈನೈನಾರ ಎಂಬ ಶಿವಭಕ್ತನ ಹೆಂಡತಿ ಶಿವಲಿಂಗದ ಮೇಲೆ ಜೇಡ ಹರಿದಾಡಿ ಕೊಳಕು ಮಾಡಿರುವುದನ್ನು ಕಂಡು ಅದನ್ನು ತನ್ನ ಉಗುಳಿನಿಂದ ಸ್ವಚ್ಛ ಮಾಡುತ್ತಾಳೆ. ಇದನ್ನು ಕಂಡ ನಕ್ಕೈನೈನಾರ ಹೆಂಡತಿಯ ಈ ಅಸಭ್ಯ ಸೇವೆಯನ್ನು ಕಂಡು ನಿಂದಿಸುತ್ತಾನೆ. ಮಾರನೆಯ ದಿನ ಶಿವಲಿಂಗದಲ್ಲಿ ಹೆಂಡತಿ ಉಗುಳಿದ ಜಾಗವನ್ನು ಬಿಟ್ಟು ಉಳಿದೆಲ್ಲ ಜಾಗವು ಬೊಕ್ಕೆಗಳಾಗಿರುವುದನ್ನು ಕಂಡು ಹೆಂಡತಿಯ ಬಳಿ ಬಂದು ಬೊಕ್ಕೆಗಳಾದ ಜಾಗವನ್ನು ಸರಿ ಮಾಡುವಂತೆ ಕೇಳುತ್ತಾನೆ.

ಆಗ ಹೆಂಡತಿ ತನ್ನ ಪ್ರಾಣವನ್ನೇ ನೀಡಲು ಮುಂದಾಗುತ್ತಾಳೆ. ಇದನ್ನು ಕಂಡ ಪರಮೇಶ್ವರ ಪ್ರತ್ಯಕ್ಷನಾಗಿ ಇಬ್ಬರನ್ನು ರಕ್ಷಿಸಿ ಸುಖವಾಗಿರಿ ಎಂದು ಹಾರೈಸುತ್ತಾನೆ.

* ಕೋಳೂರು ಎಂಬ ಊರಿನಲ್ಲಿದ್ದ ಶಿವದೇವನೆಂಬ ಶಿವಭಕ್ತ ಕಾರ್ಯನಿಮಿತ್ತ ಪರವೂರಿಗೆ ಹೋಗಬೇಕಾಗಿರುತ್ತದೆ. ನಿತ್ಯವೂ ಶಿವನಿಗೆ ಒಂದು ಬಟ್ಟಲು ಹಾಲು ಸಲ್ಲಿಸುವ ತನ್ನ ನೇಮವು ತಪ್ಪಬಾರದೆಂಬ ಉದ್ದೇಶದಿಂದ ತನ್ನ ಮಗಳಾದ ಕೊಡಗೂಸಿಗೆ ಈ ಕಾರ್ಯವನ್ನು ಒಪ್ಪಿಸಿ ಹೋಗುತ್ತಾನೆ. ಅದರಂತೆ ನಿತ್ಯವೂ ಕೊಡಗೂಸು ಶಿವನಿಗೆ ಬಟ್ಟಲು ಹಾಲು ಅರ್ಪಿಸಿ ಬರುತ್ತಿರುತ್ತಾಳೆ. ಊರಿಂದ ಹಿಂದಿರುಗಿದ ತಂದೆ ಮಗಳನ್ನು ವಿಚಾರಿಸಿದಾಗ ಪ್ರತಿದಿನವೂ ಶಿವನಿಗೆ ಹಾಲನ್ನು ಅರ್ಪಿಸುತ್ತಿದ್ದುದಾಗಿ ಹೇಳುತ್ತಾಳೆ. ಇದನ್ನು ನಂಬದ ಶಿವದೇವ ಪರೀಕ್ಷಿಸಬೇಕೆಂದು ಶಿವಾಲಯಕ್ಕೆ ಕರೆತರುತ್ತಾನೆ. ಕೊಡಗೂಸು ತನ್ನ ಪ್ರಾಮಾಣಿಕತೆಯಿಂದ ಪರಿಪರಿಯಾಗಿ ಶಿವನನ್ನು ಬೇಡಿ ಪ್ರತ್ಯಕ್ಷವಾಗುವಂತೆ ಮಾಡಿ ತನ್ನ ಸೇವೆಯು ಪ್ರಾಮಾಣಿಕವಾದದ್ದು ಎಂಬುದನ್ನು ತೋರಿಸುತ್ತಾಳೆ.

* ಅಮ್ಮವ್ವೆ(ಬೆಜ್ಜಮಹಾದೇವಿ) ಎಂಬ ಶಿವಭಕ್ತೆ ಶಿವನಿಗೆ ಹೆತ್ತತಾಯಿ ಇಲ್ಲವೆಂದು ಬಗೆದು, ಹೆತ್ತವ್ವನಿಲ್ಲದೆ ಏಕಾಂಗಿಯಾಗಿ ಎಷ್ಟು ದುಃಖ ಪಡುತ್ತಿರುವನೋ ಎಂದು ಸಂಕಟಪಡುತ್ತಾಳೆ. ಶಿವನಿಗೆ ತಾಯಿಯೆಂಬುವಳು ಇದ್ದಿದ್ದರೆ ತಪಸ್ವಿಯಾಗಲು ಬಿಡುತ್ತಿದ್ದಳೇ?, ವಿಷ ಕುಡಿಯಲು, ಸರ್ಪಗಳನ್ನು ಶಿರದಲ್ಲಿ ಧರಿಸಲು ಬಿಡುತ್ತಿರಲಿಲ್ಲ. ಎದೆ ಹಾಲು, ಕಡೆದ ಬೆಣ್ಣೆ ಮುಂತಾದವುಗಳನ್ನು ನೀಡಿ ಹಸಿವಾಗದಂತೆ ನೋಡಿಕೊಳ್ಳುತ್ತಿದ್ದಳು. ಈ ಯಾವ ಸೌಲಭ್ಯಗಳು ಇಲ್ಲದೆ ಬಡವಾದ ಶಿವನಿಗೆ "ಬಡತಾಯಿ ನಾನಾಗಿ ಉದ್ಧರಿಸುವೆ" ಎಂದು ಹಂಬಲಿಸುವ ಕರುಣಾಜನಕ ಕಥೆ ಅಮ್ಮವ್ವೆಯ ಕಥೆಯಾಗಿದೆ.

* ದೀಪದ ಕಲಿಯಾರ ಎಂಬ ಶಿವಭಕ್ತ ಅಡವಿಯಲ್ಲಿ ಹೋಗುತ್ತಿರುವಾಗ ಲಿಂಗವೊಂದನ್ನು ಕಂಡು ಅನಾಥವಾಗಿ ಈ ಅಡವಿಯಲ್ಲಿ ಬಿದ್ದಿದೆಯಲ್ಲ ಎಂದು ವ್ಯಥೆಪಡುತ್ತಾನೆ. ಆ ಲಿಂಗದ ಸುತ್ತಲೂ ಒಂದು ದೇವಾಲಯವನ್ನು ಕಟ್ಟಿಸಿ ಅದರ ರಕ್ಷಣೆಯ ಜವಾಬ್ದಾರಿಯನ್ನು ವಹಿಸಿಕೊಂಡು ಸುತ್ತಲೂ ಕೋಟೆಗಳನ್ನು ಕಟ್ಟುತ್ತಾನೆ. ಈ ಕೋಟೆ ಕಾವಲಿಗೆ ಮತ್ತು ದೇವಾಲಯದ ರಕ್ಷಣೆಗೆ ಜನರನ್ನು ನೇಮಿಸುತ್ತಾನೆ. ಅವರಿಗೆಲ್ಲ ತನ್ನ ಸ್ವಂತ ಹಣವನ್ನು ವ್ಯಯಿಸುತ್ತಾನೆ. ಪ್ರತಿದಿನ ಹೀಗೆ ನಡೆಯುತ್ತಿರಲು ತನ್ನ ಸಂಪತ್ತೆಲ್ಲ ಬರಿದಾಗುತ್ತದೆ. ಕಾವಲುಗಾರರೆಲ್ಲಾ ತಮ್ಮ ಕೆಲಸ ಬಿಟ್ಟು ಹೋಗುತ್ತಾರೆ. ಆಗ ತಾನೇ ಕಾವಲು ಕಾಯುತ್ತಿರುತ್ತಾನೆ. ರಾತ್ರಿ ಕಾವಲಿಗೆ ಪಂಜುಗಳನ್ನು ಹೊತ್ತಿಸಲು ಹಣವಿಲ್ಲದಂತಾದಾಗ ತನ್ನ ಜಡೆಗೆ ಬೆಂಕಿಯನ್ನು ಹೊತ್ತಿಸಿ ಅದರ ಬೆಳಕಲ್ಲಿ ಕಾವಲು ಕಾಯುತ್ತಾನೆ. ಹೀಗೆ ಅತ್ಯಂತ ನಿಷ್ಠೆಯಿಂದ ಶಿವನ ಸೇವೆಯಲ್ಲಿ ತೊಡಗಿದ ಕಲಿಯಾರ ದೀಪದ ಕಲಿಯಾರನಾಗುತ್ತಾನೆ.

* ಶಿವನಿಗೆ ವಾಯು ದೋಷವಿದೆಯೆಂದು ಬಗೆದು ಅದನ್ನು ನಿವಾರಿಸಲು ತನ್ನ ಹಣವೆಲ್ಲವನ್ನೂ ವ್ಯಯ ಮಾಡಿ ಶಿವನ ಕೃಪೆಗೆ ಪಾತ್ರನಾದ ನಾಟ್ಯ ಮಿತ್ತಂಡಿಯ ಕಥೆಯಿದೆ.

* ಶಿವನ ಸತ್ಯ ಪರೀಕ್ಷೆಯ ಕಾರ್ಯಕ್ಕೆ ತನ್ನ ಕಣ್ಣುಗಳನ್ನೇ ಅರ್ಪಿಸಿ ಕಣ್ಣಪ್ಪನೆಂದು ಹೆಸರು ಪಡೆದ ಬೇಡರ ಕಣ್ಣಪ್ಪನೆಂಬ ಮುಗ್ಧ ಶಿವಭಕ್ತನ ಕಥೆ ವಿವರಿಸಲ್ಪಟ್ಟಿದೆ.
* ಈ ಕಾಂಡದ ಕೊನೆಯಲ್ಲಿ ಸಕಲೇಶ ಮಾದರಸರು ಶ್ರೀಶೈಲಕ್ಕೆ ಹೋದದ್ದು ನಂತರ ಕಲ್ಯಾಣಕ್ಕೆ ಬಂದ ವಿವರಣೆಗಳೊಂದಿಗೆ ಮೂರನೆ ಕಾಂಡ ಮುಗಿಯುತ್ತದೆ.

ನಾಲ್ಕನೆಯ ಕಾಂಡದಲ್ಲಿ ಒಟ್ಟು ಏಳು ಸಂಧಿಗಳಿವೆ. ಮಡಿವಾಳ ಮಾಚಿದೇವನು ಭಕ್ತರ ಬಟ್ಟೆಗಳನ್ನು ಮಡಿ ಮಾಡಿಕೊಡುವ ಕಾಯಕದಲ್ಲಿ ತೊಡಗಿರುತ್ತಾನೆ. ಈ ಕಾಯಕವನ್ನು ಅತ್ಯಂತ ಕಠೋರವಾಗಿ ಮಾಡುತ್ತಿರುತ್ತಾನೆ. ಒಮ್ಮೆ ಮಡಿ ಮಾಡಿದ ಬಟ್ಟೆಗಳನ್ನು ಹೊತ್ತು ದಾರಿಯಲ್ಲಿ ಬರುತ್ತಾ ಶಿವಭಕ್ತರಲ್ಲದವರು ಎದುರಾಗಿ ಬರಬೇಡಿ, ನನ್ನನ್ನು ಸೋಕಬೇಡಿ ಎಂದು ಕೂಗುತ್ತಾ ಬರುತ್ತಿರುವಾಗ ಶಿವಭಕ್ತನಲ್ಲದ ಒಬ್ಬನು ಮಾಚಿದೇವನನ್ನು ಮುಟ್ಟುತ್ತಾನೆ. ಕೋಪಗೊಂಡ ಮಾಚಿದೇವ ಅವನ ತಲೆಯನ್ನು ಕತ್ತರಿಸುತ್ತಾನೆ. ಈ ಸುದ್ದಿ ರಾಜನಿಗೆ ತಿಳಿದು ಮಾಚಿದೇವನ ಮೇಲೆ ಮದ್ದಾನೆಗಳನ್ನು ಬಿಟ್ಟು ತುಳಿಸಿರಿ ಎಂದು ಆಜ್ಞಾಪಿಸುತ್ತಾನೆ. ಮಾಚಿದೇವನು ಆ ಆನೆಗಳನ್ನೂ ಕೊಲ್ಲುತ್ತಾನೆ. ನಂತರ ಬಸವಣ್ಣ ಮಾಚಯ್ಯನ ಭಕ್ತಿಯನ್ನು ತಿಳಿಸುತ್ತಾ ಇರಿಭಕ್ತ ಹಾಗೂ ಬಾಹೂರ ಬೊಮ್ಮಯ್ಯ ಎಂಬ ಶರಣರ ಕಥೆಯನ್ನು ವಿವರಿಸುತ್ತಾನೆ. ನಂತರ ಬಿಜ್ಜಳ ಮಾಚಿದೇವನಲ್ಲಿ ಕ್ಷಮಾಪಣೆ ಕೇಳುತ್ತಾನೆ.

ಮಾಚಿದೇವ ಮತ್ತು ಬಸವಣ್ಣ ದಾರಿಯಲ್ಲಿ ಬರುತ್ತಿರುವಾಗ ಜೊತೆಯಲ್ಲಿದ್ದ ಕೆಲ ಭಕ್ತರು ಬಸವಣ್ಣನನ್ನು ಕುರಿತು ಹಾಡು ಹೇಳುತ್ತಾರೆ. ಈ ಹಾಡು ಕೇಳಿ ಮಾಚಿದೇವ ಕೋಪಗೊಳ್ಳುತ್ತಾನೆ. ಇದನ್ನರಿತ ಬಸವಣ್ಣ ಕ್ಷಮೆ ಕೇಳುತ್ತಾನೆ. ಆಗ ಮಾಚಿದೇವ ಅಹಂಕಾರದಿಂದ ವರ್ತಿಸಿದ ಕೆಲ ಪುರಾತನರ ಕತೆಗಳನ್ನು ಬಸವಣ್ಣನಿಗೆ ಹೇಳುತ್ತಾನೆ.

ದೇವರ ದಾಸಿಮಯ್ಯ ತನ್ನ ಅಹಂಕಾರದಿಂದ ಶಂಕರ ದಾಸಿಮಯ್ಯನ ಮೂಲಕ ಸಂಪತ್ತನ್ನು ಕಳೆದುಕೊಳ್ಳುತ್ತಾನೆ. ಇದನ್ನು ಹೆಂಡತಿ ದುಗ್ಗಳೆಯಿಂದ ತಿಳಿದು ಶಂಕರ ದಾಸಿಮಯ್ಯನ ಬಳಿ ಕ್ಷಮೆ ಕೇಳುತ್ತಾನೆ.

ಮುಂದೆ ಕಂಚಿ ಪಟ್ಟಣದ ಸಿರಿಯಾಳ ಚಂಗಳೆಯರ ಕಥೆ ನಿರೂಪಿತವಾಗಿದೆ. ಶಿವನಿಗೆ ತನ್ನ ಮಗನನ್ನೇ ಊಟಕ್ಕೆ ಅರ್ಪಿಸಿದೆ ಎಂಬ ಗರ್ವದಿಂದ ಸಿರಿಯಾಳ ಕೈಲಾಸದಲ್ಲಿ ಬೀಗುತ್ತಿರುತ್ತಾನೆ. ಇದನ್ನರಿತ ಶಿವನು ಸಿರಿಯಾಳನನ್ನು ಕರೆದುಕೊಂಡು ನಿಂಬಿಯಕ್ಕನ ಮನೆಗೆ ಬರುತ್ತಾನೆ. ನಿಂಬಿಯಕ್ಕನ ಭಕ್ತಿಯನ್ನು ಸಿರಿಯಾಳನಿಗೆ ತೋರಿಸುತ್ತಾನೆ. ನಂತರ ಹಾಲಾಯುಧನೆಂಬ ಭಕ್ತನ ಬಳಿಗೆ ಕರೆತಂದು ಅವನ ಭಕ್ತಿಯ ಸ್ವರೂಪವನ್ನು ತೋರಿಸುತ್ತಾನೆ. ಬಳಿಕ ಮೆರೆಮಿಂಡದೇವನ ಕಥೆ, ನಂಬಿಯಣ್ಣನ ಕಥೆಗಳ ಜೊತೆಗೆ ಬಾಣಾಸುರ, ಪಿಟ್ಟವ್ವೆಯರ ಕಥೆಗಳು ಬರುತ್ತವೆ. ಕೊನೆಯಲ್ಲಿ ಮಾಚಿದೇವನು ಸುಮಾರು ಇಪ್ಪತ್ತು ಪುರಾತನ ಶಿವಭಕ್ತರ ಕಥೆಗಳನ್ನು ಹೇಳುವುದರ ಮೂಲಕ ಅಹಂಕಾರವಿಲ್ಲದ ಭಕ್ತಿಯೇ ನಿಜವಾದ ಭಕ್ತಿ ಎಂಬುದನ್ನು ಬಸವಣ್ಣನಿಗೆ ನಿರೂಪಿಸುತ್ತಾನೆ.

ಐದನೆಯ ಕಾಂಡದಲ್ಲಿನ ಹತ್ತು ಸಂಧಿಗಳಲ್ಲಿ ಹತ್ತು ಜನ ಶಿವಭಕ್ತರ ಕಥೆಗಳು ಚಿತ್ರಿಸಲ್ಪಟ್ಟಿವೆ.

* ಕಿನ್ನರಿ ಬೊಮ್ಮಯ್ಯನೆಂಬ ಶಿವಭಕ್ತ ಬಸವಣ್ಣನನ್ನು ನೋಡಬೇಕೆಂದು ಬರುತ್ತಾನೆ. ತ್ರಿಪುರಾಂತಕೇಶ್ವರನ ಗುಡಿಯಲ್ಲಿ ವಿಶ್ರಾಂತಿಗೆಂದು ಕುಳಿತಿರುವಾಗ ಒಬ್ಬ ವಿಟನು ತನ್ನ ವೇಶ್ಯೆಯ ಮನೋ ಇಚ್ಛೆಯನ್ನು ತೀರಿಸಲು ಅವಳು ಒಪ್ಪಿದ್ದ ಕುರಿಮರಿಯೊಂದನ್ನು ಅಟ್ಟಿಸಿಕೊಂಡು ಬರುತ್ತಾನೆ. ಅಲ್ಲಿದ್ದ ಕಿನ್ನರಯ್ಯ ಆ ಕುರಿಮರಿಯನ್ನು ರಕ್ಷಿಸಿ ಅದರ ಬದಲಾಗಿ ಹಣವನ್ನು ಕೊಟ್ಟು ಕಳುಹಿಸುತ್ತಾನೆ. ಆ ವಿಟನು ಅದೇ ಹಣದಲ್ಲಿ ಬೇರೊಂದು ಕುರಿಮರಿಯನ್ನು ಕೊಂಡು ಹೋಗಲು ಇದರ ಗುಟ್ಟನ್ನು ಅರಿತ ವೇಶ್ಯೆ ನನಗೆ ಮೊದಲಿನ ಕುರಿಮರಿಯೇ ಬೇಕೆಂದು ಕೇಳುತ್ತಾಳೆ. ವಿಧಿಯಿಲ್ಲದ ಆ ವಿಟ ಕಿನ್ನರಯ್ಯನ ಬಳಿ ಬಂದು ಕುರಿಮರಿಯನ್ನು ಕೇಳುತ್ತಾನೆ. ಕಿನ್ನರಯ್ಯ ಆ ವಿಟನನ್ನು ಕೊಂದು ಬಿಡುತ್ತಾನೆ. ಈ ವಿಷಯ ರಾಜನಿಗೆ ತಿಳಿದು ದಂಡಿಸಬೇಕೆಂದುಕೊಂಡಾಗ ಕಿನ್ನರಯ್ಯನು ತ್ರಿಪುರಾಂತಕೇಶ್ವರನಿಂದ ಸಾಕ್ಷಿ ನುಡಿಸಿ ಕೊನೆಗೆ ಆ ವಿಟನಿಗೆ ಪ್ರಾಣ ದಾನ ನೀಡುತ್ತಾನೆ.

* ಕಲಕೇತ ಬೊಮ್ಮಯ್ಯ ಎಂಬ ಶಿವಭಕ್ತನ ಬಳಿಗೆ ಮತ್ತೊಬ್ಬ ಶಿವಭಕ್ತ ಬರುತ್ತಾನೆ. ತಾನು ಕಿನ್ನರಯ್ಯನ ಬಳಿ ಅಪಾರ ಹೊನ್ನನ್ನು ಬೇಡಲು ಹೋಗುತ್ತಿರುವುದಾಗಿ ತಿಳಿಸುತ್ತಾನೆ. ಇದನ್ನು ಕೇಳಿದ ಕಲಕೇತಯ್ಯ ಅಲ್ಲಿಯೇ ಇದ್ದ ಒಂದು ಕಲ್ಲನ್ನು ಮುಟ್ಟಿದಾಗ ಕಲ್ಲು ಹೊನ್ನಿನ ರಾಶಿಯಾಗುತ್ತದೆ. ಇದೆಲ್ಲವನ್ನು ತೆಗೆದುಕೊಂಡು ಹೋಗು ಎಂದು ಕಲಕೇತಯ್ಯ ತಿಳಿಸುತ್ತಾನೆ. ಆಗ ಆ ಶಿವಭಕ್ತ ಈ ವಿಷಯವನ್ನು ಬಸವಣ್ಣ ಮತ್ತು ಕಿನ್ನರಯ್ಯನಿಗೆ ತಿಳಿಸಿದಾಗ ಅವರೂ ಬಂದು ಕಲಕೇತಯ್ಯನಿಗೆ ನಮಸ್ಕರಿಸುತ್ತಾರೆ.

* ಕಟ್ಟಿಗೆಯನ್ನು ಮಾರಿ ಅದರಿಂದ ಬಂದ ಹಣದಲ್ಲಿ ದಾಸೋಹ ಮಾಡುತ್ತಾ ಜೀವನವನ್ನು ನಡೆಸುವ ಮೋಳಿಗೆ ಮಾರಯ್ಯನ ಮನೆಗೆ ಒಮ್ಮೆ ಬಸವಣ್ಣ ಬಂದು ಅವನ ಪೂಜೆ ಕೋಣೆಯಲ್ಲಿ ಹಣದ ಚೀಲವನ್ನು ಬಿಟ್ಟು ಹೋಗುತ್ತಾನೆ. ಇದರ ಮರ್ಮವನ್ನು ಅರಿತ ಮಾರಯ್ಯ ಆ ಹಣವನ್ನು ಜಂಗಮರಿಗೆ ದಾನ ಮಾಡುತ್ತಾನೆ. ಈ ವಿಷಯ ತಿಳಿದ ಬಸವಣ್ಣ ಮಾರಯ್ಯನಲ್ಲಿಗೆ ಬಂದು ತಮ್ಮ ತಪ್ಪನ್ನು ಒಪ್ಪಿ ಕ್ಷಮೆಯಾಚಿಸುತ್ತಾನೆ.

* ಕನ್ನದ ಬೊಮ್ಮಯ್ಯನೆಂಬ ಶಿವಭಕ್ತ ಕಳ್ಳತನ ಮಾಡಿ ಸಂಗ್ರಹಿಸಿದ ಹಣದಿಂದ ದಾಸೋಹ ನಡೆಸುವ ವಿಚಿತ್ರವಾದ ವ್ರತವನ್ನು ನಡೆಸುತ್ತಿರುತ್ತಾನೆ. ಇವನು ಶಿವಭಕ್ತರಲ್ಲದವರ ಮನೆಗಳಿಗೆ ಮಾತ್ರ ಕನ್ನವಿಕ್ಕುತ್ತಾನೆ. ಒಮ್ಮೆ ಬಸವಣ್ಣನ ಒಪ್ಪಿಗೆ ಪಡೆದು ಬಿಜ್ಜಳನ ಭಂಡಾರದ ಹಣವನ್ನು ಕದಿಯುತ್ತಾನೆ. ಈ ವಿಷಯ ತಿಳಿದ ಬಿಜ್ಜಳ ಬಸವಣ್ಣನಿಗೆ ಕೋಪದಿಂದ ನಿಂದಿಸುತ್ತಾನೆ. ಬಸವಣ್ಣ ಕನ್ನದ ಬೊಮ್ಮಯ್ಯನ ವ್ರತದ ವಿಚಾರವಾಗಿ ಹೇಳಿ ಶಿವಭಕ್ತರಿಗಾಗಿ ಮಾಡಿದ ಕಾರ್ಯಗಳು ಯಾವುವೂ ದೋಷವಲ್ಲ, ಅಧರ್ಮವಲ್ಲ ಎಂದು ಹೇಳುತ್ತಾನೆ. ನಂತರ ಬಿಜ್ಜಳನಿಗೆ ನಿಮ್ಮ ಭಂಡಾರದ ಹಣವನ್ನು ಪರೀಕ್ಷಿಸಿ ಎಂದು ತೋರಿಸುತ್ತಾನೆ. ಬೊಕ್ಕಸದ ಹಣ ಮೂರು ಪಟ್ಟು ಹೆಚ್ಚಾಗಿರುವುದನ್ನು ಗಮನಿಸಿ ಬಿಜ್ಜಳ ಆಶ್ಚರ್ಯ ಪಡುತ್ತಾನೆ. ನಂತರದಲ್ಲಿ ಮುಸುಡಿ ಚೌಡಯ್ಯ,

ಸುರಗಿಯ ಚೌಡಯ್ಯ, ತೆಲುಗು ಬೊಮ್ಮಯ್ಯನ ಕಥೆಗಳು ನಿರೂಪಿತವಾಗಿವೆ. ಈ ಆಶ್ವಾಸದ ಕೊನೆಯಲ್ಲಿ ಬಸವಣ್ಣನವರ ಶಿವಯೋಗ ನಿದ್ರಾಮುದ್ರೆಯ ಕಥೆ, ಮಡಿವಾಳ ಮಾಚಿದೇವರು ಕಿನ್ನರಯ್ಯ ಹಾಗೂ ಬಸವಣ್ಣನ ಪ್ರಾಣವನ್ನು ಪಡೆದ ಕಥೆ ಹಾಗೂ ಮೇದಾರ ಕೇತಿದೇವ ಎಂಬ ಶಿವಭಕ್ತನ ಕಥೆಗಳು ಚಿತ್ರಿಸಲ್ಪಟ್ಟಿವೆ. ಆರನೆಯ ಕಾಂಡದಲ್ಲಿನ ಒಟ್ಟು ಹನ್ನೊಂದು ಸಂಧಿಗಳಲ್ಲಿ ಹನ್ನೊಂದು ಜನ ಶಿವಭಕ್ತರ ಕಥೆಗಳಿವೆ. ಕಲ್ಯಾಣಪುರದಲ್ಲಿ ದಸರಯ್ಯನೆಂಬ ಭಕ್ತ ಅತ್ಯಂತ ಸರಳತೆಯನ್ನು ಮೈಗೂಡಿಸಿಕೊಂಡು ಶಿವನಿಗೆ ನಿತ್ಯವೂ ಹೂಗಳಿಂದ ಅಲಂಕರಿಸಿ ಪೂಜಿಸುತ್ತಿರುತ್ತಾನೆ. ಹೂಗಳನ್ನು ಕೀಳುವಾಗ ಗಿಡಕ್ಕೆ ಎಲ್ಲಿ ನೋವಾಗುವುದೋ ಎಂದು ಚಿಂತಿಸುತ್ತಾನೆ. ತನ್ನ ತಲೆಗೆ ಮೋಟು ಕೈಯಿಂದ ಹೊಡೆದವನಿಗೆ ಕೈಚಿಗುರುವಂತೆ ಮಾಡುತ್ತಾನೆ. ಇವನ ನಿಷ್ಠೆಗೆ ತಲೆದೂಗಿದ ಜನರು ಅವನಿಗೆ ವಿಶೇಷ ಗೌರವವನ್ನು ನೀಡುತ್ತಾನೆ.

* ಗುರುವಿಗೆ ಶಿಷ್ಯ ಹೇಗೆ ವಿಧೇಯವಾಗಿರಬೇಕು. ಮತ್ತು ಗುರುವಿಗೆ ಶಿಷ್ಯ ಎಂತಹ ಮಹತ್ವವನ್ನು ನೀಡಿರುತ್ತಾನೆ ಎಂಬುದಕ್ಕೆ ನಿದರ್ಶನವಾಗಿ ಗುರುಭಕ್ತಯ್ಯ ಎಂಬ ಶಿವಭಕ್ತನ ಕಥೆಯಿದೆ. ಗುರುವಿನ ಪಾದುಕೆಗಳಿಗೆ ಆಕಸ್ಮಿಕವಾಗಿ ತನ್ನ ಕಾಲುಗಳು ತಗುಲಿದ ತಕ್ಷಣ ಆ ಕಾಲುಗಳನ್ನು ಕತ್ತರಿಸಿಕೊಳ್ಳುತ್ತಾನೆ. ಈ ವಿಷಯ ತಿಳಿದ ಅಮರಗುಂಡದ ಮಲ್ಲಿಕಾರ್ಜುನ ಪಂಡಿತಾರಾಧ್ಯರು ಅಲ್ಲಿಗೆ ಆಗಮಿಸಿ ಗುರುಭಕ್ತಯ್ಯನಿಗೆ ಕಾಲುಗಳನ್ನು ದಯಪಾಲಿಸುತ್ತಾನೆ.

ಗುರುಭಕ್ತಾಂಡಾರಿ ಎಂಬ ಶಿವಭಕ್ತ ಒಮ್ಮೆ ದಾರಿಯಲ್ಲಿ ಹೋಗುತ್ತಿರಲು ಪ್ರೌಢವತಿ ಎಂಬ ವಾರಂಗನೆಯನ್ನು ನೋಡಿ ಅವಳಲ್ಲಿ ಮೋಹಿತನಾಗುತ್ತಾನೆ. ಅವಳನ್ನು ಪಡೆಯುವ ಹಂಬಲದಿಂದ ನಾನಾ ರೀತಿಯಿಂದ ಅವಳಲ್ಲಿ ಭಿನ್ನವಿಸಿಕೊಳ್ಳುತ್ತಾನೆ. ಆಗ ಪ್ರೌಢವತಿಯು ಶಿವಭಕ್ತರಾದ ತಮಗೆ ಈ ವೇಶ್ಯಾ ಸಂಗವು ಒಳ್ಳೆಯದಲ್ಲ ಎಂದು ಪರಿಪರಿಯಾಗಿ ಹೇಳಿದರೂ ಗುರುಭಕ್ತಾಂಡಾರಿ ಮನಸ್ಸು ಬದಲಿಸುವುದಿಲ್ಲ. ಆಗ ವೇಶ್ಯಾಸಂಗದಿಂದ ಆಗುವ ಅನಾಹುತಗಳನ್ನು ವಿವರಿಸುವುದರ ಜೊತೆಗೆ ಹಿಂದೆ ವೇಶ್ಯೆಯರ ಸಹವಾಸ ಬಯಸಿದ ಶ್ವೇತ, ಮಲುಹಣ, ಓಹಿಲಯ್ಯರ ಕಥೆಗಳನ್ನು ಹೇಳುತ್ತಾಳೆ. ಕೊನೆಗೆ ಗುರುಭಕ್ತಾಂಡಾರಿಯ ಮನಸ್ಸು ಬದಲಿಸಿ ಶಿವಪೂಜೆಯಲ್ಲಿ ನಿರತವಾಗುವಂತೆ ಮಾಡುತ್ತಾಳೆ.

ನಂತರದಲ್ಲಿ ಹಾವು ಕಚ್ಚಿ ಮಡಿದ ಅರಸನೊಬ್ಬನನ್ನು ಬದುಕಿಸಿದ ವೇಮನರಾಧ್ಯರ ಕಥೆಯಿದೆ. ಚಿಕ್ಕ ಮಾದಣ್ಣನ ಕಥೆಯಲ್ಲಿ ಸಕಲೇಶ ಮಾದರಸರಿಂದ ಚಿಕ್ಕ ಮಾದಣ್ಣ ಸತ್ತು, ಮತ್ತೆ ಪ್ರಾಣ ಪಡೆದುಕೊಳ್ಳುವ ಕಥೆಯಿದೆ. ಕೊನೆಯಲ್ಲಿ ಕದಿರೆ ರೇಮಯ್ಯ ಎಂಬ ಶಿವಭಕ್ತ ಅಣ್ಣಲದೇವಿ ಎಂಬ ಶಿವಭಕ್ತೆಯ ಮಗ ಮಲ್ಲಿನಾಥ ಹಾವು ಕಡಿದು ಸತ್ತವನನ್ನು ಬದುಕಿಸುವ ಕಥೆಯೊಂದಿಗೆ ಆರನೆಯ ಆಶ್ವಾಸ ಮುಗಿಯುತ್ತದೆ.

ಏಳನೆಯ ಆಶ್ವಾಸದಲ್ಲಿ ಆರು ಸಂಧಿಗಳಿವೆ.

ಬಸವಣ್ಣನವರನ್ನು ಕಾಣಲು ಏಕಾಂತ ರಾಮಯ್ಯ ಎಂಬ ಶಿವಭಕ್ತ ಬಂದು ಒಂದು ಶಿವಾಲದಲ್ಲಿ ತಂಗಿರುತ್ತಾನೆ. ಆ ಶಿವಾಲಯಕ್ಕೆ ಜಿನಭಕ್ತನೊಬ್ಬ ಚಪ್ಪಲಿ ಕಾಲಿನಲ್ಲಿಯೇ ಪ್ರವೇಶಿಸುತ್ತಾನೆ. ಇದನ್ನು

ಕಂಡ ರಾಮಯ್ಯ ಈ ರೀತಿ ಚಪ್ಪಲಿ ಧರಿಸಿ ಒಳಬರುವುದು ತಪ್ಪು ಎಂದು ಆ ಜಿನಭಕ್ತನಿಗೆ ಹೇಳುತ್ತಾನೆ. ಆಗ ಅವನು ಇಲ್ಲಿ ನಿಮ್ಮ ಶಿವನೇ ಇರುವವನು ಎನ್ನುವುದಾದರೆ ನಿನ್ನ ಶಿರವನ್ನು ಕಡಿದು ಮತ್ತೆ ಪ್ರಾಣವನ್ನು ಪಡೆದರೆ ಇಲ್ಲಿರುವುದು ಶಿವನೇ ಎಂದು ಒಪ್ಪಿಕೊಳ್ಳುವೆ ಎನ್ನುತ್ತಾನೆ. ಆಗ ಏಕಾಂತ ರಾಮಯ್ಯ ತನ್ನ ಶಿರ ಕಡಿದು ಮತ್ತೆ ಪಡೆಯುತ್ತಾನೆ. ಆ ಜಿನಭಕ್ತ ರಾಮಯ್ಯನಿಗೆ ವಂದಿಸುತ್ತಾನೆ. ನಂತರದಲ್ಲಿ ತಿರುವಾಕರೀಶ, ಇರಿವತಾಂಡಿ, ಕೂನುಪಾಂಡ್ಯ, ನಮಿನಂದಿ, ಸಾಂಖ್ಯತೊಂಡ, ವೈಜಕವ್ವೆಯರ ಕಥೆಗಳು ನಿರೂಪಿತವಾಗಿವೆ. ಕೊನೆಯಲ್ಲಿ ಸೊಡ್ಡಳ ಬಾಚರಸರು ಬಿಜ್ಜಳನೊಡನೆ ತರ್ಕವನ್ನು ಗೆದ್ದ ಕಥೆಯಿದೆ.

ಕೊನೆಯ ಎಂಟನೆಯ ಆಶ್ವಾಸದಲ್ಲಿ ಒಟ್ಟು ಒಂಬತ್ತು ಸಂಧಿಗಳಲ್ಲಿ ಕಥೆಯು ಚಿತ್ರಿಸಲ್ಪಟ್ಟಿದೆ.

ಬಸವಣ್ಣ ಹೊಲೆಯರ ಮನೆಗಳಲ್ಲಿ ಉಣ್ಣುವುದು, ಮಲಗುವುದುನ್ನು ನೋಡಿದ ಕೆಲವರು ಬಿಜ್ಜಳನಿಗೆ ದೂರು ನೀಡುತ್ತಾರೆ. ಶಿವನಾಗಮಯ್ಯ ಎಂಬ ಹೊಲೆಯನನ್ನು ಪಲ್ಲಕ್ಕಿಯಲ್ಲಿ ಕರೆತರುವುದುನ್ನು ನೋಡಿ ಬಿಜ್ಜಳ ಅರಮನೆಯ ಹೊರಗೆ ಸಭೆಯನ್ನು ನಡೆಸುತ್ತಾನೆ. ಇದರಿಂದ ನೊಂದ ಬಸವಣ್ಣ ಹೊಲೆಯರೆಂದು ಹೀನವಾಗಿ ಮಾತಾಡಿದ ಬಿಜ್ಜಳನಿಗೆ ಹೀನ ಕುಲದವಳಾದ ಮಾಚಲದೇವಿ ಮತ್ತು ಬ್ರಾಹ್ಮಣರ ನಡುವೆ ನಡೆದ ದೃಷ್ಟಾಂತವನ್ನು ವಿವರಿಸುತ್ತಾರೆ. ಹಾಗೆಯೇ ಇನ್ನು ಕೆಲ ಹೀನ ಕುಲದ ಶರಣರ ಸತ್ ಚಾರಿತ್ರ್ಯವನ್ನು ಕುರಿತು ಹೇಳುತ್ತಾ ಹಾವಿನ ಹಾಳು ಎಂಬ ಊರಿನಲ್ಲಿ ಪಾಪ ಮಾಡುವವರನ್ನು ಹಾವೊಂದು ಕಚ್ಚಿ ಸಾಯಿಸುತ್ತಿರುತ್ತದೆ. ಕಲ್ಲಿದೇವ ಎಂಬ ಶರಣನಿಗೆ ಕಚ್ಚಿದ ಹಾವು ತಾನೇ ಸಾಯುತ್ತದೆ. ನಂತರ ಕಲ್ಲಿದೇವನು ಹಾವಿಗೆ ಪ್ರಾಣ ಬರಿಸುತ್ತಾನೆ. ಬ್ರಾಹ್ಮಣರಿಗೂ, ಕಲ್ಲಿದೇವರಿಗೂ ವಾದ ನಡೆಯುವಾಗ ಕಲ್ಲಿದೇವರು ನಾಯಿಯಿಂದ ವೇದ ಪಾರಾಯಣ ಮಾಡಿಸಿ ಬ್ರಾಹ್ಮಣರನ್ನು ಸೋಲಿಸುತ್ತಾನೆ. ಅನಂತರ ಬಬ್ಬಿ ಬಾಚಯ್ಯ, ಧೂಳಯ್ಯ, ಸಾಮವೇದಿ, ಉದುಭಟದೇವ, ಕೆಂಬಾವಿ ಬೋಗಣ್ಣ, ಡೋಹರ ಕಕ್ಕಯ್ಯ ಮುಂತಾದ ಶಿವಭಕ್ತರ ವಿವರಗಳು ಸಂಕ್ಷಿಪ್ತವಾಗಿ ವಿವರಿಸಲ್ಪಟ್ಟಿವೆ. ಗುಡ್ಡವ್ವೆ ಎಂಬುವಳಿಗೆ ತೊನ್ನಿನ ಕಾಯಿಲೆ ಇರುತ್ತದೆ. ಊರಿನ ಜನರು ಅವಳನ್ನು ಅವಹೇಳನ ಮಾಡುತ್ತಿರುತ್ತಾರೆ. ಇದರಿಂದ ನೊಂದ ಗುಡ್ಡವ್ವೆ ಈ ಕಾಯಿಲೆ ವಾಸಿಯಾಗುವವರೆಗೂ ಈ ಊರೊಳಗೆ ಬರುವುದಿಲ್ಲ ಎಂದು ಹೊರಟು ಹೋಗುತ್ತಾಳೆ. ನಂತರ ಕೆಲ ವರ್ಷಗಳ ಬಳಿಕ ತನ್ನ ರೋಗದಿಂದ ಗುಣಮುಖಳಾಗಿ ಊರಿಗೆ ಹಿಂದಿರುಗಿದಾಗ ತನ್ನನ್ನು ನಿಂದಿಸುತ್ತಿವರಿಗೆಲ್ಲ ತೊನ್ನಿನ ರೋಗವಿರುವುದನ್ನು ಕಾಣುತ್ತಾಳೆ.

ಜಗದೇವನೆಂಬ ಶಿವಭಕ್ತ ಒಮ್ಮೆ ಬಸವಣ್ಣನವರನ್ನು ದಾಸೋಹಕ್ಕೆ ಆಹ್ವಾನಿಸುತ್ತಾನೆ. ಬರುವುದು ತಡವಾದ್ದರಿಂದ ಬ್ರಾಹ್ಮಣರಿಗೆ ಸತ್ಕಾರ ಮಾಡಿರುತ್ತಾನೆ. ಇದನ್ನು ತಿಳಿದ ಬಸವಣ್ಣ ವೀರಶೈವ ಧರ್ಮದ ಕುರಿತು ಕೆಲವು ವಿಚಾರಗಳನ್ನು ಜಗದೇವನಿಗೆ ತಿಳಿಸಿ ಏಲೇಶ್ವರದ ಕೇತಯ್ಯ, ಇಳೆಹಾಳ ಬೊಮ್ಮಯ್ಯನ ಪವಾಡಗಳನ್ನು ತಿಳಿಸುತ್ತಾನೆ. ಈ ತಪ್ಪಿಗೆ ಪ್ರಾಯಶ್ಚಿತವಾಗಿ ಮುಂದೆ ಶಿವದ್ರೋಹ ಸಂಭವಿಸುತ್ತದೆ. ಶಿವಧರ್ಮಕ್ಕೆ ವಿರುದ್ಧವಾದವರನ್ನು ನೀನು ಸಂಹರಿಸಬೇಕು ಆಗ ಶಿವನು ನಿನ್ನನ್ನು ಕ್ಷಮಿಸುತ್ತಾನೆಂದು

ಹೇಳಿ ಅಲ್ಲಿಂದ ಬರುವರು. ಕೆಲವು ದಿನಗಳ ಬಳಿಕ ಹರಳಯ್ಯ, ಮದುವಯ್ಯರ ಕಣ್ಣುಗಳನ್ನು ಅನ್ಯಾಯವಾಗಿ ಕೀಳಿಸಿದ್ದಕ್ಕಾಗಿ ಬಸವಣ್ಣ ತುಂಬಾ ದುಃಖಿತನಾಗಿ ಕಲ್ಯಾಣ ಪಟ್ಟಣವನ್ನು ತೊರೆಯುತ್ತಾನೆ. ಜಗದೇವನು ಮಲ್ಲೆಬೊಮ್ಮಯ್ಯರ ಸಹಾಯದಿಂದ ಬಿಜ್ಜಳನನ್ನು ಸಾಯಿಸುತ್ತಾನೆ. ಇದೆಲ್ಲವನ್ನು ತಿಳಿದ ಬಸವಣ್ಣ ಕಪ್ಪಡಿ ಸಂಗಮದ ಸಂಗಮನಾಥನಲ್ಲಿ ಐಕ್ಯವಾಗುತ್ತಾರೆ. ಇಲ್ಲಿಗೆ 'ಬಸವಪುರಾಣ' ಕಥೆಯು ಮುಕ್ತಾಯವಾಗುತ್ತದೆ.

ವೀರಶೈವ ಧರ್ಮವನ್ನು ಗಟ್ಟಿಯಾಗಿ ನೆಲೆಗೊಳಿಸುವ ಉದ್ದೇಶದಿಂದ ರಚಿಸಲ್ಪಟ್ಟ ಈ 'ಬಸವಪುರಾಣ'ಗಳು ತೆಲುಗು ಮತ್ತು ಕನ್ನಡ ಎರಡು ಭಾಷೆಯಲ್ಲಿ ಸಾಕಷ್ಟು ಪ್ರಸಿದ್ಧಿಯನ್ನು ಪಡೆದುಕೊಂಡಿವೆ. ಈ ಪುರಾಣಗಳನ್ನು ರಚಿಸಿದ ಪಾಲ್ಕುರಿಕೆ ಸೋಮನಾಥ ಹಾಗೂ ಭೀಮಕವಿಯರು ಕೂಡ ವೀರಶೈವ ಪುರಾಣ ಪ್ರವರ್ತಕರಾಗಿ ಎರಡೂ ಭಾಷೆಯಲ್ಲಿ ಮುಖ್ಯರಾಗಿದ್ದಾರೆ. ಬಸವಪುರಾಣಗಳನ್ನು ತೌಲನಿಕ ಅಧ್ಯಯನ ನಡೆಸುವ ಹಿನ್ನೆಲೆಯಲ್ಲಿ ಅವುಗಳನ್ನು ರಚಿಸಿದ ಕವಿವರ್ಯರನ್ನು ಮತ್ತು ಅವರ ಇತರೆ ಕೃತಿಗಳನ್ನು ಇಲ್ಲಿ ಪರಿಚಯಿಸಲಾಗಿದೆ. ಜೊತೆಗೆ ಅಧ್ಯಯನಕ್ಕೆ ಆಯ್ದುಕೊಂಡ 'ಬಸವಪುರಾಣ'ಗಳ ಸಂಕ್ಷಿಪ್ತ ಪರಿಚಯವನ್ನು ನೀಡಲಾಗಿದೆ. ಇದರಿಂದ ಮುಂದಿನ ಅಧ್ಯಾಯಗಳ ವಿಶ್ಲೇಷಣೆಗೆ ಈ ಪುರಾಣಗಳ ಒಟ್ಟಾರೆ ಕಥಾವಸ್ತುವಿನ ಪರಿಚಯ ಅಗತ್ಯವಾಗಿದೆ. ಆದ್ದರಿಂದ ಕವಿ, ಕಾವ್ಯ ಮತ್ತು ಬಸವಪುರಾಣಗಳ ಸಂಕ್ಷಿಪ್ತ ಪರಿಯವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

# ಅಧ್ಯಾಯ – ೩

# ಕನ್ನಡ–ತೆಲುಗು 'ಬಸವಪುರಾಣ'ಗಳಲ್ಲಿನ ಶರಣರ ಭಕ್ತಿಯ ಅಭಿವ್ಯಕ್ತಿ

೩.೧. ಮುಗ್ಧಭಕ್ತಿಯ ಶರಣರು
೩.೨. ಉಗ್ರಭಕ್ತಿಯ ಶರಣರು
೩.೩. ಧರ್ಮನಿಷ್ಠಭಕ್ತಿಯ ಶರಣರು

## ಅಧ್ಯಾಯ – ಮೂರು

## ಕನ್ನಡ–ತೆಲುಗು 'ಬಸವಪುರಾಣ'ಗಳಲ್ಲಿನ ಶರಣರ ಭಕ್ತಿಯ ಅಭಿವ್ಯಕ್ತಿ

ಕನ್ನಡ ಹಾಗೂ ತೆಲುಗು 'ಬಸವಪುರಾಣ'ಗಳಲ್ಲಿ ಬಸವಣ್ಣನ ಚರಿತ್ರೆಯ ಜೊತೆಜೊತೆಗೆ, ಬಸವಣ್ಣನಿಗಿಂತ ಪೂರ್ವದ ಮತ್ತು ಅವನಿಗೆ ಸಮಕಾಲೀನರಾದ ನೂರಾರು ಶರಣರ ಚರಿತ್ರೆಗಳು ಕೂಡಿಕೊಂಡು ಬೃಹತ್ ಪುರಾಣಗಳಾಗಿ ರೂಪಗೊಂಡಿವೆ. ಕವಿಗಳಿಗೆ ಕಥಾನಾಯಕನಾದ ಬಸವಣ್ಣ ಎಷ್ಟು ಪ್ರಮುಖವೋ ಉಳಿದ ಶರಣರೂ ಅಷ್ಟೇ ಪ್ರಮುಖರು. ಆದ್ದರಿಂದ ಎಲ್ಲಾ ಶರಣರ ಚರಿತ್ರೆಯನ್ನು, ಅವರು ತೋರಿದ ಅದ್ಭುತ ಸಾಧನೆಗಳನ್ನು ಇಲ್ಲಿ ಚಿತ್ರಿಸಿದ್ದಾರೆ. ಈ ಪುರಾಣಗಳಲ್ಲಿ ತಮಿಳುನಾಡಿನ ಪುರಾತನ ಶರಣರು, ಕನ್ನಡ, ತೆಲುಗು ಮತ್ತು ಇತರ ಸುತ್ತಲ ಪ್ರದೇಶಗಳ ಶರಣ–ಶರಣೆಯರ ಬದುಕು ಇಲ್ಲಿ ಅನಾವರಣಗೊಂಡಿದೆ. ಬಸವಣ್ಣನ ತತ್ವಾದರ್ಶಗಳನ್ನು ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡು ಶಿವನನ್ನು ಪೂಜಿಸುತ್ತಾ, ಆರಾಧಿಸುತ್ತಾ ವೀರಶೈವ ತತ್ವಸಿದ್ಧಾಂತಗಳನ್ನು ತಮ್ಮದೇ ನೆಲೆಗಳಲ್ಲಿ ಪಸರಿಸುತ್ತಿದ್ದರು. ಇಲ್ಲಿನ ಶರಣರು ಹಲವು ಭಿನ್ನ ವ್ಯಕ್ತಿತ್ವಗಳನ್ನು ಹೊಂದಿದವರು. ಪ್ರತಿಯೊಬ್ಬರೂ ತಮ್ಮದೇ ಆದ ವೈಯಕ್ತಿಕ ಕಾಯಕದಲ್ಲಿ ತಮ್ಮನ್ನು ಪ್ರಾಮಾಣಿಕವಾಗಿ ತೊಡಗಿಸಿಕೊಂಡಿದ್ದರು. ವೀರಶೈವ ಧರ್ಮವನ್ನು ಕಾಪಾಡುವುದರಲ್ಲಿ ಮತ್ತು ಶಿವನ ಸೇವೆಯನ್ನು ಮಾಡುವಲ್ಲಿ ವಿಶಿಷ್ಟ ಧಾರ್ಮಿಕ ಮಾರ್ಗಗಳ ಮೂಲಕ ಕಾರ್ಯ ಸಾಧನೆ ಮಾಡುತ್ತಿದ್ದರು. ಹೀಗೆ ಅನೇಕ ಭಿನ್ನತೆಯ ವ್ಯಕ್ತಿತ್ವಗಳನ್ನು ಒಳಗೊಂಡಿರುವ ಇಲ್ಲಿನ ಶಿವಭಕ್ತರ ಭಕ್ತಿಯ ಅಭಿವ್ಯಕ್ತಿ ಎಂಥಹುದು, ಹೇಗೆ ತಮ್ಮನ್ನು ಶಿವಭಕ್ತಿಯಲ್ಲಿ ಸಮರ್ಪಿಸಿಕೊಂಡಿದ್ದರು. ಎಂಬುದನ್ನು ತಿಳಿಯುವುದು ಈ ಅಧ್ಯಾಯದ ಮುಖ್ಯ ಉದ್ದೇಶ. ಈ ಹಿನ್ನಲೆಯಲ್ಲಿ ಅಧ್ಯಯನದ ದೃಷ್ಟಿಯಿಂದ ಇಲ್ಲಿನ ಶರಣರ ಭಕ್ತಿಯ ಸ್ವರೂಪವನ್ನು ಆಧರಿಸಿ ಮೂರು ಭಾಗಗಳಲ್ಲಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

೧. ಮುಗ್ಧಭಕ್ತಿಯ ಶರಣರು

೨. ಉಗ್ರಭಕ್ತಿಯ ಶರಣರು

೩. ಧರ್ಮನಿಷ್ಠಭಕ್ತಿಯ ಶರಣರು

**೩.೧. ಮುಗ್ಧಭಕ್ತಿಯ ಶರಣರು :**

'ಭಕ್ತಿ' ಎಂದರೆ ತಾವು ಇಚ್ಚಿಸುವ, ಆರಾಧಿಸುವ ದೇವರಿಗೆ ಸಲ್ಲಿಸುವ ಸೇವೆ. ಏಕಾಗ್ರತೆಯಿಂದ ಭಗವಂತನಲ್ಲಿ ಲೀನವಾಗುತ್ತಾ ತಮ್ಮ ಬೇಕು-ಬೇಡಗಳನ್ನು ಸಲ್ಲಿಸುತ್ತಾ ಅವನಲ್ಲಿ ಒಂದಾಗುವುದು. ಮತ್ತು ನಿಸ್ವಾರ್ಥ ಪ್ರೀತಿ, ನಿರ್ಮಲವಾದ ಮನಸ್ಸಿನಿಂದ ಅವನನ್ನು ಪೂಜಿಸುವುದಾಗಿದೆ. 'ಬಸವಪುರಾಣ'ಗಳಲ್ಲಿನ ಭಕ್ತರ ಇಂತಹ ಭಕ್ತಿಯು ಹಲವು ಸ್ವರೂಪಗಳಲ್ಲಿ ವ್ಯಕ್ತವಾಗಿದೆ. ಇದರಲ್ಲಿನ ಮುಗ್ಧಭಕ್ತರ ಭಕ್ತಿಯ ವಿಧಾನವನ್ನು ಗಮನಿಸಿದಾಗ ಅವರ ಅಮಾಯಕತ್ವ, ಭಗವಂತನ ಮೇಲೆ ಅವರಿಟ್ಟ ನಂಬಿಕೆ, ಮೂಢಭಕ್ತಿ, ಕೋಪಾವೇಶಗಳು, ಕಪಟವಿಲ್ಲದ ನಿಷ್ಕಲ್ಮಷ ಪ್ರೀತಿ ಕಾಣಿಸುತ್ತದೆ. ಸೋಮನಾಥ ಮತ್ತು ಭೀಮಕವಿಗಳು ತಮ್ಮ ಕಾವ್ಯಗಳಲ್ಲಿ ಈ ಮುಗ್ಧಭಕ್ತರ ಪಾತ್ರಗಳನ್ನು ಒಂದೇ ರೀತಿಯಾಗಿ ಚಿತ್ರಿಸದೆ ಹಲವು ಸ್ವರೂಪಗಳಲ್ಲಿ ಅವರ ಭಕ್ತಿಯ ವೈಶಿಷ್ಟ್ಯತೆಯನ್ನು ತೋರಿಸಿದ್ದಾರೆ. ಮತ್ತು ಆ ಪಾತ್ರಗಳ ಮೂಲಕ ಸಮಾಜದಲ್ಲಿ ಡಾಂಭಿಕ ಭಕ್ತಿಯನ್ನು ನಿರ್ಮೂಲನೆ ಮಾಡಿ ಪರಿಶುದ್ಧವಾದ, ಆತ್ಮಶುದ್ಧಿ ಭಕ್ತಿಯನ್ನು ನೆಲೆಗೊಳಿಸುವ ಉದ್ದೇಶವನ್ನು ಕವಿಗಳು ಒಂದಿದ್ದರು. ಆ ಮೂಲಕ ಸಾಮಾಜಿಕ ಬದಲಾವಣೆ ತರಲು ಪ್ರಯತ್ನಿಸಿದ ರೀತಿ ಪ್ರಶಂಸನೀಯವಾದುದು.

ಶಿವಶರಣರ ಈ ಮುಗ್ಧಭಾವ ಪರಮೇಶ್ವರನನ್ನು ಪ್ರಭುವಾಗಿ, ಗುರುವಾಗಿ, ತಾಯಿಯಾಗಿ, ತಂದೆಯಾಗಿ, ಮಗನಾಗಿ ಭಾವಿಸಿಕೊಂಡು ಅವನ ಸೇವೆಯಲ್ಲಿ ತಮ್ಮನ್ನು ಅರ್ಪಿಸಿಕೊಂಡಿದ್ದಾರೆ. 'ಬಸವಪುರಾಣ'ದಲ್ಲಿನ ಮುಗ್ಧಭಕ್ತರ ಸ್ವಭಾವವನ್ನು ಕುರಿತು ತೆಲುಗಿನ ವಿದ್ವಾಂಸರಾದ **ಡಾ. ಜಿ.ವಿ. ಸುಬ್ರಹ್ಮಣ್ಯಂ** ಅವರು ಹೀಗೆ ಹೇಳಿದ್ದಾರೆ. "ಇಲ್ಲಿನ ಭಕ್ತರೆಲ್ಲರೂ ವೀರ ಮಹೇಶ್ವರನ ವ್ರತ ಪಾಲಿಸುವವರು. ಹೆಚ್ಚಾಗಿ ಅಮಾಯಕರು, ನಿರಾಡಂಬರ ಸ್ನಿಗ್ಧ ಪ್ರವೃತ್ತಿಯವರು. ಸ್ವಚ್ಛವಾದ ಮನಸ್ಸು, ವಾತ್ಸಲ್ಯ, ಪರವಶದಿಂದ ಕೂಡಿದ ಭಕ್ತಿ-ಭಾವ, ಬೆಣ್ಣೆಯಂತಹ ಹೃದಯ ಶಿವನನ್ನು ಆಪ್ತನಂತೆ, ಮಿತ್ರನಂತೆ ಭಾವಿಸಿ, ಮುಗ್ಧ ಭಾವದಿಂದ ಕೀರ್ತಿಸಿ ಲಾಲಿಸುತ್ತಾ ಸ್ನೇಹ ಭಾವದಿಂದ ಕೂಡಿದ್ದವರು. ಇವರು ಶಿವನ ಕೋರಿಕೆಗೆ ಪ್ರಾಣವನ್ನು ತ್ಯಜಿಸಲು ಸಿದ್ಧವಾದ ತ್ಯಾಗೋತ್ಸಾಹಿ ಭಕ್ತಿ ವೀರರಾಗಿದ್ದವರು". (ಸುರವರಂ ಪುಷ್ಪಲತ, ಮಧುರಭಕ್ತಿ-ಮುಗ್ಧಭಕ್ತಿ ಪು-೨೧೯) ಎಂದು ಹೇಳಿರುವ ಮಾತುಗಳು ಶಿವಭಕ್ತ ಶರಣರ ಮುಗ್ಧತೆಯನ್ನು ಪ್ರತಿನಿಧಿಸುತ್ತವೆ.

'ಬಸವಪುರಾಣ'ಗಳಲ್ಲಿ ಸಾಕಷ್ಟು ಭಕ್ತರಿದ್ದಾರೆ. ಇವರು ಕೇವಲ ವೀರಶೈವ ಮತಸ್ಥರಿಗಲ್ಲದೆ ಇತರೆ ಧರ್ಮದವರಿಗೂ ಇಷ್ಟವಾಗುವಂತಹ ಮುಗ್ಧರು. ಇವರಿಗೆ ಭಗವಂತನ ತತ್ವ, ಭಕ್ತಿಯ ಆಡಂಬರದಂತಹ ಯಾವುದೇ ವಿಷಯಗಳು ತಿಳಿದಿಲ್ಲ. ಪರಮೇಶ್ವರನನ್ನು ಅವರು ತಮ್ಮಂತೆಯೇ ಸಹಜ ವ್ಯಕ್ತಿಯೆಂದೇ ಭಾವಿಸುತ್ತಾರೆ. ಪರಮೇಶ್ವರನೊಂದಿಗೆ ಇತರರ ಜೊತೆ ಮಾತಾಡಿದಂತೆಯೇ ಮಾತಾಡುತ್ತಾರೆ. ಅವನನ್ನು

ನಿಂದಿಸುತ್ತಾರೆ, ದೂಷಿಸುತ್ತಾರೆ, ಪ್ರೀತಿಸುತ್ತಾರೆ, ತಮ್ಮೊಂದಿಗೆ ಆಟವಾಡಲು ಕರೆಯುತ್ತಾರೆ. ತಾವು ನೀಡಿದ್ದನ್ನೇ ತಿನ್ನುವಂತೆ ಕೊಡುತ್ತಾರೆ. ತಿನ್ನದಿದ್ದರೆ ರೋಧಿಸುವುದರೊಂದಿಗೆ ಪ್ರಾಣಾರ್ಪಣೆ ಮಾಡಿಕೊಳ್ಳುವುದಕ್ಕೂ ಸಿದ್ಧರಾಗುತ್ತಾರೆ. ಇಂತಹ ಭಕ್ತರ ಹಾವ-ಭಾವಗಳು ಪ್ರತಿಯೊಬ್ಬರನ್ನು ಆಕರ್ಷಿಸುತ್ತವೆ. ಹೀಗೆ ಶಿವಭಕ್ತಿ ಪರವಶತೆಯಲ್ಲಿ ಭಕ್ತರು ತಮ್ಮ ಕಣ್ಣುಗಳನ್ನು, ಹೆಂಡತಿ ಮಕ್ಕಳನ್ನು, ತಮ್ಮ ಪ್ರಾಣಗಳನ್ನು ಲೆಕ್ಕಿಸದೆ ಶಿವ ಕಂಕೈರ್ಯಕ್ಕೆ ಒಪ್ಪಿಸಿ ಮೋಕ್ಷಪ್ರಾಪ್ತಿ ಹೊಂದಿದ ಅನೇಕ ಶಿವಶರಣರ ಕಥೆಗಳು ಈ 'ಬಸವಪುರಾಣ'ಗಳಲ್ಲಿವೆ.

'ಬಸವಪುರಾಣ'ಗಳಲ್ಲಿ ಮುಗ್ಧಭಕ್ತಿಯ ಮೂಲಕ ಶಿವನನ್ನು ಒಲಿಸಿಕೊಂಡು ಸನ್ಮಾರ್ಗದತ್ತ ನಡೆದ ಹಲವು ಶರಣರಿದ್ದಾರೆ. ಅವರಲ್ಲಿ ಪ್ರಮುಖರಾದವರನ್ನು ಭೀಮಕವಿ ಸೂಚಿಸುತ್ತಾನೆ.

"ಹರನೋಲಿಸಿದ ಮುಗ್ಧ ಭಕ್ತರ
ಚರಿತೆಗಳಗನುಪಾಲಿಸುತ ವಿ
ಸ್ತರಿಸಿ ಪೇಳ್ದನು ಬಸವರಾಜನು ಚೆನ್ನಬಸವಂಗೆ"

(ಎಸ್. ವಿದ್ಯಾಶಂಕರ(ಸಂ), ಬ.ಪು.,, ಸಂ-೧೨, ಸೂಚನಾ ಪದ್ಯ)

ಎನ್ನುತ್ತಾ ಮುಂದಿನ ಕಥೆಗಳನ್ನು ಬಸವಣ್ಣ ಹೇಳುತ್ತಾನೆ.

೧. ಮುಗ್ಧಸಂಗಯ್ಯ ೨. ರುದ್ರಪಶುಪತಿ ೩. ನಕ್ಕೈನೈನಾರು ೪. ಗೋಡಗೂಚಿ(ಕೋಳೂರು ಕೊಡಗೂಸು) ೫. ಬೆಜ್ಜ ಮಹಾದೇವಿ ೬. ದೀಪದ ಕಲಿಯಾರ ೭. ಉಡುಮೂರಿ ಕನ್ನಪ್ಪ(ಬೇಡರ ಕಣ್ಣಪ್ಪ)

ಈ ಮೇಲಿನ ಮುಗ್ಧಭಕ್ತರ ಭಕ್ತಿಯ ಸ್ವರೂಪ ಮತ್ತು ಅದನ್ನು ಚಿತ್ರಿಸಿದ ಸೋಮನಾಥ ಮತ್ತು ಭೀಮಕವಿಯ ಮನೋಧರ್ಮ, ಆ ಮೂಲಕ ಸಮಾಜಕ್ಕೆ ಕವಿಗಳು ನೀಡಿದ ಸಂದೇಶವೇನು? ಎಂಬುದನ್ನು ಮುಂದೆ ಚರ್ಚಿಸಲಾಗಿದೆ. ಮತ್ತು ಮುಗ್ಧಶರಣರ ಬದುಕು ಸಮಾಜದ ಮೇಲೆ ಹೇಗೆ ಪರಿಣಾಮಕಾರಿಯಾಗಿ ಪ್ರಭಾವಿಸಿತು ಎಂಬ ಅಂಶಗಳನ್ನು ಒಬ್ಬೊಬ್ಬ ಶರಣನ ಬದುಕಿನ ಚರಿತ್ರೆಯ ಜೊತೆಗೆ ಮುಂದೆ ವಿಶ್ಲೇಷಿಸಲಾಗಿದೆ.

**ಮುಗ್ಧಸಂಗಯ್ಯ :**

ಮುಗ್ಧಸಂಗಯ್ಯನ ಮುಗ್ಧಭಕ್ತಿಯ ಕಥೆಯು ತೆಲುಗು ಮತ್ತು ಕನ್ನಡದಲ್ಲಿ ಹೆಚ್ಚು ವ್ಯತ್ಯಾಸಗಳಿಲ್ಲದೆ ರಚನೆಗೊಂಡಿದೆ. ಸೂಳೆಗೈಯಲು ಆಪೇಕ್ಷಿಸುತ್ತಿದ್ದ ಜಂಗಮರಿಗೆ ಬೇಕಾದ ಸೌಕರ್ಯಗಳನ್ನೊದಗಿಸಿ ವೇಶ್ಯೆ ಮನೆಗೆ ಕಳುಸುತ್ತಿದ್ದ ಬಸವಣ್ಣನಲ್ಲಿಗೆ ಬಂದ ಮುಗ್ಧಸಂಗಯ್ಯ ತಾನೂ ಸೂಳೆಗೈಯುವೆನು. ನನ್ನನ್ನು ಕಳುಹಿಸಿಕೊಡು ಎಂದು ಕೇಳುತ್ತಾನೆ. ಈ ಮಾತು ಕೇಳಿದ ಬಸವಣ್ಣ ನಸನಗುತ್ತಾ "ನಡೆಯಯ್ಯಾ ಓ ಮುಗ್ಧ ಸಂಗಯ್ಯದೇವ" ಎಂದು ಪ್ರೀತಿಯಿಂದ ಶೃಂಗಾರವನ್ನು ಮಾಡಿ ಪರಿಚಾರಕರನ್ನು ಕರೆಸಿ ಅವರೊಂದಿಗೆ ವೇಶ್ಯೆ ಮನೆಗೆ ಕಳುಹಿಸುತ್ತಾನೆ. ವೇಶ್ಯೆಯನ್ನು ಕಂಡ ಮುಗ್ಧಸಂಗಯ್ಯ ಇವಳೇನು ಪ್ರಮಥ ಲೋಕದ ಕನ್ಯೆಯೋ, ಸಾಕ್ಷಾತ್ ರುದ್ರಗಣಿಕೆಯೋ, ಚಿತ್ರ ರೂಪದ ಚೆಲುವೆಯೋ, ಹೊನ್ನ

ಪುತ್ಥಳಿಯೋ ಎಂದು ಆಶ್ಚರ್ಯನಾಗುತ್ತಾನೆ. ಸಂಗಯ್ಯನ ಕೈಹಿಡಿದು ವೇಶ್ಯೆಯು ಒಳಬರುತ್ತಾಳೆ. ಈ ಸಂದರ್ಭದಲ್ಲಿ ಪಾಲ್ಕುರಿಕೆ ಸೋಮನಾಥನಿಗಿಂತಲೂ ಭೀಮಕವಿಯಲ್ಲಿ ಹೆಚ್ಚು ವರ್ಣನೆಗಳಿವೆ. ಆ ವೇಶ್ಯೆ ಮತ್ತು ವೇಶ್ಯಾಗೃಹದ ವರ್ಣನೆಯ ಜೊತೆಗೆ ಆಕೆಯ ಜೊತೆಗಿರುವ ಇತರ ಗೆಳತಿಯರ ವರ್ಣನೆಗಳನ್ನು ವಿಸ್ತಾರವಾಗಿ ಅತ್ಯಂತ ಸುಂದರವಾಗಿ ಚಿತ್ರಿಸಿದ್ದಾನೆ. ವೇಶ್ಯಾಗೃಹದ ವರ್ಣನೆಯನ್ನು ಪಾಲ್ಕುರಿಕೆ ಸೋಮನಾಥ ಮುಂದಿನಂತೆ ಹೇಳಿದ್ದಾನೆ.

ಮಿಂಚಿ ವೆಲ್ಲಡು ಪಟ್ಟೆ ಮಂಚಂಬು ಪುಷ್ಪ
ಸಂಚಿತಂ ಬಗು ನಂಡಜಮುಪಾನ್ಪು ದನರ
ವಿವಿಧ ಸೌರಭಸುಖಾನ್ವಿತ ಮಗುಮಂದ
ಪವನಂಬು ಜಾಲಕಪಂಕ್ತಿಂ ದನ್ವಾರ
ಶ್ರೀ ರುದ್ರವರದಿವ್ಯ ಸಿಂಹಾಸನಂಬೊ?
ಗೌರೀ ಮನೋಹರು ಚಾರು ಪುಷ್ಪಕಮೊ?
ಯಂಗಜ ವಿಜಯುನಿ ಯನುಂಗು ಮಂಟಪಮೊ?

(ಗೂ.ವೆಂ.ಸು.(ಸಂ), ಬ.ಪು., ತೃ.ಆ. ಸಾಲು–೨೫೧–೨೫೮)

( ಮಿಂಚು ಹೊಳೆಯುವ ಮರದ ಮಂಚವು ಪುಷ್ಪಗಳಿಂದ ಅಲಂಕೃತವಾಗಿದೆ. ವಿವಿಧ ಸೌರಭ ಸುಖಾನ್ವಿತವಾದ ಮಂದ ಗಾಳಿಯು ಬೀಸುತ್ತಿದೆ. ಶ್ರೀ ರುದ್ರನ ದಿವ್ಯ ಸಿಂಹಾಸನವೋ? ಗೌರಿ ಮನೋಹರರ ಪುಷ್ಪಕವೋ? ಗಂಗಾವತಂಸನ ಶೃಂಗಾರ ಗೃಹವೋ? ಅಂಗ ವಿಜಯನ ಅಣುಗು ಮಂಟಪವೋ? ಎಂಬಂತೆ ವೇಶ್ಯಾಗೃಹ ಶೋಭಿಸುತ್ತಿತ್ತು)

ಹೀಗೆ ಅಂಲಕೃತಗೊಂಡ ಈ ಶಯ್ಯಾಗೃಹವನ್ನು ಕಂಡ ಮುಗ್ಧಸಂಗಯ್ಯ, ಇದು ಆಕೆಯ ಲಿಂಗಾರ್ಚನೆ ಮಾಡುವ ಸದನವಿರಬೇಕೆಂದುಕೊಳ್ಳುತ್ತಾನೆ. ಸಿಂಹಾಸನದಂತಿರುವ ಮಂಚದ ಪಕ್ಕದಲ್ಲಿಯೇ ನೆಲದ ಮೇಲೆ ಕಂಬಳಿಯನ್ನು ಹಾಕಿ ಶಿವನನ್ನು ಪೂಜಿಸಲು ಅಣಿಯಾಗುವನು. ಸರ್ವಾಂಗಗಳಿಗೂ ವಿಭೂತಿಯನ್ನು ಹಚ್ಚಿಕೊಳ್ಳುತ್ತಾ ಅಲ್ಲಿಯೇ ನಿಂತಿದ್ದ ವೇಶ್ಯೆಯನ್ನು ನೀನ್ಯಾಕೆ ವಿಭೂತಿಯನ್ನು ಹಚ್ಚಿಕೊಂಡಿಲ್ಲ, ರುದ್ರಾಕ್ಷಿಯನ್ನು ಧರಿಸಿಲ್ಲ, ಮುಡಿಯನ್ನು ಕಟ್ಟದೆ ಹಾಗೆಯೇ ಬಿಟ್ಟುರುವೆಯಲ್ಲ ಎಂದು ಕೇಳುತ್ತಾನೆ. ಮುಗ್ಧಸಂಗಯ್ಯನ ಈ ಮುಗ್ಧ ಪ್ರಶ್ನೆಗಳಿಗೆ ಹಾಗೂ ಅವನು ತನ್ನಲ್ಲಿ ಬಂದು ನಡೆದುಕೊಳ್ಳುತ್ತಿರುವ ರೀತಿಯನ್ನು ಕಂಡು ಆಶ್ಚರ್ಯಪಡುತ್ತಾಳೆ. ಸೂಳೆಗೈಯಲು ಬರುತ್ತಿದ್ದ ಮಿಂಡ ಜಂಗಮರನ್ನು ಇತರೆ ನೆನೆದುಕೊಳ್ಳುತ್ತಾ ಈ ಸಂಗಯ್ಯ ಏಕೆ ವಿಚಿತ್ರವಾಗಿ ವರ್ತಿಸುತ್ತಿದ್ದಾನಲ್ಲ ಎಂದು ಕಳವಳ ಪಡುತ್ತಾಳೆ. ನಿಧಾನವಾಗಿ ಸಂಗಯ್ಯನ ಮುಗ್ಧತೆಯನ್ನು ಅರಿತ ವೇಶ್ಯೆಯು ಸಂಗಯ್ಯನೊಂದಿಗೆ ಅಷ್ಟೇ ಮುಗ್ಧತೆಯಿಂದ ವರ್ತಿಸುತ್ತಾಳೆ. ತಾನು ವಿಭೂತಿಯ ಬದಲಾಗಿ ಅರಿಶಿಣವನ್ನು ಹಚ್ಚಿದ್ದೇನೆ. ಕಡುಕಂದು ಲವಣ ಸಾಗರದಲ್ಲಿ ಹುಟ್ಟಿದ ರುದ್ರಾಕ್ಷಿಯು ತನಗೆ ಇಷ್ಟವಾಗದೆಂದು ಬಳಿಯಾದ ತೀರದಲ್ಲಿದ್ದ ಬಿಳಿಯ ರುದ್ರಾಕ್ಷಿಯನ್ನು ಒಬ್ಬನು ತಂದು ಸದಾ ಇದನ್ನು ಧರಿಸಿರು ಎಂದು ಕೊಟ್ಟಿದ್ದಾನೆಂದು ಮುತ್ತಿನ

ಹಾರವನ್ನು ತೋರಿಸುತ್ತಾಳೆ. ಕೌಪೀನವನ್ನು ಧರಿಸುತ್ತಿಲ್ಲವೇಕೆ ಎಂದು ಕೇಳಿದ ಪ್ರಶ್ನೆಗೆ ಲಿಂಗವಂತರ ಬಿಟ್ಟು ಭವಿಗಳ ದೃಷ್ಟಿ ನನ್ನ ಮೇಲೆ ಬೀಳಕೂಡದೆಂದು ಹೇಳುತ್ತಾಳೆ. ಈ ಎಲ್ಲವನ್ನು ನೋಡಿದ, ಕೇಳಿದ ಸಂಗಯ್ಯ ಇವಳು ನಿಜವಾಗಿಯೂ "ಪೂರ್ವಲಾಂಛನಧಾರಿಯೆಂದು" ಮನದಲ್ಲಿ ಯೋಚಿಸಿ ಆಕೆಯ ಮುಂದೆ ನೆಲದಲ್ಲಿ ಬಿದ್ದು ನಮಿಸುತ್ತಾ

ಯಿಟ್ಟಿ ಲಾಂಛನಮುನ ಕೆವ್ವರಾಚಾರ್ಯು?
ಲೆಟ್ಟಿವಿ ನಿಯಂಮಂಬು? ಲೆಟ್ಟಿದಿ ಸರ್ಯ?
ತರುಣಿ! ಮೀಗುರು ಸಂಪ್ರದಾಯಂಬು ವಾರು
ಧರಣಿ ನೇತಾವುನಂದಪಮು ನೇಯುದುರು?
ಸಂತತಂಬುನು ನೇರಿ ಸದ್ಗೋಷ್ಠಿ ನುಂದು
ರಿಂತಯು ಜೆಪ್ಪಮಾ ಕೇರ್ವಡ

(ಗೂ.ವೆಂ.ಸು.(ಸಂ), ಬ.ಪು., ತೃ.ಆ, ಸಾಲು–೩೦೫–೩೧೦)

(ಇಂತಹ ಲಾಂಛನಕೆ ಯಾರು ಆಚಾರ್ಯರು, ಎಂತಹ ನಿಯಮಗಳು, ಎಂತಹ ನಡತೆ, ಈ ತರುಣಿಯಂತಹ ಗುರು ಸಂಪ್ರದಾಯದ ಜನರು ಈ ಧರಣಿಯಲ್ಲಿ ಈಗಲೂ ತಪಸ್ಸು ಮಾಡುತ್ತಿರುವರೇ, ಸತತವಾಗಿ ಇಂತಹ ಸದ್ಗೋಷ್ಠಿಯಲ್ಲಿರುವ ನೀನು ನನಗೀಗ ಇದೆಲ್ಲವನ್ನು ತಿಳಿಹೆಂದು ಕೇಳುತ್ತಾನೆ ಸಂಗಯ್ಯ)

ಎಂದು ಅವಳ ಹಿನ್ನೆಲೆಯನ್ನು ಇಂತಹ ಸದ್ಭಕ್ತಿಗೆ ಮಾರ್ಗದರ್ಶನ ನೀಡಿದವರಾರು ಅವರನ್ನೊಮ್ಮೆ ಕಾಣಬೇಕೆಂಬ ಬಯಕೆಯುಂಟಾಗಿದೆ ಎಂದು ಕೇಳುತ್ತಾನೆ ಸಂಗಯ್ಯ. ವೇಶ್ಯೆಯು ತನ್ನ ಪೂರ್ವಾಪರಗಳೆಲ್ಲವನ್ನು ತಿಳಿಸಿ ಶಿವಪೂಜೆಗೆ ಅಣಿಯಾಗುತ್ತಾಳೆ. ತನ್ನೊಂದಿಗಿರುವ ಇತರೆ ಗೆಳತಿಯರನ್ನು ಕರೆದು ಶಿವಪೂಜೆಯಲ್ಲಿ ತೊಡಗಿಸಿಕೊಳ್ಳುತ್ತಾಳೆ. ಹಾಡು, ಪೂಜೆಗಳೊಂದಿಗೆ ಬೆಳಗಾಗುವವರೆಗೂ ಗೋಷ್ಠಿಗಳು ನಡೆಯುತ್ತವೆ. ಲಿಂಗಾರ್ಚನೆ ಮುಗಿದ ಬಳಿಕ ಸಂಗಯ್ಯನ ಪಾದೋದಕ ಸೇವೆ ಮಾಡಿದ ವೇಶ್ಯೆಯು ಈ ಸೇವೆಯಿಂದ, ಅವನ ಪ್ರಸಾದದಿಂದ ಸುಖ ಸೇವೆಯು ಉಂಟಾಯಿತು. "ನಿಂತ ಕಾಲಲಿ ನಿಲ್ಲದಂತೆ ತಿರುಗುವ ಚಿಂತೆಯು ಹಾಳಾದುದೆಂದು" ಮನದಲ್ಲಿ ಹಿಗ್ಗುವಳು. ಹೀಗೆ ತನ್ನ ಮುಗ್ಧ ಭಾವದಿಂದ ವೇಶ್ಯೆಯ ಮನಸ್ಸನ್ನು ಪರಿವರ್ತಿಸಿ, ಅವಳನ್ನು ಲಿಂಗಪೂಜೆಯಲ್ಲಿ ತೊಡಗುವಂತೆ ಮಾಡಿದ ಸಂಗಯ್ಯ ಬಸವಣ್ಣನಲ್ಲಿ ಬಂದು ನಡೆದ ಘಟನೆಯನ್ನು ವಿವರಿಸುತ್ತಾ,

ಬಸವ; ಯೇ ಮನಿ ಜೆಪ್ಪ ಭರ್ಗುಂಡೇ ಯೆರಂಗು
ನೆಸಂಗ ಲಂಜೆಚಿಕ ಮೇ ನೀರಾತ್ರಿ ಸೇಂತ;
ನೀವುನು ಮಾತೋಡ ರಾವೈತಿಗಾನಿ
ವೇಪು ನಂತಕು ನೊಕ್ಕ ವಿಧಮ್ಮೆನ ಸುಖಮು;

ಐನನು ಲಂಜೆರ್ಕ ಮಚ್ಚೊಟಂ ಜೇಯು
ಚೋ ನಿನ್ನುಂದಲಂಚಿತಿಂ ಜುಮ್ಮಯ್ಯ ಬಸವ;
ಪುಟ್ಟಿತಿಂಗಾನಿ ಮುನ್ನಿಟ್ಟಿ ಸುಖಂಬು
ನಿಟ್ಟಿಲಂಜೆಜೆಕಂಬು ನೆಜುಂಗ ನೆನ್ನಂಡುನು;

(ಗೂ.ವೆಂ.ಸು.(ಸಂ), ಬ.ಪು., ತೃ.ಆ, ಸಾಲು-೪೦೭-೪೧೪)

(ಬಸವ ಏನೆಂದು ಹೇಳಲಿ ನಾನು ಸೂಳೆಗೈದ ರೀತಿಯನ್ನು, ನೀನು ನನ್ನ ಜೊತೆಯಲ್ಲಿ ಬಾರದೆ ಹೋದೆ. ಬೆಳಕರಿಯುವವರೆಗೂ ಒಂದೇ ವಿಧವಾದ ಸುಖವು. ನಾನು ಸೂಳೆಗೈಯ್ಯುವಾಗ ನಿನ್ನನ್ನು ನೆನಪಿಸಿಕೊಂಡೆ ಬಸವ. ಹುಟ್ಟಿದ ದಿನದಿಂದ ಇಲ್ಲಯವರೆಗೂ ಎಲ್ಲಿಯೂ ಇಂತಹ ಸುಖವಾಗಿ ಸೂಳೆಗೈಯ್ಯುವುದನ್ನು ನಾನು ತಿಳಿದಿಲ್ಲ)

ಎನ್ನುತ್ತಾ ನಿನ್ನಿಂದ ಇಂತಹ ಭಾಗ್ಯ ಲಭಿಸಿತು. ಎಂತೆಂಥಾ ಭಕ್ತರನು ನಾನು ಇಲ್ಲಿ ಕಂಡಿದ್ದೇನೆ. ಆದರೆ ಇವಳಂಥಾ ಭಕ್ತೆಯನು ನಾನು ಎಲ್ಲಿಯೂ ನೋಡಿಲ್ಲ. ಹಳದಿ ವಿಭೂತಿಧಾರಿ, ಬಿಳಿಯಾದ ರುದ್ರಾಕ್ಷಿಗಳು, ಕೆಂಪು ಜಡೆ ಇಂತಹ ಲಾಂಛನವುಳ್ಳ ಭಕ್ತೆಯನ್ನು ಎಂದೂ ಕಂಡಿರಲಿಲ್ಲ. ಎಂದು ಹೇಳುತ್ತಿದ್ದ ಮುಗ್ಧಸಂಗಯ್ಯನ ಮಾತುಗಳನ್ನು ಕೇಳುತ್ತಿದ್ದವರೆಲ್ಲ ಕೈತಟ್ಟಿ ನಗುತ್ತಿದ್ದರು. ಬಸವಣ್ಣ ಚೆನ್ನಬಸವಣ್ಣನ ಕಡೆ ನೋಡಿ ಇಂತಹ ಮುಗ್ಧಭಕ್ತಿಯನ್ನು ಹೊಂದಿರುವ ಭಕ್ತರುಂಟೆ? ಪರಮೇಶ್ವರನನ್ನು ಬಿಟ್ಟು ಉಳಿದ ವಿಷಯಗಳನ್ನೇ ತಿಳಿಯದ ಇಂತಹ ಮುಕ್ಕಣ್ಣ ಭಕ್ತರು ಮುಗ್ಧರೆನಿಸರೇ? ಎಂದು ಪ್ರಶಂಸಿದಾಗ ಚೆನ್ನಬಸವನೂ ಮುಗ್ಧಸಂಗಯ್ಯನ ಈ ಭಕ್ತಿಗೆ ಕೈಜೋಡಿಸಿ ನಮಿಸುತ್ತಾನೆ. ಇಲ್ಲಿ ಕವಿಗಳು ಈ ಮುಗ್ಧಪಾತ್ರದ ಮೂಲಕ ಶಿವಭಕ್ತರಾದವರಿಗೆ ಶಿವಸೇವೆ ಬಿಟ್ಟರೆ ಬೇರೇನು ತಿಳಿದಿಲ್ಲ. ಶಿವನೇ ಸರ್ವವೂ ಎಂಬ ಭಾವನೆ ಶಿವಭಕ್ತರಲ್ಲಿರುತಿತ್ತು ಎಂಬ ಅಂಶವನ್ನು ಸೂಕ್ಷ್ಮವಾಗಿ ಕವಿಗಳು ಇಲ್ಲಿ ವ್ಯಕ್ತಪಡಿಸಿದ್ದಾರೆ.

**ರುದ್ರಪಶುಪತಿ :**

ಪರಮೇಶ್ವರನನ್ನು ಭಗವಂತನೆಂದು ಅಂಗೀಕರಿಸಿ ಸ್ನೇಹಿತನಂತೆ, ಆಪ್ತನಂತೆ ಭಾವಿಸಿ, ಶಿವನಿಗೆ ಸಂರಕ್ಷಕರಿಲ್ಲವೆಂದು ಊಹಿಸಿ ಆ ಮಹಾತ್ಮನನ್ನು ಕಷ್ಟದಿಂದ ಕಾಪಾಡುವ ಭಾರ ತನ್ನದೆಂದುಕೊಂಡು ಅಜ್ಞಾನದಿಂದ, ಮಮಕಾರದಿಂದ ಕೂಡಿರುವ ಮುಗ್ಧಭಕ್ತಿಯು ರುದ್ರಪಶುಪತಿ ಎಂಬ ಶರಣನ ಕಥೆಯಲ್ಲಿ ಕಾಣಸಿಗುತ್ತದೆ. ಒಮ್ಮೆ ಶಿವಾಲಯದಲ್ಲಿ ಪ್ರವಚನ ನಡೆಯುತ್ತಿರುವಾಗ ಅಲ್ಲಿ 'ಸಮುದ್ರ ಮಂಥನ' ಕಥೆಯ ವಿವರಣೆ ನಡೆಯುತ್ತಿರುತ್ತದೆ. ಕಥೆಯಲ್ಲಿ ಬ್ರಹ್ಮಾದಿ ದೇವತೆಗಳೆಲ್ಲ ಓಡಿ ಹೋಗಲು ಶಿವನು "ಕವಿದ ವಿಷಮಂ ನುಂಗಿದನುಮಾ ಪ್ರವರನೆನಲು" ಎಂಬ ಮಾತನ್ನು ಕೇಳಿದ ರುದ್ರಪಶುಪತಿ ಬೆರಗಾಗುತ್ತಾನೆ. ನೆಲಕ್ಕೆ ಬಿದ್ದು ಹೊರಳಾಡುತ್ತಾ,

...ಹಾ! ಚೆಡಿತಿ
ನನಿ ನೇಲಂಬಡಿ ಪೊರ್ಲಿ ಯಕ್ಕಟಾ! ನಿನ್ನು

ವೆಱ್ಱಿ ಜೇಸಿರಿಗಾಕ! ವಿಶ್ವೇಶ! ಯೆಟ್ಟಿ
ವೆಱ್ಱಿವಾರೈನನು ವಿಷಮಂದ್ರಾವುದುರೆ?
ಬ್ರದುಕುದುರೆ? ವಿಷಮ್ಮು ಪಾಲೈನವಾರ?
ಲಿದಿ ಯೆಟ್ಟು ವಿನವಚ್ಚು; ನೇಮಿ ಸೇಯುದುನು?
ನಿಕ್ಕ ಮೆವ್ವಿಧಮುನ ನಿನ್ನೆಕಾಕೆಱುಂಗ;
ಮುಕ್ಕಂಟಿ; ನಾಕಿಂಕ ದಿಕ್ಕೆವ್ವರಯ್ಯ?

(ಗೂ.ವೆಂ.ಸು.(ಸಂ), ಬ.ಪು., ತೃ.ಆ, ಸಾಲು-೪೭೫-೪೮೨)

( ಹಾ... ಕೆಟ್ಟೆನು ಎನುತ ಹೊರಳಾಡುತ್ತಾ, ನಿನ್ನ ಮರುಳು ಮಾಡಿದರಲ್ಲಾ ವಿಶ್ವೇಶ, ಎಂಥಹ ಮರುಳನಾದರೂ ವಿಷವನ್ನು ಕುಡಿಯುವನೇ? ವಿಷ ಕುಡಿದವರು ಬದುಕುವುರೇ? ವಿಷವು ಹಾಲಾಗುವುದೇ? ನೀ ವಿಷ ಕುಡಿದಿರುವೆ ಎಂಬುದನ್ನು ನಾನು ಹೇಗೆ ಕೇಳಿಸಿಕೊಳ್ಳಲಿ, ಹೇಗೆ ಸಹಾಯ ಮಾಡಲಿ, ನಿಜವಾಗಿಯೂ ನಿನ್ನನ್ನು ಬಿಟ್ಟು ನಾನಿರುವುದಿಲ್ಲ ಮುಕ್ಕಣ್ಣ ನನಗೆ ಇನ್ನು ದಿಕ್ಕು ಯಾರಯ್ಯ?)

ಎಂದು ರೋಧಿಸುತ್ತಾ ಇದಕ್ಕೆ ಕಾರಣರಾದವರನ್ನು ಮತ್ತು ಕಾಲಕೂಟ ವಿಷವನ್ನು ಸೃಷ್ಟಿಸಿದವರನ್ನು ನಿಂದಿಸುತ್ತಾ ಹತಾಶನಾಗುತ್ತಾನೆ. 'ನನಗಿನ್ನು ದಿಕ್ಕು ಯಾರಯ್ಯ' ಎಂದು ಅತ್ಯಂತ ದೀನನಾಗಿ ಕೇಳುವ ಮಾತುಗಳು ಓದುಗರ ಹೃದಯವನ್ನು ನಾಟುವಂತಿವೆ. ಅಸಮರ್ಥರಾಗಿ ಓಡಿ ಹೋದ ಬ್ರಹ್ಮಾದಿ ದೇವರುಗಳೆಲ್ಲರೂ ಬುದ್ಧಿವಂತರು. ಆಲೋಚಿಸಿದಯೇ ವಿಷವನ್ನಾರೋಗಿಸಿ, ಸರ್ವ ಲೋಕವನ್ನು ರಕ್ಷಿಸಿದ ಫಣಿಭೂಷಿತನಾದ ಪರಮೇಶ್ವರ ನೀನೆ ಬುದ್ಧಿಯಿಲ್ಲದವನು. ಯಾರಿಗೂ ಬೇಡದಿರುವುದು ನಿನಗೇಕೆಬೇಕಿತ್ತು ಎಂದು ರುದ್ರಪಶುಪತಿ ಗೋಳಾಡುತ್ತಾನೆ. ಶಿವನನ್ನು ಈ ಸಂಕಷ್ಟದಿಂದ ಪಾರುಮಾಡುವುದೇಗೆ ಎಂಬ ಆವೇಧನೆಯಲ್ಲಿ, ನನಗಾಗಿಯೇ ನೀನಿರುವುದು ಉಂಡ ವಿಷವನ್ನು ಈಗಲೇ ಹೊರಗೆ ಉಗುಳು. ನಿನಗೆ ಕೈಮುಗಿದು ಬೇಡುವೆನು ಎನ್ನುತ್ತಾ,

ಗಟಕಟಾ; ಮೇನ ಸಗಂಬುನ ನುಂಡಿ
ಯೆಟ ಪೋಯಿತವ್ವ, ನೀವೆರುಂಗವೇ ಗೌರಿ
ಪ್ರಮಥ ಗಣಮುಲಾರ, ಪರಮಾಪ್ತುಲಾರ
ಸಮಸಿನ ವೆಂಡಿ ಮೀಶಕ್ಯಮೇ ಕಾವ?
ಶತರುದ್ರುಲಾರ, ಯಸಂಖ್ಯಾತುಲಾರ
ಕ್ಷಿತಿಧರಕನ್ಯಕಾಪತಿಂ ಗಾವರಯ್ಯ

(ಗೂ.ವೆಂ.ಸು.(ಸಂ), ಬ.ಪು., ತೃ.ಆ, ಸಾಲು-೪೮೫-೪೯೦)

(ಅಕಟಕಟಾ ಮೈಯಲ್ಲಿ ಅರ್ಧನಾರೀಶ್ವರಯಾಗಿದ್ದ ನೀನು ಎಲ್ಲಿಗೆ ಹೋಗಿದ್ದೆ ಗೌರಿ? ಪ್ರಮಥ ಗಣಂಗಳಿರ, ಪರಮಾಪ್ತರುಗಳೆ, ಶತರುದ್ರರುಗಳೆ, ಅಸಂಖ್ಯಾತಗಣರೇ ಕ್ಷಿತಿಗೆ ಪತಿಯಾದ ನನ್ನ ದೇವರನ್ನು, ನನ್ನ ಸ್ವಾಮಿಯನ್ನು ಉಳಿಸಿ ಬದುಕಿಸಿಕೊಡಿ)

ಎನ್ನುತ್ತ ದೇವಾನುದೇವತೆಗಳೆಲ್ಲರಲ್ಲಿ ಬೇಡುತ್ತಾ, ನಮ್ಮ ಪ್ರಾಣೇಶನು ವಿಷವನ್ನು ಕುಡಿದಿಹನು ಬದುಕಿಸಿಕೊಡಿ ಎನ್ನುವನು. ನಮ್ಮ ಶಿವನಿಗೆ ತಾಯಿ ಇದ್ದಿದ್ದರೆ ವಿಷವನ್ನು ಕುಡಿಯಲು ಬಿಡುತ್ತಿದ್ದಳೇ. ಅನಾಥನಾದ ನನ್ನ ಶಿವನಿಗೆ ಸರಿ–ತಪ್ಪುಗಳು ತಿಳಿಸುವರಿಲ್ಲದೆ ವಿಷವನ್ನುರೋಗಿಸಿಹನು. ಇದೊಂದು ಬಾರಿ ಬದುಕಿಸಿಕೊಡಿ. ಮತ್ತೆಂದೂ ಇಂತಹ ತಪ್ಪು ಮಾಡುವುದಕ್ಕೆ ನಾನು ಬಿಡುವುದಿಲ್ಲವೆಂದು ಗೋಳಾಡುತ್ತಿರುತ್ತಾನೆ. ಈ ರೀತಿಯಲ್ಲಿ ಪರಿಪರಿಯಾಗಿ ಬೇಡುವ ಈ ರುದ್ರಪಶುಪತಿ, ವಿಷಕಂಠನಾದ ಶಿವನು ವಿಷವನ್ನು ಕುಡಿದರೆ ಯಾವ ಪ್ರಮಾದವೂ ಆಗುವುದಿಲ್ಲವೆಂಬುದನ್ನು ತಿಳಿಯದ ಅಮಾಯಕ. ಅಲ್ಲದೆ ಶಿವನ ಅರ್ಧಾಂಗಿಯಾದ ಪಾರ್ವತಿ ವಿಷವನ್ನು ಕುಡಿಯುವಾಗ ಏಕೆ ನಿಲ್ಲಿಸಲಿಲ್ಲ ಎಂದು ಆಕ್ಷೇಪಿಸುತ್ತಾನೆ. ಶಿವನು ಲೋಕರಕ್ಷಕನೆಂದು ಹೇಳುವ ರುದ್ರಪಶುಪತಿಯು ಅವನು ವಿಷ ಕುಡಿದನೆಂಬ ಮಾತು ಕೇಳಿ ವಿಲವಿಲ ಒದ್ದಾಡುತ್ತಾನೆ. ಅತೀ ದೀನನಾಗಿ "ಸಾವು ತಪ್ಪಿಸಿರಯ್ಯ ಸದ್ಗುರುನಾಥ, ಔಷಧವನ್ನು ನೀಡಿ ಕಾಯಿರಯ್ಯಾ, ತಾಯಿಲ್ಲದವನನ್ನು ಹೀಗೆ ನಡೆಸಿಕೊಳ್ಳುವುದು ಉಚಿತವೇ ಎಂದು ದುಃಖಿಸುವುದು ಅವನ ಮುಗ್ಧತ್ವದ ಜೊತೆಗೆ ಸಹಾನುಭೂತಿ ಕೂಡಿ ಅವನ ಅಮಾಯಕ ಭಕ್ತಿಯು ಮನಸ್ಸನ್ನು ಕದಡುತ್ತದೆ. ಇಂತಹ ಮುಗ್ಧತ್ವದ ಮಾತುಗಳು ಮನಸ್ಸಿಗೆ ನಾಟುತ್ತವೆ. 'ಪಿನಾಕಿಯೇ ಈ ವಿಷವ ಕೈಗೊಳ್ಳದುಗಳಯ್ಯಾ ನಿನಗೆ ಮೊಕ್ಕುವೆನು' ಎನ್ನುವಾಗ ಶಿವನನ್ನು ರಕ್ಷಿಸಿಕೊಳ್ಳಲು ಅವನು ಪಡುತ್ತಿರುವ ಹೋರಾಟ, ತಡವಾದರೆ ವಿಷ ಹೊಟ್ಟೆಗಿಳಿಯುವುದೋ ಎಂಬ ಆತಂಕ ರುದ್ರ ಪಶುಪತಿಯ ಮಾತುಗಳಲ್ಲಿ ಕಾಣುತ್ತದೆ.

ತಾಯಿಲ್ಲದ ತಬ್ಬಲಿ ಮಗನಾದ ಶಿವನನ್ನು ಪಾಲಿಸುವರಿಲ್ಲದೆ ಆದರಿಸುವರಿಲ್ಲದೆ ಸರಿ–ತಪ್ಪುಗಳರಿವಿಲ್ಲದೆ ವಿಷವನ್ನು ಕುಡಿದಿಹನೆಂದು ಅವನ ಮೇಲಿನ ಸ್ನೇಹಾನುರಾಗದಿಂದ ರಕ್ಷಿಸಿಕೊಳ್ಳಬೇಕೆಂದುಕೊಳ್ಳುತ್ತಾನೆ. ಕುಡಿದ ವಿಷವನ್ನು ಉಗುಳುವಂತೆ ಪರಿಪರಿಯಾಗಿ ಬೇಡಿಕೊಂಡರೂ ಕೇಳಿಸಿಕೊಳ್ಳುವುದಿಲ್ಲ. ಶಿವನ ಸಾವನ್ನು ನಾನು ನೋಡುವುದಿಲ್ಲವೆಂದು ತಾನೇ ಸಾಯಲು ನಿಶ್ಚಯಿಸಿ ಘನಜಲಾಂತ (ಬಾವಿ)ದಲ್ಲಿ ಬೀಳುತ್ತಾನೆ. ಶಿವನಾಗಲಿ, ಶಿವ ಭಕ್ತರಿಗಾಗಲಿ ಅಪಾಯವೊದಗಿದರೆ ತಮ್ಮ ಪ್ರಾಣವನ್ನು ನೀಡಲು ಹಿಂಜರಿಯುವುದಿಲ್ಲ ಎಂಬ ಸತ್ಯವು ಈ ಸನ್ನಿವೇಶದಲ್ಲಿ ನಮಗೆ ತಿಳಿಯುತ್ತದೆ. ತನಗಾಗಿ ಪ್ರಾಣ ತ್ಯಜಿಸಲು ಸಿದ್ಧನಾಗಿ ಬಾವಿಗೆ ಹಾರಿದಾಗ, ಶಿವನು ಪಾರ್ವತಿ ಸಮೇತ ಪ್ರತ್ಯಕ್ಷನಾಗಿ ರುದ್ರಪಶುಪತಿಯನ್ನು ಬದುಕಿಸಿ ನಿನ್ನ ಭಕ್ತಿಗೆ ಮೆಚ್ಚಿದ್ದೇನೆ. ನಿನಗೇನು ವರಬೇಕು ಕೇಳು ಎಂದು ಶಿವನು ಕೇಳುತ್ತಾನೆ. ಶಿವನನ್ನು ಕಣ್ಣಾರೆ ಕಂಡ ಪಶುಪತಿ ಕಾಲಿಗೆ ನಮಸ್ಕರಿಸಿ, ನಾನು ಏನನ್ನು ಬೇಡುವುದಿಲ್ಲ ನೀನು ಕುಡಿದಿರುವ ವಿಷವನ್ನು ಉಗುಳು ಅದೇ ನನಗೆ ನೀ ಕೊಡುವ ದೊಡ್ಡ ವರ ಎಂದು ವಿನಮ್ರತೆಯಿಂದ ಕೇಳುವನು. ಈ ಮಾತಿಗೆ ಶಿವನು "ಅದು ಯಾವ ಹಿರಿದು ಅಣುಮಾತ್ರ ನನ್ನ ಈ ಕಂಠದಲ್ಲಿ ಸಿಕ್ಕಿಹುದು. ಇದರಿಂದ ನಾನು ಸಾಯುವುದಿಲ್ಲ ಎಂದು ಹೇಳಿದರೂ ಕೇಳದ ಪಶುಪತಿ, ಕಂಠದಲ್ಲಿರುವುದು ಹೊಟ್ಟೆಗೆ ಇಳಿದರೆ ಆಪತ್ತು ತಪ್ಪಿದ್ದಲ್ಲ. ಮುಂದೆ ಆಗುವ ಅನಾಹುತವನ್ನು ತಪ್ಪಿಸಿಕೊಳ್ಳಬೇಕೆಂದರೆ ನೀನು ಆ ವಿಷವನ್ನು ಉಗುಳಿಬಿಡು ಬೇರೆ ಮಾತುಗಳನ್ನು ಹೇಳಿ ನನ್ನನ್ನು ಮೋಸಗೊಳಿಸದಿರು.

ಒಂದು ವೇಳೆ ಕಂಠದಲ್ಲಿರುವ ವಿಷ ಹೊಟ್ಟೆಗಿಳಿದರೆ ಖಂಡಿತಾ ನಾನು ನಿನಗಿಂತ ಮೊದಲೇ ಸಾಯುತ್ತೇನೆ. ಎಂದು ರುದ್ರಪಶುಪತಿ ತನ್ನ ವೇದನೆಯನ್ನು ಹೇಳಿಕೊಳ್ಳುತ್ತಾನೆ. ರುದ್ರಪಶುಪತಿಯ ಮುಗ್ಧತೆಗೆ ಮಾರುಹೋದ ಶಿವನು ಅವನನ್ನು ಎತ್ತಿ ಆಲಂಗಿಸಿಕೊಳ್ಳುತ್ತಾ,

ಪ್ರಮಥುಲಯಾನ ನೀಪಾದಂಬುಲಾನ
ಸಮಯ ನಿವ್ವಿಷಮುನ ಸತ್ಯಮಿಟ್ಲನಿನ
ನಮ್ಮವೇ ವಲಪಲಿನಾತೊಡ ಯೆಕ್ಕಿ
ನೆಮ್ಮಿಂ ಜೂಚುಚುನುಂಡು ನೀಲಕಂಠಂಬು
ನನಿ ಯೂರುಪೀಠಂಬುನಂದು ಧರಿಂಚೆ

(ಗೂ.ವೆಂ.ಸು.(ಸಂ), ಬ.ಪು., ತೃ.ಆ, ಸಾಲು-೫೪೯-೫೪೩)

(ಪ್ರಮಥರಾಣೆ ನಿನ್ನ ಪಾದಗಳ ಮೇಲಾಣೆ ನಾನು ಈ ವಿಷದಿಂದ ಸಾಯುವುದಿಲ್ಲ. ಸತ್ಯವಾಗಿಯೂ ನನ್ನನ್ನು ನಂಬು. ನಿನಗೆ ನಂಬಿಕೆಯಿಲ್ಲವೆಂದರೆ ಬಂದು ನನ್ನ ಬಲ ತೆಡೆಯೇರಿ ನಿಂತು ನೋಡು ನನ್ನ ನೀಲಕಂಠವನ್ನು ಎಂದು ತನ್ನ ತೊಡೆಯ ಮೇಲೆ ಕೂರಿಸಿಕೊಳ್ಳುತ್ತಾನೆ)

ಹೀಗೆ ತನ್ನ ತೊಡೆಯ ಮೇಲೆ ಕೂರಿಸಿಕೊಂಡು ಸಂತೈಸಿದರೂ ಸಮಾಧಾನವಿಲ್ಲದ ರುದ್ರ ಪಶುಪತಿ ಕಂಠದಲ್ಲಿರುವ ವಿಷವು ಕೊಂಚ ಅಲುಗಾಡಿದರೂ ನಾನು ಸಾಯುವೆನೆಂದು ಶಿವನ ಕುತ್ತಿಗೆಯನ್ನು ನೋಡುತ್ತಾ ತೊಡೆಯ ಮೇಲೆ ಕೂತಿರುತ್ತಾನೆ. ಇಂತಹ ನಿರ್ಮಲ, ನಿಶ್ಚಲ ಭಕ್ತಿಯ ಪಶುಪತಿಯ ಮುಗ್ಧತನ ಎಂಥವರಿಗೂ ಆಶ್ಚರ್ಯವನ್ನುಂಟು ಮಾಡುತ್ತದೆ.

**ಬೆಜ್ಜಮಹಾದೇವಿ :**

ಬೆಜ್ಜಮಹಾದೇವಿ ಹಿರಿಯ ಶಿವಭಕ್ತೆ. ಈ ಶಿವಭಕ್ತೆ ಶಿವನಿಗೆ ತಾಯಿಯಿಲ್ಲವೆಂದು ಭಾವಿಸಿ ವ್ಯಥೆಪಡುವ ಕಥಾನಕವನ್ನು ಪಾಲ್ಕುರಿಕೆ ಸೋಮನಾಥ ಮತ್ತು ಭೀಮಕವಿ ತುಂಬಾ ಸೊಗಸಾಗಿ ಚಿತ್ರಿಸಿದ್ದಾರೆ. ಕಥಾ ವಿವರಗಳಲ್ಲಿ ತೆಲುಗು ಮತ್ತು ಕನ್ನಡದಲ್ಲಿ ಯಾವ ಬದಲಾವಣೆಗಳು ಕಾಣಬರುವುದಿಲ್ಲ. ತಾಯಿಯ ವಾತ್ಸಲ್ಯ ಪ್ರೇಮವನ್ನು ತಮ್ಮದೇ ವಿಶಿಷ್ಟ ಶೈಲಿಯಲ್ಲಿ ವ್ಯಕ್ತಪಡಿಸಿದ ಕವಿಗಳ ರೀತಿ ಅನನ್ಯವಾದುದು. ಶಿವನ ಮೇಲಿನ ಬೆಜ್ಜಮಹಾದೇವಿಯ ಪ್ರೀತಿ ಮತ್ತು ಅವನು ಒಂಟಿ ಎಂದು ಭಾವಿಸಿ ಅನುಭವಿಸುವ ಯಾತನೆ, ತಾಯಿ ಪ್ರೇಮಕ್ಕೆ ಇರುವ ವಿಶಿಷ್ಟತೆಯನ್ನು ಇಲ್ಲಿ ಅನಾವರಣಗೊಳಿಸಿದ್ದಾರೆ. ತಾಯಿಯಿಲ್ಲದೆ ಶಿವನು ಎಷ್ಟು ಕಷ್ಟಗಳನ್ನು ಅನುಭವಿಸುತ್ತಿದ್ದಾನೆಯೋ ಎಂದು ಶಿವನನ್ನು ಕುರಿತು ಪರಿತಪಿಸುವ ವಿಧಾನವನ್ನು ಇಬ್ಬರೂ ಕವಿಗಳು ತಮ್ಮ ಮಾತೃವಾತ್ಸಲ್ಯವನ್ನು ಇಲ್ಲಿ ಪ್ರಕಟಪಡಿಸಿದ್ದಾರೆ.

ಭಗವಂತನನ್ನು ಮಗನಂತೆ ಲಾಲಿಸಿ, ಪ್ರೀತಿಸುವ ಬೆಜ್ಜ ಮಹಾದೇವಿಯ ವಾತ್ಸಲ್ಯಮಯವಾದ ಭಕ್ತಿ ಅವಳ ಮುಗ್ಧತೆಯನ್ನು ತೋರಿಸುತ್ತದೆ. ಜಗತ್ತನ್ನು ಕಾಪಾಡುವ, ಪಾಲಿಸುವ, ದಿಕ್ಕಿಲ್ಲದವರಿಗೆ ಆಧರಿಸುವ ಶಿವನು ತಾನೇ ದಿಕ್ಕಿಲ್ಲದವನಾಗಿ, ಅನಾಥವಾಗಿರುವುದನ್ನು ಕಂಡು ಪರಿತಪಿಸುವ ಅವಳ ಮನೋವ್ಯಥೆಯನ್ನು ಪಾಲ್ಕುರಿಕೆ ಸೋಮನಾಥ ಹೇಳುವುದು ಹೀಗೆ,

ತಲ್ಲಿಗಲ್ಗಿನ ನೇಲ ತಪಸಿ ಗಾನಿಚ್ಚುಂ?
ದಲ್ಲಿಗಲ್ಗಿನ ನೇಲ ತಲ ಜಡಲ್ಗಟ್ಟುಂ?
ದಲ್ಲಿಯುನ್ನ ನಿಷಂಬುಂದ್ರಾವನೇ ಲಿಚ್ಚುಂ?
ದಲ್ಲಿಯುಂಡಿನಂ ದೊಲ್ಲು ದಾಲ್ಚ ನೇ ಲಿಚ್ಚುಂ
ದಲ್ಲಿಪಾಮುಲನೇಲ ಧರಿಯಿಂಪನಿಚ್ಚುಂ?
ದಲ್ಲಿಬೂಡಿದ ಯೇಲ ತಾಂಬೂಯ ನಿಚ್ಚುಂ?

(ಗೂ.ವೆಂ.ಸು.(ಸಂ), ಬ.ಪು., ತೃ.ಆ, ಸಾಲು-೫೬೧-೫೬೬)

(ತಾಯಿಯು ಇದ್ದಿದ್ದರೆ ತಪಸ್ವಿಯಾಗಲು ಬಿಡುತ್ತಿದ್ದಳೇ? ತಾಯಿಯಿದ್ದರೆ ತಲೆಗೂದಲು ಜಡೆಗಟ್ಟುತ್ತಿತ್ತೆ? ತಾಯಿಯಿದ್ದಿದ್ದರೆ ವಿಷ ಕುಡಿಯಲು ಬಿಡುತ್ತಿದ್ದಳೇ? ತಾಯಿಯಿದ್ದಿದ್ದರೆ ಚರ್ಮವನ್ನು ಉಡಲು ಕೊಡುತ್ತಿದ್ದಳೇ? ತಾಯಿಯಿದ್ದರೆ ಬೂದಿಯನೇಕೆ ಹಚ್ಚಿಕೊಳ್ಳಲು ಬಿಡುತ್ತಿದ್ದಳು)

ಎಂಬ ಬೆಜ್ಜಮಹಾದೇವಿಯ ಪ್ರಶ್ನೆಗಳು ಅವಳ ಹೃದಯ ವೈಶಲ್ಯತೆಯ ಪ್ರೀತಿ ಓದುಗರ ಮನ ಕಲಕುತ್ತದೆ. ಶಿವನಿಗೆ ತಾಯಿ ಎಂಬುವಳಿದ್ದರೆ ಅವನಿಗೆ ಮೇಲಿನ ಅನಾಹುತಗಳಾಗಲು ಸಾಧ್ಯವಿರುತ್ತಿರಲ್ಲ. ಎಂಬ ಅವಳ ಆಲೋಚನೆ ವಿಶಿಷ್ಟವಾದದ್ದು. ಸೋಮನಾಥನು ಇಂತಹ ಸಂದರ್ಭಗಳಲ್ಲಿನ ವರ್ಣನೆಗಳನ್ನು, ಪಾತ್ರಗಳ ಸ್ವಭಾವಗಳನ್ನು ಚಿತ್ರಿಸುವುದರಲ್ಲಿ ಅವನ ನೈಪುಣ್ಯ ಅಸಮಾನ್ಯವಾದುದು. ಭೀಮಕವಿಯು ಕೂಡ ಈ ಸಂದರ್ಭದಲ್ಲಿ ಬೆಜ್ಜಮಹಾದೇವಿಯ ವಾತ್ಸಲ್ಯ ಪ್ರೀತಿಯನ್ನು ಹೇಳುವಾಗ, ಸೋಮನಾಥ ಹೇಳಿದ ರೀತಿಯಲ್ಲಿಯೇ ವರ್ಣಿಸಿರುವುನು.

"ತಾಯಿ ಮಗನಂ ತಿರಿಯಲೀವಳೆ
ತಾಯಿ ಮರುಳ್ಗಳೋಳಾಡಲೀವಳೆ
ತಾಯಿಯಿದ್ದಡೆ ಮಸಣಗಾಡಿಗೆ ಕಳುಹುವಳೆ ಮಗನ
ತಾಯಿ ಎಲುವಂ ಧರಿಸಲೀವಳೆ
ತಾಯಿಯಿಲ್ಲದ ತನಯನಾಗಿ ಅ
ಪಾಯದಿಂದವರಿವರೊಳುಂಡುಟ್ಟೀ ವಿಧಿಗೆ ಬಂದ"

(ಎಸ್. ವಿದ್ಯಾಶಂಕರ(ಸಂ), ಬ.ಪು.ಸಂ.೧೪, ಪ.೪)

ಎಂದು ಜಗದ್ ರಕ್ಷಕನ ಪಾಲನೆ ಇಲ್ಲವಲ್ಲ ಎಂದು ವೇಧನೆಪಡುವ ಮನಸು ಮಹಾದೇವಿಯದು. ಮಮಕಾರ ತುಂಬಿದ ಮಾತೃಮೂರ್ತಿಯಾದ ಮಹಾದೇವಿಯು ಶಿವನ ಜಡೆಗಟ್ಟಿದ ತಲೆ, ವಿಷ ಕುಡಿದುದನ್ನು, ಹಾವುಗಳನ್ನು ಸುತ್ತಿಕೊಂಡಿದ್ದನ್ನು, ದೇಶ ಸಂಚಾರಿಯಾಗಿ ಸುಡುಗಾಡುಗಳಲ್ಲಿ ತಿರುಗುತ್ತಿರುವುದನ್ನು ಕಂಡು ಮಮ್ಮಲ ಮರುಗುತ್ತಾಳೆ. ಪರಮಾತ್ಮನನ್ನು ಹಸಿಗೂಸಿನಂತೆ ಭಾವಿಸಿ ಅವನ ಕಷ್ಟವನ್ನು ತನ್ನ ಕಷ್ಟವೆಂದುಕೊಂಡ ಅವಳ ಮುಗ್ಧತೆಯು ಓದುಗರ ಮನಸ್ಸನ್ನು ಹಿಡಿದಿಡುತ್ತದೆ. ಲೌಕಿಕವಾದ ಸ್ನೇಹಾನುರಾಗಗಳನ್ನು ಭಗವಂತನ ಮೇಲಿಟ್ಟು ಅವನನ್ನು ಭಜಿಸುತ್ತಾ ನಿರ್ಮಲವಾದ

ಮನಸ್ಸಿನಿಂದ ಆರಾಧಿಸುವ ಮಹಾದೇವಿಯ ಗುಣ ನಮ್ಮನ್ನು ಮುಗ್ಧರನ್ನಾಗಿಸುತ್ತದೆ. ಬೆಜ್ಜ ಮಹಾದೇವಿಯು ಸ್ತ್ರೀ ಸಹಜವಾದ ಮಾತೃ ಭಾವದಿಂದ ನಾನೇ ಇವನಿಗೆ ತಾಯಿಯಾಗುವನೆಂದು ಶಿವನನ್ನು ಮಗುವೆಂದು ಭಾವಿಸಿ ಪಾಲಿಸುವ ಅವಳ ತಾಯ್ತನದ ಗುಣವನ್ನು ಸೋಮನಾಥ ವರ್ಣಿಸಿರುವುದು ಹೀಗೆ

"ತೊಂಗಿಲ್ಲ ಪೈ ನಿಡಿ ಲಿಂಗಮೂರ್ತಿಕಿನಿ
ಸಂಗನ ಗಾವಿಂಚು ನಭ್ಯಂಜನಂಬು
ಮುಕ್ಕೊತ್ತುಂ, ಗಡು ಪೊತ್ತು ನಟ, ವಿಂಪು ನಿವುರುಂ
ಬೆರುಂಗಂಗವಲೆ ನನಿ ತರುಣಿ ವೀಡ್ವಂಡಂಗಂ
ಜರಣಮುಲ್ಕರಮುಲುಂ ಜಾಂಗಂಗಂ ದಿಗುಚು
ನಲಂಗುಲು ನಲಚು ನರ್ಲಿಲಿ ಗಟ್ಟಿಪೆಟ್ಟಿ
ಜಲಮುಲು ವೀಂಪುನಂ ಜಜಿಚು ನಂತಂತ
ವೆಗಚಿ ಬೆಗಡಕುಂಡ ವೆನ್ನು ವ್ರೇಯುಚುನು
ನೊಗಿ ಮಸ್ತಕಮುನ ನೀರೊತ್ತು ದೋಯಿಟನು"

(ಗೂ.ವೆಂ.ಸು.(ಸಂ), ಬ.ಪು., ತೃ.ಆ., ಸಾಲು–೫೮೭–೫೯೬)

(ತೊಡೆಗಳ ಮೇಲೆ ಕೂರಿಸಿಕೊಂಡು ಲಿಂಗ ಮೂರ್ತಿಗೆ ಅಭ್ಯಂಜನ ಸ್ನಾನ ಮಾಡಿಸುತ್ತಾಳೆ. ಮೂಗೊತ್ತಿ, ಕಣ್ಣೊತ್ತಿ, ಎದೆಯೊತ್ತಿ ಬೆನ್ನನು ನೀವುತ್ತಾಳೆ. ಸಡಗರದಿಂದ ಬೇಗನೆ ಬೆಳೆಯಬೇಕೆಂದು ಕಾಲುಗಳನ್ನು ಚಾಚಿ ನೀವುತ್ತಾ ಗಂಧವನ್ನು ಹಚ್ಚುತ್ತಾಳೆ. ಬೆನ್ನಿಗೆ, ತಲೆಗೆ ಮತ್ತೆ ಮತ್ತೆ ನೀರನ್ನು ಹಾಕುತ್ತಾಳೆ)

ನಿರಂತರವಾಗಿ ಶಿವನನ್ನು ಧ್ಯಾನಿಸುವ ಮಹಾದೇವಿಯ ದೇಹ ಮತ್ತು ಮನಸ್ಸು ಶಿವಮಯವಾಗಿ ತಾನು ಆರೈಕೆ ಮಾಡುತ್ತಿರುವ ಲಿಂಗಮೂರ್ತಿಯನ್ನು ಹಸಿಗೂಸೆಂದು ಭಾವಿಸುತ್ತಾಳೆ. ತಾಯಿಯಾದವಳು ತನ್ನ ಮಗನ ಪೋಷಣೆಯಲ್ಲಿ ಸ್ವಲ್ಪವೂ ಕುಂದಾಗದಂತೆ ಜಾಗರೂಕತೆಯಿಂದ ಹೇಗೆ ಎಚ್ಚರವಹಿಸುತ್ತಾಳೋ ಹಾಗೆಯೇ ಮಹಾದೇವಿಯೂ ಕೂಡ ಜಾಗ್ರತೆವಹಿಸುತ್ತಾ ತನ್ನ ತಾಯ್ತನದ ಪ್ರೇಮವನ್ನು ಇಲ್ಲಿ ಅಭಿವ್ಯಕ್ತಪಡಿಸುತ್ತಾಳೆ.

ಜಗತ್ತಿಗೆ ಜನಕನಾದ ಶಿವನಿಗೇ ಮಹಾದೇವಿ ಮಾತೃವಾತ್ಸಲ್ಯವನ್ನು ತೋರಿಸುತ್ತಾಳೆ. ಮುಕ್ಕಣ್ಣನನ್ನು ಮುದ್ದುಮಗನೆಂದು ಭಾವಿಸಿ ದಿಕ್ಕಿಲ್ಲದ ಬಾಲಕನಿಗೆ ದಿಕ್ಕಾಗಿದ್ದಾಳೆ. ಗಂಗೆಯನ್ನೇ ಶಿರದಲ್ಲಿ ಧರಿಸಿದವನಿಗೆ ತಾನು ಅಭ್ಯಂಜನವನ್ನು ಮಾಡಿಸುತ್ತಾಳೆ. ಅರಿಶಿಣ ಹಚ್ಚಿ ಮಜ್ಜನ ಮಾಡಿಸಿ, ವಿಭೂತಿ ಹಚ್ಚಿ ದೃಷ್ಟಿ ತೆಗೆಯುತ್ತಾಳೆ. ಕೆನ್ನೆ ಚಿವುಟಿ ಅಳುವಾಗ ಬಾಯಲ್ಲಿ ಬೆರಳಿಟ್ಟು ಹಾಲು ಕುಡಿಸುವುದು ಎಂಥಹ ಅಮಾಯಕವಾದ ಪ್ರೀತಿ. ಅಪ್ಪಿ ಮುದ್ದಾಡಿ, ತನಗೂ ಮುತ್ತುಗಳು ಬೇಕೆಂದು ಪರಿತಪಿಸುತ್ತಾಳೆ. ತನ್ನುದರವನ್ನೇ ಹಾಸಿಗೆಯಾಗಿಸಿ ಮಲಗಿಸಿ ಜೋಗುಳ ಹಾಡುತ್ತಾಳೆ. ಹೀಗೆ ಅಪಾರ ಕಾಳಜಿಯಿಂದ ತನ್ನ ಸೇವೆ ಮಾಡುತ್ತಿರುವ ತಾಯಿಗೆ ಪ್ರಸನ್ನತೆಯನ್ನು ತೋರಬೇಕೆಂದು ಪರಮೇಶ್ವರ ಬಯಸುತ್ತಾನೆ.

ಅವಳ ಮುಗ್ಧಭಕ್ತಿಗೆ ಮೆಚ್ಚುಗೆ ಸೂಚಿಸಿ ಇವಳನ್ನು ಜಗತ್ತಿಗೆ ಪರಿಚಯಿಸಬೇಕೆಂದು ಬಯಸಿ ತೀವ್ರ ರೋಗ ಬಂದವನಂತೆ ನಟಿಸುತ್ತಾನೆ. ಮೊಲೆ ಹಾಲನುಣ್ಣದೆ, ತುಟಿಯನಗಲಿಸದೆ, ಬೆಣ್ಣೆಯನುಣ್ಣದೆ, ಬಾಯ್ತೆರೆಯದೇ ಇರುವುದನ್ನು ಕಂಡ ಬೆಜ್ಜಮಹಾದೇವಿ ತನ್ನ ಸುತನಿಗೆ ಏನಾಗಿದಿಯೋ ಎಂದು ಕಳವಳಪಡುತ್ತಾ ಅವಳು ಪ್ರಲಾಪಿಸುವುದು ಹೀಗೆ,

"... ನಾಯನ್ನ
ನಾಕುನ್ನ, ನಾಪಟ್ಟಿ, ನಾಚಿನ್ನವಡುಗ
ನಾಕುಜ್ಜ ಚನ್ನೇಲರಾ ಕುಡ್ವವೈತಿ?
ನೀ ಚೆಮಟಯುಂ ಜೂಚಿ ನೆತ್ತರು ನವುದು
ನೊಚೆಲ್ಲ ಯೆಟು ಸೂಡನೋಪುದುನನ್ನ
ತಲ್ಲಿಂಗದನ್ನ ಯಿಂತಟಿ ಕೋರ್ತುನನ್ನ
ಯೆಲ್ಲೆಡ ನೊರುಲ ನೇ ನೆಉಂಗಂಗದನ್ನ
ಕಲಿಗಿತಿ ಲೇಕ ಯೆಕ್ಕಂಡವು ಗದನ್ನ
ತಲರಕ ಯೇ ನೆಟ್ಲು ದರಿಯಿಂತು ನನ್ನ"

(ಗೂ.ವೆಂ.ಸು.(ಸಂ), ಬ.ಪು., ತೃ.ಆ., ಸಾಲು-೬೩೮-೬೪೬)

(ನನ್ನಯ್ಯಾ, ನನ್ನಪ್ಪ, ಚಿನ್ನಣ್ಣ, ಪುಟಾಣಿ ಏಕೆ ಹಾಲನ್ನು ಕುಡಿಯುತ್ತಿಲ್ಲ. ನೀನು ಬೆವರುತ್ತಿರುವುದು ನೆತ್ತರಂತೆ ಕಾಣುತ್ತಿಹುದು. ಅಯ್ಯೋಯ್ಯೋ ನಾನು ಹೇಗೆ ನೋಡಲಿ ನಿನ್ನ. ನಾನು ತಾಯಿಯಲ್ಲವೆ. ನಿನ್ನಲ್ಲಿ ಕೋರಿಕೆ ಬೇರೆ ದಾರಿಯನ್ನು ನಾನು ಬಲ್ಲವಳಲ್ಲ. ನೀನಿಲ್ಲದೆ ಇರಲಾರೆನು. ಏಕಾಂಗಿಯಾಗಿರುವ ನಾನು ಈ ಚಿಂತೆಯನ್ನು ಹೇಗೆ ಭರಿಸಲಣ್ಣಾ)

ಎನ್ನುತ್ತಾ ಹೇಳು ಮಗನೇ ನಿನಗೆ ಅಜೀರ್ಣವೇ, ಕೋವೆಯೋ(ಕಿರುಕುಳ ಬೇನೆ), ಬಾಯಲ್ಲಿ ಮುಳ್ಳು ಸಿಕ್ಕಿದಿಯೋ, ಅಯ್ಯೋ ನನಗೆ ಔಷಧಿಗಳ ಅರಿವಿಲ್ಲವೇ ಎಂದು ಹಲುಬುತ್ತಾ, ಆಕ್ರಂಧಿಸುತ್ತಾ, ಉರುಳಾಡುತ್ತಾ ತನ್ನ ಮೇಲ್ಸೆರಗಿನಿಂದ ಮುಚ್ಚುತ್ತಾ ತೆಗೆಯುತ್ತಾ ಅರಚುತ್ತಾಳೆ. ಮಗನ ನಿಶ್ಚಲ ಸ್ಥಿತಿಯನ್ನು ಕಂಡು, ಹಸಿವಾಗಿ ಹೊಟ್ಟೆ ತುಂಬದಿದ್ದಾಗ ನಂಬಿಯ ಮಾತಿನಂತೆ ಅವನ ಎಡೆಯೊಳು ಉಣಲಿಲ್ಲವೆ? ಪಿಟ್ಟವ್ವೆಯ ಮನೆಯಲ್ಲಿ ಹಿಟ್ಟನು ಉಣಲಿಲ್ಲವೆ? ಕರಿಕಾಲವ್ವೆ ನೀಡಿದ ಮಾವಿನ ಹಣ್ಣುಗಳನ್ನು ಉಣಲಿಲ್ಲವೆ? ಮಾದಾರ ಚೆನ್ನಯ್ಯನ ಮನೆಯಲ್ಲಿ ಹುಳಿಯಂಬಳಕವನ್ನು ಉಣಲಿಲ್ಲವೆ? ಸಿರಿಯಾಳನ ಮಗನ ಮಾಂಸವನ್ನು ಉಣಲಿಲ್ಲವೇ? ಇಷ್ಟೆಲ್ಲಾ ಜನರ ಮನೆಗಳಲ್ಲಿ ಉಂಡು ಬಂದಿರುವೆ. ನಾನೇನು ತಪ್ಪು ಮಾಡಿರುವೆ ಹೇಳು? ಎನ್ನುತ್ತಾಳೆ. ಇನ್ನು ಮುಂದೆ ಸಮಯಕ್ಕೆ ಸರಿಯಾಗಿ ಹಾಲು, ಬೆಣ್ಣೆಯನ್ನು ಒಪ್ಪಿಸುವೆ. ಎತ್ತಿದ ಕೈಯಿಗಳಿಂದ ಅರೆಕ್ಷಣವು ನಿನ್ನನ್ನು ಕೆಳಗಿಳಿಸದೆ ಪಾಲಿಸುವೆನು. ನನ್ನಂತ ತಾಯಿಯಿರುವರೇ ಈ ಮೂರು ಲೋಕದಲ್ಲಿ ಎಂಬಂತೆ ನಿನ್ನನ್ನು ಕಾಪಾಡುತ್ತೇನೆ ಎಂದು ಹೇಳಿದರೂ ಪ್ರಯೋಜನವಾಗದಿದ್ದಾಗ, ನಿನ್ನೊಂದಿಗೆ ಹೆಚ್ಚು ಮಾತೇನು, ನಿನ್ನಂತ ಅವಿವೇಕಿಗಳಿಗೇನು ಹೇಳುವುದು.

ನೋಡಲಾರೆನು ನೀ ಪಡುವ ಸಂಕಟ ಎನ್ನುತ್ತಾ, ಮಗನೇ ನಿನಗಾಗಿ ನಾನು ಪ್ರಾಣವನ್ನು ಬಿಡುವೆನೆಂದು ತಲೆಯನ್ನು ಕತ್ತರಿಸಿಕೊಳ್ಳಲು ಅನುವಾದಾಗ ಶಿವನು ಪ್ರತ್ಯಕ್ಷನಾಗುತ್ತಾನೆ. ನಿನ್ನ ಈ ಮುಗ್ಧಭಕ್ತಿಗೆ, ಸೇವೆಗೆ ಮೆಚ್ಚಿದೆ ತಾಯಿ ನಿನಗೇನು ವರಬೇಕು ಕೇಳು ಎಂದಾಗ,

"ತನಯ ನೀನೀವಭಿಮತಂಗಳು ಸಾಕು ಪಿರಿದೆನೆಗೆ
ಅನಘ ನೀವು ನಿರೋಗಿಯಾಗಿ, ಸು
ಮನದ ಸುಖನಿಧಿಯಗಿ ಶಾಶ್ವತ
ತನುಶುಭಸ್ಥಿತನಾಗಿರನುದಿನವನ್ಯಥವನೊಲ್ಲೆ"

(ಎಸ್. ವಿದ್ಯಾಶಂಕರ(ಸಂ), ಬ.ಪು.ಸಂ.೧೪, ಪ.೩೪)

"ಅನಘ ನೀವು ನಿರೋಗಿಯಾಗಿ ಸುಖವಾಗಿದ್ದರೆ ಅದೇ ನನಗೆ ಶಾಶ್ವತ ಸುಖನಿಧಿ" ಎಂಬ ಬೆಜ್ಜಮಹಾದೇವಿ ಮಾತು ಅವಳ ಮುಗ್ಧತೆಯ ಮತ್ತೊಂದು ಮುಖವನ್ನು ಪರಿಚಯಿಸುತ್ತದೆ.

"ಹೆತ್ತ ತಾಯಿಗಿಂತ ಎತ್ತಿ ಸಾಕಿದ ತಾಯಿಯ ಮೋಹ ದೊಡ್ಡದು". ನಿನ್ನನ್ನು ಕಣ್ಣಾರೆ ನೋಡುತ್ತಾ ಚಿತ್ತದಲ್ಲಿ ನಿನ್ನ ನೆನಪನ್ನು ಸದಾ ಮೂಡಿಸುತ್ತಾ ಇರುವುದೇ ನನಗೆ ನೀವು ಕೊಡುವ ವರ. ಮತ್ತು ಭಾಗ್ಯ. ಎಂಬ ಮಹಾದೇವಿಯ ಮಾತಿಗೆ ಪರಮೇಶ್ವರನು ಮುಗುಳುನಗುತ್ತಾ, ಅವಳನ್ನು ಬಿಗಿಯಾಗಿ ಅಪ್ಪಿಕೊಂಡು 'ನೀನು ನನಗೆ ಮಾತ್ರ ತಾಯಿಯಲ್ಲ ಮೂರು ಲೋಕಗಳಿಗೂ ತಾಯಿ. ನಿಮ್ಮಂತ ತಾಯಿಯಿರುವಾಗ ನನಗಾವ ರೋಗಗಲು ಎಡೆತಾಕುವುದಿಲ್ಲ' ಎಂದು ಹೇಳುವನು.

ಹೀಗೆ ಮಾತೃಪ್ರೇಮದಿಂದ ಶಿವನನ್ನು ಮೆಚ್ಚಿಸಿದ ಬೆಜ್ಜಮಹಾದೇವಿ 'ಅಮ್ಮವ್ವೆ'ಯಾಗಿ ಪ್ರಸಿದ್ಧಿ ಪಡೆಯುತ್ತಾಳೆ. ಇವಳ ಕಥೆಯ ಮೂಲಕ ಕವಿಗಳು ಮಾತೃ ಪ್ರೇಮದ ಸ್ವರೂಪವನ್ನು ತಿಳಿಸುತ್ತಾ, ತನ್ನ ಕಂದನಿಗಾಗಿ ತಾಯಿ ಹೃದಯ ಪರಿತಪಿಸುವ ಸೂಕ್ಷ್ಮ ಸಂವೇದನೆಗಳನ್ನು ಸೊಗಸಾಗಿ ಚಿತ್ರಿಸಿದ್ದಾರೆ. ತನ್ನ ಕಂದನಿಗೆ ಕಷ್ಟಗಳು ಬಂದಾಗ ಅವುಗಳನ್ನು ಎದುರಿಸುವ ತಾಯಿಯ ಮನೋಸಾಮರ್ಥ್ಯ, ಮತ್ತು ಕಷ್ಟದ ಸಂದರ್ಭಗಳಲ್ಲಿ ಪರಿಹಾರಗಳನ್ನು ಕಂಡುಕೊಳ್ಳಲು ಅವಳು ಪಡುವ ಪಡಿಪಾಟಲುಗಳು ಹೇಗಿರುತ್ತವೆ ಎಂಬುದನ್ನು ಇಬ್ಬರೂ ಕವಿಗಳು ಓದುಗರ ಮನಸ್ಸಿಗೆ ನಾಟುವಂತೆ ಚಿತ್ರಿಸಿರುವ ಬಗೆ ಪ್ರಶಂಸನೀಯವಾದುದು. "ಹೆತ್ತ ತಾಯಿಗಿಂತ ಎತ್ತಿ ಸಾಕಿದ ತಾಯಿ ಪ್ರೀತಿ ಹಿರಿದು" ಎಂಬಂತಹ ಮಾತುಗಳನ್ನು ಹೇಳಿದ ಕವಿಗಳು ನಿಜವಾಗಿಯೂ ಮಾತೃ ಹೃದಯದವರೆಂಬುನ್ನು ತೋರಿಸುತ್ತದೆ. ಬೆಜ್ಜಮಹಾದೇವಿಯಂತಹ ಮುಗ್ಧ ಮಾತೃ ಹೃದಯದವರು ಇಂದು ಇದ್ದಾರೆಯೋ ಎಂಬ ಪ್ರಶ್ನೆ ಮೂಡುವಂತೆ ಅವಳ ಕಥೆಯ ಮೂಲಕ ಕವಿಗಳು ಮಾಡಿರುವ ರೀತಿ ಅನನ್ಯವಾದುದು.

**ದೀಪದ ಕಲಿಯಾರ :**

ಚೋಳದೇಶದಲ್ಲಿ ಪ್ರಖ್ಯಾತಿ ಹೊಂದಿದ ಕಾಂಚೀಪುರ ಪಟ್ಟಣದಲ್ಲಿ ಶಿವಭಕ್ತನೂ, ಧರ್ಮಶೀಲನೂ ಆದ ದೀಪದ ಕಲಿಯಾರ ಎಂಬ ಶರಣನು ವಾಸಿಸುತ್ತಿದ್ದನು. ಇವನು ಒಮ್ಮೆ ಪರವೂರಿಗೆ ಹೋಗುತ್ತಿರುವಾಗ

ಅಡವಿಯ ದಾರಿಯಲ್ಲಿ ಶಿವಾಲಯವೊಂದು ಕಾಣಿಸಿತು. ಆ ಶಿವಾಲಯವು ಹಾಳುಬಿದ್ದುದ್ದನ್ನು ಕಂಡು ಅತೀವವಾಗಿ ದುಃಖಪಡುತ್ತಾನೆ. ಈ ಹಾಳು ಶಿವಾಲಯದಲ್ಲಿ ಎನ್ನ ದೇವರು ಹೇಗೆ ವಾಸಿಸುತ್ತಿದ್ದಾನೋ ಎಂದು ಚಿಂತಿಸುವ ಅವನ ಮುಗ್ಧ ಪ್ರೀತಿಯನ್ನು ಕನ್ನಡ ಮತ್ತು ತೆಲುಗು ಬಸವ ಪುರಾಣಗಳಲ್ಲಿ ಅತ್ಯಂತ ಮನೋಜ್ಞವಾಗಿ ಅವನ ಮುಗ್ಧಭಕ್ತಿಯ ಸ್ವರೂಪವನ್ನು ಚಿತ್ರಿಸಿದ್ದಾರೆ. ಎರಡೂ ಪುರಾಣಗಳ ಕಥಾಂಶದಲ್ಲಿ ಹೆಚ್ಚು ವ್ಯತ್ಯಾಸವಿಲ್ಲ. ನಿರೂಪಣೆಯ ವಿಚಾರದಲ್ಲಿ ಭೀಮಕವಿ ಕಲಿಯಾರನ ಶಿವನ ಸೇವೆಯನ್ನು ಅತ್ಯಂತ ಉತ್ಸುಕನಾಗಿ ವರ್ಣಿಸಿರುವುದು ಕಂಡುಬರುತ್ತದೆ. ಶಿವನು ಅನಾಥನಾಗಿ ಬಿದ್ದಿರುವುದನ್ನು ಕಂಡ ಕಲಿಯಾರನ ಮನಸ್ಸು ವಿಚಲಿತವಾಗುವ ಪರಿ, ಅವನು ತೋರ್ಪಡಿಸುವ ಮನೋವೇದನೆ ಕಾರಡವಿಯಲ್ಲಿ ಏಕಾಂಗಿಯಾಗಿರುವ ಶಿವನನ್ನು ಕಂಡು ಪರಿತಪಿಸುವ ಮತ್ತು ಅವನ ಮನೋವೈಶಾಲ್ಯತೆಯನ್ನು ಪಾಲ್ಕುರಿಕೆ ಸೋಮನಾಥ ಹೇಳುವುದು ಹೀಗೆ,

"ಇಂತಹ ಕಾಡಿನಲ್ಲಿ ಈಶ್ವರು ಹೇಗಿದ್ದರಬಹುದು. ಗುಡಿ ಬಾಗಿಲುಗಳು, ಆಧಾರ ಮಂಟಪ, ಕೋಟೆಗಳು ಬಿದ್ದು ಹಾಳಾಗಿವೆ. ಶಿವನ ದೇಹದಲ್ಲಿ ಅರ್ಧನಾರಿಶ್ವರಿಯಾಗಿರುವ ಪಾರ್ವತಿಯು ಕಾಣದೆ ಶಿವನಲ್ಲಿ ಅಡಗಿದಳೇನೋ ಎಂಬಂತಿದೆ. ಶಿವನಿಗೆ ಎದುರಾಗಿ ಕುಳಿತಿರುವ ಬಸವನು ಮೇಲೆ ಗುಡಿಯ ಮೇಲ್ಛಾವಣೆಯ ಹುಲ್ಲು ಕೆಡವಿಕೊಂಡು ನರಳುತ್ತಿರುವಂತಿದೆ" (ತೃ.ಆ.ಸಾ–೯೭೨–೯೮೦) ಎಂದು ಮುಂತಾಗಿ ಕಲಿಯಾರನ ಮುಗ್ಧತ್ವವನ್ನು ಅನಾವರಣಗೊಳಿಸಿದ್ದಾರೆ. ಭೀಮ ಕವಿಯು ತನ್ನ ಪುರಾಣದಲ್ಲಿ ಈ ಸಂದರ್ಭವನ್ನು ಅದೇ ಮಾತುಗಳಿಂದ ಹೇಳಿದ್ದಾನೆ. (ಸಂ–೧೫–ಪು–೪,೫,,೬) ಮುಂದುವರೆದು ಎಷ್ಟೋ ದಿನಗಳಿಂದ ಇಲ್ಲಿ ಪೂಜೆಯಾಗಿಲ್ಲ. ಇಷ್ಟು ಆಲಸ್ಯದಿಂದ ಕೂಡಿರುವ ಈ ಸನ್ನಿಧಿಯಲ್ಲಿ ಶಿವನು ಹೇಗೆ ಸಂತೋಷದಿಂದಿರುವನೋ ಎಂದು ವ್ಯಥೆ ಪಡುತ್ತಾನೆ. ಶಿವನ ಮೇಲಿನ ಅತಿಯಾದ ವ್ಯಾಮೋಹ, ಪ್ರೀತಿ, ಭಕ್ತಿ, ಅವನ ಮನಸ್ಸನ್ನು ಅಲ್ಲಿನ ಸನ್ನಿವೇಶವು ಕಲಕುತ್ತದೆ. ಏಕಾಂಗಿಯಾಗಿ ಈ ಹಾಳು ಮಂಟಪದಲ್ಲಿರುವ ಎನ್ನ ಒಡೆಯನ ಈ ದುಃಸ್ಥಿತಿಯನು ಕಂಡು ಮರುಕ ಪಡುವುದರಲ್ಲಿ ಲಾಭವಿಲ್ಲ. ಹಾಗಾಗಿ ಈ ಮಂಟಪವನ್ನು ಹೊಸದಾಗಿ ನಿರ್ಮಿಸಿ, ನನ್ನ ದೇವರನ್ನು ಸುರಕ್ಷಿತವಾಗಿಡಬೇಕೆಂದು ನಿಶ್ಚಯಿಸುತ್ತಾನೆ. ತನ್ನಲ್ಲಿರುವ ಸಂಪತ್ತೆಲ್ಲವನ್ನು ವ್ಯಯಿಸಿ ಸುಂದರವಾದ ದೇವಾಲಯವನ್ನು ನಿರ್ಮಿಸುತ್ತಾನೆ. ಸುತ್ತಲೂ ಕೋಟೆಯನ್ನು ಕಟ್ಟಿಸಿ, ಆ ಕೋಟೆಯ ಮೂಲೆಗಳಲ್ಲಿ ಕೊಡೆಗಳನ್ನು ನಿರ್ಮಿಸುತ್ತಾನೆ. ಆಳವಾದ ಬಾವಿಗಳನ್ನು ತೋಡಿಸಿ ದವಸ–ಧಾನ್ಯಗಳನ್ನು ಸಂಗ್ರಹಿಸುತ್ತಾನೆ. ಕೋಟೆಯ ಆಯಕಟ್ಟಿನ ಸ್ಥಳಗಳಲ್ಲಿ ಸರದಿಯಂತೆ ದೀವಟಿಗಳನ್ನು ಹೊತ್ತಿಸಿಕೊಂಡು ಕಾವಲು ಕಾಯುವ ಪಡೆಯನ್ನು ನೇಮಿಸುತ್ತಾನೆ. ಗುಡಿಗೆ ಪೂಜಾರಿಗಳನ್ನು, ಕಲ್ಲು ಕುಟಿಗರನ್ನು, ಬಡಿಗಿಗಳನ್ನು, ದ್ವಾರಪಾಲಕರನ್ನು, ತಳವಾರನನ್ನು ನೇಮಿಸುತ್ತಾನೆ. ಹಗಲು–ರಾತ್ರಿಗಳಲ್ಲಿ ಪಂಚವಾದ್ಯಗಳು ನಿರಂತರವಾಗಿ ಮೊಳಗುವಂತೆ ಆದೇಶಿಸಿ ಸಕಲ ವೈಭೋಗಗಳು ಅಲ್ಲಿ ಶಿವನಿಗೆ ದೊರೆಯುವಂತೆ ಮಾಡುತ್ತಾನೆ. ಹೀಗೆ ಹಲವು ಕಾಲ ನಡೆಯುತ್ತಿರಲು ಕಲಿಯಾರನ ಸಂಪತ್ತೆಲ್ಲವು ಕಡಿಮೆಯಾಗುತ್ತಾ ಬಂದಿತು. ದೀವಟಿಗಳನ್ನು ಹೊತ್ತಿಸಲು ಎಣ್ಣೆಯಿಲ್ಲದುದರಿಂದ ಕಟ್ಟಿಗೆಗಳಿಗೆ ಬೆಂಕಿ ಹೊತ್ತಿಸಿ ಅದರ ಬೆಳಕಲ್ಲಿ

ಕಾವಲು ಕಾಯುತ್ತಾರೆ. ಇಷ್ಟರಲ್ಲಿ ಅಲ್ಲಿ ಕೆಲಸಕ್ಕೆ ಸೇರಿದ್ದ ಕಾವಲು ಪಡೆ ಮುಂತಾದವರಿಗೆ ಸಂಬಳ ನೀಡಲು ಹಣವಿಲ್ಲದ್ದರಿಂದ ಅವರು ಕೆಲಸ ಬಿಟ್ಟು ಹೋಗುತ್ತಾರೆ. ಕಲಿಯಾರ ಮಾತ್ರ ಕೊಂಚವೂ ಚಿಂತಿಸದೆ ತನ್ನ ಸೇವೆಯನ್ನು ಮುಂದುವರಿಸುತ್ತಾನೆ. ಕಟ್ಟಿಗೆಗಳು ಮುಗಿಯಲು, ಹುಲ್ಲನ್ನು ನೂಲಿನಂತೆ ಮಾಡಿ ಕೆಲದಿನಗಳು ದೀವಟಿಗೆಗಳನ್ನು ಬೆಳಗಿಸುತ್ತಾನೆ. ಹೊತ್ತಿಸುತ್ತಾನೆ. ಅದೂ ಮುಗಿದು ಹೋಗಲು ತಾನು ಉಟ್ಟ ಬಟ್ಟೆಯನ್ನು ಸುತ್ತಿ ಅದಕ್ಕೆ ಬೆಂಕಿಹಚ್ಚಿ ಬೆಳಕು ಮಾಡಿಕೊಳ್ಳುತ್ತಾನೆ. ಕಲಿಯಾರನ ಈ ನಿಸ್ವಾರ್ಥ ಸೇವೆಯು ಮುಂದುವರೆದು ತನ್ನಲ್ಲಿರುವ ಎಲ್ಲಾ ವಸ್ತುಗಳನ್ನು ಕಳೆದುಕೊಂಡರೂ ಶಿವನ ಮೇಲಿರುವ ಪ್ರೀತಿ, ವ್ಯಾಮೋಹ ಕಡಿಮೆಯಾಗುವುದಿಲ್ಲ. ರಾತ್ರಿಯಲ್ಲಿ ಕತ್ತಲಲ್ಲಿದ್ದರೆ ಎಲ್ಲಿ ಕಳ್ಳರು ಬಂದು ತನ್ನ ಸ್ವಾಮಿಯನ್ನು ಕದ್ದೊಯ್ಯುವರೋ, ಈ ಗುಡಿ-ಗೋಪುರ, ಕೋಟೆ-ಕೊತ್ತಲಗಳನ್ನು ಎಲ್ಲಿ ನಾಶ ಮಾಡುವರೋ ಎಂಬ ಚಿಂತೆ ಅವನದು. ತನ್ನ ಸರ್ವಸಂಪತ್ತನ್ನು ಕಳೆದುಕೊಂಡರೂ ಅದರ ಪರಿವಿಲ್ಲದೆ ಶಿವನ ಸಂತೋಷವೇ ತನ್ನ ಸಂತೋಷವೆಂದು ಬಗೆದು ಅವನ ಸೇವೆಯಲ್ಲಿ ನಿರತನಾಗುತ್ತಾನೆ ಕಲಿಯಾರ. ಕೊನೆಗೆ ದೀವಟಿಗೆಗಳನ್ನು ಹೊತ್ತಿಸಲು ಬೇರೇನೂ ಸಿಗದಿದ್ದಾಗ ಅವನು ತೆಗೆದುಕೊಂಡ ನಿರ್ಧಾರ ಎಂಥವರನ್ನು ಮೂಕವಿಸ್ಮಿತರನ್ನಾಗಿ, ಮಾಡುತ್ತದೆ. ಈ ಸನ್ನಿವೇಶವನ್ನು ಇಬ್ಬರೂ ಕವಿಗಳು ವೀರರಸ ಉಕ್ಕುವಂತೆ ಚಿತ್ರಣ ಮಾಡಿರುವುದು ಓದುಗರನ್ನು ಮಂತ್ರಮುಗ್ಧರನ್ನಾಗಿಸುತ್ತದೆ. ಕಲಿಯಾರನಿಗೆ ಶಿವನ ಮೇಲಿರುವ ಅಭಿಮಾನ ಅವನನ್ನು ಘೋರ ದುಃಸ್ಸಾಹಾಸಕ್ಕೆ ಕೈಹಾಕುವಂತೆ ಮಾಡಿಬಿಡುತ್ತದೆ. ಕತ್ತಲಾವರಿಸುತ್ತಿದ್ದಂತೆ ಅವನ ಮನಸ್ಸು ದುಗುಡಗೊಂಡು ಮುಂದೇನು ಮಾಡುವುದು ಬೆಂಕಿಯನ್ನು ಎಲ್ಲಿ, ಹೇಗೆ ಹೊತ್ತಿಸಲಿ ಎಂದು ಚಿಂತಿಸುತ್ತಾ

"ಅಹಿತರಜೆದಡತಿ ಪ್ರಮಾದಂ
ಬಹುದಲಾ ಎಂದಾತ್ಮದೊಳು ಸಂ
ದೆಹವುಳಿದ ತಲೆಗೂದಲಲಿ ಜೆಡೆಯಂ ಹೆಣೆದು ಸೊಡರ
ವಹಿಲದಿಂ ಪೊತ್ತಿಸಿ ಪಿಡಿದು ಗಹ
ಗಹಿಸುತಂ ಪೊತ್ತೀಸಜಿಲಿ ಬೆಳ
ಗಹುದೆನುತ್ತಾಳ್ವರಿಯೊಳೆಂದಿನ ಹಾಂಗೆ ಬಳಸುತಿರೆ"

(ಎಸ್. ವಿದ್ಯಾಶಂಕರ(ಸಂ), ಬ.ಪು.ಸಂ.೧೫, ಪ.೨೪)

ಕಲಿಯಾರನ ಭಕ್ತಿಯ ಪರಕಾಷ್ಠೆ ಎಂತಹದು ಎಂದರೆ ಬೆಳಕಿಗಾಗಿ ತನ್ನ ತಲೆಯ ಕೂದಲನ್ನೇ ಜಡೆಯಾಗಿ ಮಾಡಿ ಅದಕ್ಕೆ ಬೆಂಕಿ ಹೊತ್ತಿಸಿ ಆ ಬೆಳಕಲ್ಲಿ ತನ್ನ ಒಡೆಯನ ಸನ್ನಿಧಾನವನ್ನು ಕಾಯಲು ನಿರತನಾಗುತ್ತಾನೆ. ತನ್ನ ಪ್ರಾಣವನ್ನು ಲೆಕ್ಕಿಸದೇ ಇಂಥಹ ಸಹಾಸಕ್ಕೆ ಕೈಹಾಕಿದ ಕಲಿಯಾರನ ದೃಢ ಮತ್ತು ನಿಶ್ಚಲ ಭಕ್ತಿಗೆ ಅವನ ಮನೋ ಇಚ್ಛೆಗೆ ಓದುಗರ ಮನಸ್ಸು ಮೆಚ್ಚದೇ ಇರದು. ತಲೆಯಲ್ಲಿ ಹೊತ್ತಿಕೊಂಡ ಬೆಂಕಿ ಕೂದಲೆಲ್ಲ ಸುಟ್ಟು ಹೋಗುತ್ತಿರುವಾಗ ಗಹಗಹಿಸಿ ನಗುತ್ತಾ ಬೆಳಗುತ್ತಿರುತ್ತಾನೆ. ಸುಡುತ್ತಿರುವ ಬೆಂಕಿ ತಲೆಯನ್ನು ಸುತ್ತಿ ಆವರಿಸುತ್ತಿರುವುದನ್ನು ಗಮನಿಸಿದ ಲೋಕ ಜನಕನಾದ

ಪರಮೇಶ್ವರನು ಪ್ರತ್ಯಕ್ಷನಾಗಿ ಬಂದು ಸುತ್ತಿರುವ ತಲೆಯ ಕೆಂಜೆಡೆಯನ್ನು ಶರಧಿಯೊಳಗದ್ದಿ ಕಲಿಯಾರನನ್ನು ಸಂತೈಸುತ್ತಾ ಅವನ ನಿಶ್ಚಲ, ನಿರ್ಮಲವಾದ ಮುಗ್ಧ ಭಕ್ತಿಗೆ ಮೆಚ್ಚುಗೆ ಸೂಚಿಸುತ್ತಾನೆ. ಬಳಿಕ ನಿನಗೇನು ವರಬೇಕು ಕೇಳು, ಈ ನಿನ್ನ ಮುಗ್ಧ ಪ್ರೀತಿಗಾಗಿ ನನ್ನ ಮೇಲಿಟ್ಟಿರುವ ನಿನ್ನ ನಂಬಿಕೆಗಾಗಿ ನೀ ಕೇಳಿದ ವರವನ್ನು ನೀಡುತ್ತೇನೆಂದು ಹೇಳುತ್ತಾನೆ. ನಿಃಸ್ವಾರ್ಥ ಸೇವೆಯನ್ನು ನೆಚ್ಚಿಕೊಂಡು ಶಿವನ ಸೇವೆಯೇ ನನ್ನ ಪರಮಧರ್ಮ ಎಂದು ನಂಬಿಕೊಂಡು ಜೀವಿಸುತ್ತಿದ್ದ ಕಲಿಯಾರ ತನ್ನ ಇಷ್ಟದ ದೇವರು ಬಂದು ನಿನಗಿಷ್ಟವಾದ ವರಕೇಳು ಎಂದಾಗ, ಪರಮೇಶ್ವರನಿಗೆ ನಮಸ್ಕರಿಸಿ ಸಾಷ್ಟಾಂಗವೆರಗಿ ಸ್ವಾಮಿ ನೀನು ಸಾವಿರ ವರಗಳನ್ನು ಕೊಟ್ಟರೂ ನನಗೆ ಮೆಚ್ಚುಗೆಯಾಗುವುದಿಲ್ಲ. ನನ್ನ ಕೋರಿಕೆಯಿಷ್ಟೇ ಲೋಕ ರಕ್ಷಕನಾದ ನೀನು ಈ ಕಾಡಿನಲ್ಲಿರುವುದು ಉಚಿತವಲ್ಲ, ಏಕಾಂಗಿಯಾಗಿ ಈ ದುರ್ಗಮವಾದ ಕಾಡಿನಲ್ಲಿರುವುದು ಬೇಡ ಎನ್ನುತ್ತಾ

"ಕೇಳಭವ ಕೈಲಾಸದಂತಹ
ಮೇಲುದುರ್ಗಮದೆಮಗಿರಲ್ಕೀ
ಕೀಳುಮನ್ನೆಯರಂತೆ ವನದುರ್ಗದೊಳಗಿರಲೇಕೆ
ಏಳು ನಡೆ ನಡೆ ಎನುತ ಭಕ್ತವಿ
ಲೋಲ ಘನಪುಷ್ಪಕವಿಮಾನಂ ಮುಂದೆ ಬಂದಿರಲು"

(ಎಸ್. ವಿದ್ಯಾಶಂಕರ(ಸಂ), ಬ.ಪು.ಸಂ.೧೫, ಪು.೨೯)

ಕಲ್ಮಶಗಳಿಲ್ಲದ ಮನಸ್ಸಿನ ಈ ಕೋರಿಕೆಯನ್ನು ಮನ್ನಿಸಿದ ಪರಮೇಶ್ವರನು ಕಲಿಯಾರನ ಮುಗ್ಧತೆಗೆ, ಅವನ ಮಾತುಗಳಿಗೆ ಒಪ್ಪಿಗೆ ಕೊಡುತ್ತಾನೆ. ಕಲಿಯಾರನು ತಾನು ಕಟ್ಟಿಸಿದ ದೇವಾಲಯ ಕೋಟೆ-ಕೊತ್ತಲಗಳ ಸಮೇತ ಕೈಲಾಸಕ್ಕೆ ಶಿವನ ಜೊತೆಯಲ್ಲಿ ಹೋಗುತ್ತಾನೆ. ಹೀಗೆ ಕಲಿಯಾರ ದೀಪದ ಕಲಿಯಾರನಾಗಿ ಲೋಕ ಪ್ರಸಿದ್ಧಿ ಪಡೆಯುತ್ತಾನೆ. ಈ ಕಥೆಯ ಮೂಲಕ ಕವಿಗಳು ಪ್ರತಿಫಲಾಪೇಕ್ಷೆಯಿಲ್ಲದೆ ಮಾಡುವ ಸೇವೆಯು ಪರಮೇಶ್ವರನಿಗೆ ಮುಟ್ಟುತ್ತದೆ. ಎಂಬ ಸಂದೇಶವನ್ನು ಸಾರಿರುವುದು ಎರಡು ಪುರಾಣಗಳಲ್ಲಿ ಕಾಣಿಸುತ್ತದೆ.

**೫. ನಕ್ಕೈನೈನಾರು :**

ಚೋಳ ಮಂಡಲದಲ್ಲಿದ್ದ ಪರಮ ಶಿವಭಕ್ತನಾದ ನಕ್ಕೈನೈನಾರನೆಂಬ ಶರಣನು ತನ್ನ ಮಡದಿಯೊಂದಿಗೆ ವಾಸಮಾಡುತ್ತಿದ್ದ. ಒಂದು ದಿನ ಶಿವಲಿಂಗದ ಸುತ್ತಲೂ ಜೇಡರ ಹುಳವೊಂದು ಬಲೆ ಹೆಣೆಯುವುದನ್ನು ಕಂಡ ನಕ್ಕೈನೈನಾರನ ಹೆಂಡತಿ ಅವಸರದಲ್ಲಿ ಆ ಜೇಡರ ಹುಳವನ್ನು ಥೂ...ಥೂ... ಎಂದು ಉಗುಳುತ್ತಾ ಸ್ವಚ್ಛ ಮಾಡುತ್ತಿದ್ದಳು. ಇದನ್ನು ಕಂಡ ಆ ಮುಗ್ಧ ಶರಣನು ತನ್ನ ಹೆಂಡತಿಯ ಈ ಹೀನ ಪ್ರವರ್ತನೆಯನ್ನು ಕಂಡು ಸಿಟ್ಟಿಗೇಳುತ್ತಾ 'ಪಾಪಿಯೇ ಪ್ರಾಣವಲ್ಲಭನ ಮೇಲೆ ಉಗುಳುವರೇ? ನಿನ್ನದು ಇದೆಂತಹ ಭಕ್ತಿ ತೊಲಗು ನೀನು ನಾನೊಲ್ಲೆ' ಎಂದು ಸಿಟ್ಟಿನಿಂದ ಗದರಿಸಿ ಹೆಂಡತಿಯನ್ನು ಮನೆಯಿಂದ ಹೊರಹಾಕುತ್ತಾನೆ. (ತೃ.ಆ., ಸಾಲು-೫೭೫-೫೮೦) ಸಂಜೆ ಲಿಂಗಪೂಜೆ ಮಾಡುವ ಸಮಯಕ್ಕೆ

ನಕ್ಕೈನೈನಾರನ ಹೆಂಡತಿ ಉಗುಳಿದ ಜಾಗಬಿಟ್ಟು ಉಳಿದೆಲ್ಲ ಭಾಗದಲ್ಲಿ ದೊಡ್ಡ ದೊಡ್ಡ ಬೊಕ್ಕೆಗಳಾಗಿರುತ್ತವೆ. ಇದನ್ನು ಕಂಡು ತನ್ನ ತಪ್ಪಿನ ಅರಿವಾಗಿ ಹೆಂಡತಿಯನ್ನು ಹುಡುಕುತ್ತಾ ಹೋಗಿ ಅವಳ ಕಾಲಿಗೆ ಬಿದ್ದು "ನಾನು ಪಾಪಿ ಕೋಪದಿಂದ ನಿನ್ನನ್ನು ನಿಂದಿಸಿ ಮನೆಯಿಂದ ಹೊರಹಾಕಿದೆ. ನೀನು ಲಿಂಗದ ಮೇಲೆ ಉಗುಳಿದ ಜಾಗಬಿಟ್ಟು ಉಳಿದೆಲ್ಲ ಜಾಗದಲ್ಲಿ ಬೊಕ್ಕೆಗಳಾಗಿವೆ. ಇದನ್ನು ವಾಸಿ ಮಾಡಲು ನಿನ್ನಿಂದ ಮಾತ್ರ ಸಾಧ್ಯ. ನಿನ್ನ ನಿಷ್ಕಲ್ಮಶ ಭಕ್ತಿಯನ್ನು ನಾನು ಅವಹೇಳನ ಮಾಡಿರುವೆ. ನನ್ನಿಂದಾದ ತಪ್ಪನ್ನು ಮನ್ನಿಸಿ ಬಂದು ಆ ಬೊಕ್ಕೆಗಳನ್ನು ನಿವಾರಿಸು" ಎಂದು ಬೇಡುತ್ತಾನೆ. ನಕ್ಕೈನೈನಾರನ ಅತಿ ಮುಗ್ಧತನವನ್ನು ಇಲ್ಲಿ ತುಂಬಾ ಸೊಗಸಾಗಿ ಚಿತ್ರಣ ಮಾಡಲಾಗಿದೆ. ನಕ್ಕೈನೈನಾರನ ಹೆಂಡತಿ ಬಂದು ಲಿಂಗದ ಮೇಲಿರುವ ಬೊಕ್ಕೆಗಳನ್ನು ಕಂಡು 'ಅಯ್ಯೋ ನನ್ನ ಗಂಡನಿಂದ ಒದೆ ತಿಂದಿದ್ದರೂ ಚಿಂತೆಯಿರುತ್ತಿರಲಿಲ್ಲ. ಆಗ ನಾನು ಉಗಿಯದಿದ್ದ ತಪ್ಪಿಗಾಗಿ ನನ್ನ ಈ ದೇವರಿಗೆ ಈ ಕಷ್ಟವೊದಗಿತಲ್ಲ ಎಂದುಕೊಳ್ಳುವ ಇವಳ ಮುಗ್ಧತೆ ಗಂಡನ ಮುಗ್ಧತೆಯನ್ನೂ ಮೀರುಸುವಂತದ್ದು. ಇನ್ನು ಇದಕ್ಕೆ ಔಷಧವನ್ನು ನಾನರಿಯೆ. ನನ್ನಿಂದಾದ ತಪ್ಪಿಗೆ ನನ್ನ ಸಾವೇ ಪರಿಹಾರವೆಂದು, ಸಾಯಲು ಅನುವಾದಾಗ ಪರಮೇಶ್ವರನು ಪ್ರಮಥರ ಸಮೇತ ಪ್ರತ್ಯಕ್ಷವಾಗುತ್ತಾನೆ. ಗಂಡ–ಹೆಂಡತಿಯರ ಮುಗ್ಧ ಪ್ರೇಮವನ್ನು, ಭಕ್ತಿಯ ಸಮರ್ಪಣೆಯನ್ನು ಮನಸಾರೆ ಮೆಚ್ಚಿ ನಿಮ್ಮಾಸೆಗಳನ್ನು ಬೇಡಿಕೊಳ್ಳರಿ ಎಂದು ಕೇಳುತ್ತಾನೆ. ಶಿವನಿಂದ ಏನನ್ನೂ ಅಪೇಕ್ಷಿಸದೆ ನಕ್ಕೈನೈನಾರನು

"ಇನ್ನು ಮತ್ತೊಂದಂ ಬಯಸಿದೆಡೆ
ನಿನ್ನ ನಾವೋಲ್ಲದುದಲಾ ಈ
ಬಿನ್ನಣದ ನುಡಿಯಂ ನುಡಿಯದೇ ಚಿತ್ತವಿಪುದೆನ್ನ
ಬಿನ್ನಪವನೊಲಿದಾಗಳುಂ ಭವ
ದುನ್ನತಾಂಘ್ರಿಯುಗಸ್ಮ ರಣಸಂ
ಪನ್ನತೆಯನಿತ್ತುದ್ದರಿಸು ನಮಗಿದುವೆ ಸಾಕೆನಲು"

(ಎಸ್. ವಿದ್ಯಾಶಂಕರ(ಸಂ), ಬ.ಪು.ಸಂ.೧೨, ಪ.೨೯)

"ನಿಮ್ಮಲ್ಲಿ ಬೇರೆ ಏನಾದರೂ ಅಪೇಕ್ಷಿಸಿ ಬೇಡಿದರೆ ನಿಮ್ಮನ್ನು ಬೇಡವೆಂದು ತಿರಸ್ಕರಿಸಿದಂತಲ್ಲವೇ" ಎಂಬ ನಕ್ಕೈನೈನಾರನ ವಿವೇಕ ಬುದ್ಧಿಯ ಮಾತು ಎಷ್ಟು ಸತ್ಯವಲ್ಲವೇ.? "ನಿಮ್ಮಯ ಪಾದಕಮಲಾಂತರಂಗವನ್ನು ಕರುಣಿಸು ನಮಗದೇ ಸಾಕು." ಇಂಥಹ ಮುಗ್ಧಭಕ್ತನ ಬಾಯಲ್ಲಿ ಬಂದ ಈ ಮಾತುಗಳನ್ನು ಕೇಳಿದ ಪರಮೇಶ್ವರನು ಸಕಲ ಭೋಗ, ಸೌಖ್ಯವನ್ನು ಕರುಣಿಸಿ ಹೊರಟು ಹೋಗುತ್ತಾನೆ.

ಹೀಗೆ ನಕ್ಕೈನೈನಾರನ ಕಥೆಯು ಎರಡೂ ಪುರಾಣಗಳಲ್ಲಿಯೂ ಒಂದೇ ರೀತಿಯಾಗಿ ಚಿತ್ರಣಗೊಂಡಿದೆ. ಈ ಕಥೆಯ ಮೂಲಕ ಶಿವಭಕ್ತರಾದವರು ಶಿವನನ್ನು ತಮ್ಮ ಮನಸ್ಸಲ್ಲಿ ತುಂಬಿಕೊಂಡು ಯಾವುದೇ ವಿಧದಲ್ಲಿ ಆರಾಧಿಸಿದರೂ ಶಿವನು ತೃಪ್ತಿಗೊಳ್ಳುತ್ತಾನೆ. ನಿಷ್ಕಲ್ಮಶವಿಲ್ಲದ ಭಕ್ತಿಗೆ ಶಿವನು ಒಲಿದು ಕಾಪಾಡುತ್ತಾನೆ. ಎಂಬುದನ್ನು ತಿಳಿಸಲು ನಕ್ಕೈನೈನಾರನ ಮುಗ್ಧತ್ವದ ಕಥೆಯನ್ನು ಇಲ್ಲಿ ಚಿತ್ರಿಸಲಾಗಿದೆ.

೬. ಕೋಳೂರು ಕೊಡಗೂಸು(ಗೊಡಗೂಚಿ) :

ಈಶ್ವರ ಭಕ್ತಿಯು ಹಸುಗೂಸುಗಳಲ್ಲಿಯೂ ಅಂದಿನ ಕಾಲದಲ್ಲಿ ಹೇಗೆ ಪ್ರಚಲಿತದಲ್ಲಿತ್ತು ಎಂಬುದನ್ನು ತೋರಿಸುವ ಸಲುವಾಗಿ ಕೊಡಗೂಸು ಎಂಬ ಬಾಲಕಿಯ ಕಥೆಯಲ್ಲಿ ಅವಳ ನಿಷ್ಕಲ್ಮಶ ಭಕ್ತಿಯನ್ನು ಇಬ್ಬರೂ ಕವಿಗಳು ವರ್ಣಿಸಿದ್ದಾರೆ.

ಶಿವದೇವನೆಂಬ ಒಬ್ಬ ಶಿವಭಕ್ತ ನಿತ್ಯವೂ ಶಿವನಿಗೆ ಒಂದು ಬಳ್ಳ ಹಾಲು ಅರ್ಪಿಸುವ ವ್ರತವನ್ನು ಮಾಡುತ್ತಿರುತ್ತಾನೆ. ಒಮ್ಮೆ ದೇವಕಾರ್ಯ ನಿಮಿತ್ತ ಪರವೂರಿಗೆ ಹೋಗುವ ಸಲುವಾಗಿ ತನ್ನ ವ್ರತದ ವಿಚಾರವನ್ನು ಕಿರಿಯ ಮಗಳಿಗೆ ಹೇಳುತ್ತಾ 'ನಿತ್ಯವೂ ಶಿವನಿಗೆ ಒಂದು ಬಳ್ಳ ಹಾಲನರ್ಪಿಸಿ ಬಾ ಮಗಳೆ' ಎಂದು ಹೇಳಿ ಹೋಗುತ್ತಾನೆ. ತಂದೆಯ ಮಾತಿನಂತೆ ಕೊಡಗೂಸು ಮುಂಜಾನೆ ಎದ್ದು ಹಾಲನ್ನು ಚೆನ್ನಾಗಿ ಕಾಯಿಸಿ ಬಳ್ಳದಲಿ ತುಂಬಿ ತಂದು ಶಿವಾಲಯದಲ್ಲಿ ಶಿವನ ಮುಂದಿರಿಸಿ 'ಆರೋಗಿಸೈ ಎನ್ನೊಡೆಯನೆ ಕಲ್ಲಿನಾಥಾ' ಎಂದು ಬಿನ್ನೈಸುತ್ತಾಳೆ. ತಾನು ಎದುರಿಗಿದ್ದರೆ ಶಿವನು ಹಾಲು ಕುಡಿಯಲು ಹಿಂಜರಿಯುತ್ತಿದ್ದಾನೆಂದು ಬಗೆದು ಮರೆಯಲ್ಲಿ ನಿಲ್ಲುತ್ತಾಳೆ. ಸ್ವಲ್ಪ ಸಮಯದ ನಂತರ ಬಂದು ನೋಡಿದರೆ ಹಾಲು ಇದ್ದಹಾಗೆ ಇರುವುದನ್ನು ಕಂಡು ಕಳವಳ ಪಡುತ್ತಾಳೆ. ನಾನೇನಾದಾರೂ ತಪ್ಪೆಸಗಿದೆನೇ? ಯಾಕೆ ಎನ್ನ ದೇವರು ಹಾಲನಾರೋಗಿಸುತ್ತಿಲ್ಲ ಎಂದು ದುಃಖಿಸುತ್ತಾಳೆ. ತನ್ನಿಂದಾದ ಪ್ರಮಾದವಾವುದೋ ತಿಳಿಯದ ಅಮಾಯಕ ಹೃದಯದ ಬಾಲೆಯ ಮನಸ್ಸು ಮುಂದಿನಂತೆ ಆಲೋಚಿಸುತ್ತದೆ.

"ಹಾಲು ಕಾಯವೊ ಪರಿಮಳಿಸವೋ
ಹಾಲು ಕಡುಬಿಸಿಯಾದವೋ ಚೆಲು
ಪಾಲಿವಲ್ಲವೊ ಒಡೆದವೋ ಆರೋಗಿಸುವಡಿನ್ನು
ವೇಳೆಯಾಗದೋ ನಿನ್ನ ಮೀಸಲ
ಹಾಲು ಬೀಸರವಾಯಿತೋ ನಾ
ಬಾಲೆಯೆಂದೊಲ್ಲೆಯೊ ತರಲ್ಕಾರಕ್ಕೆ ನೋಡಿದರೋ"

(ಎಸ್. ವಿದ್ಯಾಶಂಕರ(ಸಂ), ಬ.ಮ.ಸಂ.೧೩.ಪ.೮)

ಹೀಗೆ ತಾನು ತಂದ ಹಾಲು ದೋಷದಿಂದ ಕೂಡಿರುವವೋ ಎಂದು ಪರಿತಪಿಸುವ ಅವಳ ಮುಗ್ಧತೆ ಕಾವ್ಯದಲ್ಲಿ ಮನತಟ್ಟುವಂತೆ ವ್ಯಕ್ತವಾಗಿದೆ. ಹಾಲನೇತಕೆ ಕುಡಿಯುತ್ತಿಲ್ಲ ಸ್ವಾಮಿ, ಬಂದುದು ತಡವಾಯಿತೋ, ಹಾಲಿಗೆ ಹೊಗೆ ಹತ್ತಿದೆಯೋ, ಅದಕ್ಕೆ ತುಪ್ಪ ಹಾಕಲಿಲ್ಲವೆಂಬ ಬೇಸರವೋ, ಹಸುವಿನ ಹಾಲಲ್ಲವೆಂದೋ, ಏಕೆ ಹೇಳು ಕಾರಣವಾದರೂ ತಿಳಿಸು. ಹಸಿವಿಲ್ಲವೋ, ಒಂದು ಗುಟುಕಾದರೂ ಕುಡಿದು ನನಗೆ ಕೊಡು ಎಂದು ಪ್ರಶ್ನೆಗಳ ಮೇಲೆ ಪ್ರಶ್ನೆಗಳನ್ನು ಕೇಳುತ್ತಾಳೆ. ಉತ್ತರವಿಲ್ಲದ ಶಿವನ ಮೌನವನ್ನು ಕಂಡು ಶಿವನಿಗೆ ಮತ್ತಷ್ಟು ಆಸೆಗಳ ಅಮಿಷವನ್ನು ಒಡ್ಡುತ್ತಾಳೆ. ಆಗಲಾದರೂ ಕುಡಿಯುವನೇ ಎಂಬ ಆಸೆಯಿಂದ ಗಾರಿಗೆಗಳನ್ನು ತಂದುಕೊಡುವೆ, ಮಡಿಕೆಯಲಿ ತುಂಬಿದ ತುಪ್ಪವನ್ನು

ತರುವೆ, ಎನ್ನ ಮಠದಲ್ಲಿ ಪಾಯಸವುಂಟು ತಂದುಕೊಡಲೇ, ಚಿಗುಳಿ, ಚಕ್ಕುಲಿ, ಮಂಡಗೆ, ಲಡ್ಡು, ವಿವಿಧ ಹಣ್ಣುಗಳನ್ನು ತರುವೆ, ಗೆಜ್ಜೆ, ಪೊನ್ನಂದುಗೆ, ಪವಳ, ಹೊಸ ಮುತ್ತು, ಬೊಂಬೆಗಳನ್ನು ತಂದುಕೊಡುವೆ ಎಂದು ಹೇಳುತ್ತಾಳೆ. ಆದರೂ ಶಿವನ ಕಡೆಯಿಂದ ಉತ್ತರವಿಲ್ಲದ್ದನ್ನು ಕಂಡು

ಪಾಪ ಯೀಶ್ವರುನಕುಂ ಬಲುಮಾರು ಮ್ರೊಕ್ಕುಂ
ಗೋಪಿಂಚು ಭಂಗಿಂಚು, ಗುಪ್ಪಿಂಚು ನಱಚುಂ
ಗಟಕಟ ವಾಪೋವುಂ ಗರಮುಲು ವಿಱಚುಂ
ದಟತಟ ನೆಲತೊಂ ದೊಂಕಿಂಚುಂಗಾಳ್ಳು
ಧಾರುಣಿಂ ಬಡಿ ಬಯಲ್ದನ್ನು ಚು ನೇಡ್ಚುಂ
ಗೋರ ದಿಕ್ಕುನು ಜೂಚು ಮಾರಾರಿಂ ಜೂಚು
ಬುಜ್ಜಗಿಂಚುನು ವೆಡ್ಲು ಬುಡ್ಲುನು ಬೆಟ್ಟು
ನಿರ್ಜೀವಿ ಕ್ರಿಯಂಬಡು ನಿವ್ವೆವಿಂ ಗಂದು

(ಗೂ.ವೆಂ.ಸು.(ಸಂ), ಬ.ಪು., ತೃ.ಆ., ಸಾಲು–೮೭೦–೮೭೮)

(ಬಾಲೆ ಕೊಡಗೂಸು ಈಶ್ವರನಡಿಗಡಿಗೆ ನಮಸ್ಕರಿಸಿ ಗಳಗಳನೆ ಅಳುತ್ತ, ಕೈಗಳನ್ನು ಗುದ್ದಿಕೊಂಡು ನೆಲಕ್ಕೆ ಕಾಲುಗಳನ್ನು ಬಡಿದುಕೊಳ್ಳುತ್ತಾ, ಬಿದ್ದು ಅಳುತ್ತಾ ಹೊರಳಾಡುವಳು. ಒಮ್ಮೆ ಬಟ್ಟಲನ್ನು, ಒಮ್ಮೆ ಶಿವನನ್ನು ನೋಡಿ ಗೋಗರೆಯುವುದು, ಮುದ್ದು ಮಾಡುವುದು ಮಾಡುತ್ತಾ ನಿರ್ಜೀವಿಯಂತಿದ್ದು ನಿಬ್ಬೆರಗಾಗಿರುವಳು)

ನಿರ್ಜೀವಗೊಂಡ ಅವಳ ಮನೋಸ್ಥಿತಿ, ಅವಳು ಬೇಡಿಕೊಳ್ಳುತ್ತಿರುವ ದೀನತೆಯನ್ನು ಕಂಡು ಮನಸ್ಸು ಎಂಥವರಿಗಾದರೂ ಒಂದು ಕ್ಷಣ ಕರಗಿಬಿಡುತ್ತದೆ. ತನ್ನೆಲ್ಲಾ ಪ್ರಯತ್ನಕ್ಕೂ ಉತ್ತರ ಸಿಗದಿದ್ದಾಗ ತನ್ನ ತಂದೆಯು ಖಂಡಿತವಾಗಿಯೂ ನನ್ನನ್ನು ಹೊಡೆಯುತ್ತಾನೆಂದು ಬಗೆದ ಆ ಮುಗ್ಧಬಾಲೆ ತಲೆಯನ್ನು ಗೋಡೆಗೆ ಚಚ್ಚಿಕೊಂಡು ಸಾಯಲು ಸಿದ್ಧವಾಗುತ್ತಾಳೆ. ಕೊಡಗೂಸಿನ ಈ ಅಚಾತುರ್ಯವನ್ನು ಗಮನಿಸಿ ಅವಳ ಭಕ್ತಿಗೆ ಮನಕರಗಿ ಶಿವನು ಪ್ರತ್ಯಕ್ಷವಾಗಿ ಅವಳು ತಂದಿದ್ದ ಬಟ್ಟಲು ಹಾಲನ್ನು ಕುಡಿಯುವನು. ಇಷ್ಟು ತಡವಾಗಿ ಬಂದ ಶಿವನ ಮೇಲಿನ ಕೋಪವನ್ನು ವ್ಯಕ್ತಪಡಿಸುತ್ತಾ

ನಿನ್ನಂತಯೇಂಚಿತಿ ಪಿನ್ನಗಾಂ ಜೇಸಿ
ಮಿನ್ನಕಪೋದು ಮಾಯನ್ನಕುಂ ಜೆಪ್ಪಿ
ಮಱಕದಾಯುನ್ನದಿ ಮಾಟಲಿಂಕೇಲ

(ಗೂ.ವೆಂ.ಸು.(ಸಂ), ಬ.ಪು., ತೃ.ಆ., ಸಾಲು–೮೯೩–೮೯೫)

(ನನ್ನನ್ನು ಕಿರಿಯಯವಳೆಂದು ಇಷ್ಟೆಲ್ಲ ಕಾಡಿಸಿದೆಯಲ್ಲವೇ ನಾನು ಸುಮ್ಮನಿರುವುದಿಲ್ಲ. ನಮ್ಮಣ್ಣನಿಗೆ ಹೇಳುತ್ತೇನೆ. ಆಮೇಲಿದೆ ನಿಮಗೆ ಈಗ ಹೆಚ್ಚು ಮಾತೇಕೆ)

ಎಂದು ಹೇಳುವ ಅವಳ ಮಾತು ಈ ಸಂದರ್ಭಕ್ಕೆ ಹಾಗೂ ಮುಗ್ಧತೆಗೆ ಮತ್ತಷ್ಟು ಸೊಬಗನ್ನು ತಂದುಕೊಡುತ್ತದೆ. ಶಿವನು ಹಾಲನ್ನು ಕುಡಿದ ನಂತರ ಅಂದಿನಿಂದ ಪ್ರತಿದಿನವು ಶಿವನಿಗೆ ಹಾಲನರ್ಪಿಸಿ ತಂದೆಯ ನೇಮವನ್ನು ಚಾಚೂತಪ್ಪದೆ ಪಾಲಿಸುತ್ತಿರುತ್ತಾಳೆ. ಕೆಲದಿನಗಳ ಬಳಿಕ ಊರಿಗೆ ಹೋದ ತಂದೆ ಮನೆಗೆ ಬರುತ್ತಿರುವಾಗ ಕೊಡಗೂಸು ಶಿವಾಲಯದಿಂದ ಹಿಂದಿರುಗಿ ಬರುತ್ತಾಳೆ. ಎಲ್ಲಿಗೆ ಹೋಗಿದ್ದೆ ಎಂದು ಕೇಳಲು, ನೀವೇ ಹೇಳಿದಂತೆ ಶಿವನಿಗೆ ಹಾಲನರ್ಪಿಸಲು ಹೋಗಿದ್ದೆ ಎಂದು ಉತ್ತರಿಸುತ್ತಾಳೆ. ಅನುಮಾನಗೊಂಡ ತಂದೆ, ಶಿವನು ಎಂದಾದರು ಹಾಲನ್ನು ಕುಡಿದಿರುವನೇ ಎನ್ನುತ್ತಾನೆ. ನೀನೆ ಕುಡಿದು ಶಿವನ ಮೇಲೆ ಆರೋಪಿಸುತ್ತಿರುವೆಯಾ ಎಂದು ಗದರಿಸುತ್ತಾನೆ. ಕೊಡಗೂಸು ನಡೆದ ವೃತ್ತಾಂತವನ್ನೆಲ್ಲಾ ಹೇಳಿದರೂ ಒಪ್ಪದ ತಂದೆ, ಬಟ್ಟಲು ಹಾಲುಸಮೇತ ಮಗಳನ್ನು ಕರೆದುಕೊಂಡು ಶಿವಾಲಯಕ್ಕೆ ಬರುತ್ತಾನೆ. ಕೊಡಗೂಸಿನ ಅಮಲ ಭಕ್ತಿಯನ್ನು ಜಗತ್ತಿಗೆ ಬೆಳಗಲು ಶಿವನು ಆಲೋಚಿಸಿ ಅವಳು ಎಷ್ಟೇ ಗೋಗರೆದರೂ ಪ್ರತ್ಯಕ್ಷನಾಗುವುದಿಲ್ಲ. ತಂದೆಯ ಕೋಪ ನೆತ್ತಿಗೇರಿ ಸುಳ್ಳು ಹೇಳಿ ನನ್ನನ್ನು ಮೋಸಗೊಳಿಸುತ್ತೀಯ ನಿನ್ನ ಹೊಟ್ಟೆ ಸೀಳುವೆನೆಂದು ಹಿಡಿಯಲು ಹೋದಾಗ ಕೊಡಗೂಸು ಹೆದರಿ ಹಾ...ಲಿಂಗ... ಹಾ...ಲಿಂಗ... ಎನ್ನುತ್ತಾ ಕೈಯಲ್ಲಿ ಹಾಲಿನ ಬಟ್ಟಲವಿಡಿದು ಲಿಂಗವನ್ನು ಸುತ್ತಿತ್ತಿರುವಾಗ ಪರಮೇಶ್ವರ ಅವಳನ್ನು ಲಿಂಗದಲ್ಲಿ ಒಂದಾಗಿಸಿಕೊಂಡು ಲೀನ ಮಾಡಿಕೊಳ್ಳುತ್ತಾನೆ. ಒಡನೆಯೇ ಶಿವದೇವನು ಕೂದಲು ಹಿಡಿದಿಡಿಲು ಕೂದಲು ಸಿಕ್ಕಿ ದೇಹ ಲಿಂಗದೊಳಗೆ ಸೇರುತ್ತದೆ. ಈಗಲೂ ಆರು ತಿಂಗಳಿಗೊಮ್ಮೆ ಬೆಳೆಯುವ ಕೊಡಗೂಸಿನ ಕೂದಲನ್ನು ಕತ್ತರಿಸುತ್ತಾರೆಂದು ಹೇಳುವ ಮೂಲಕ ಅವಳ ನಿಶ್ಚಲ, ನಿರ್ಮಲ ಮುಗ್ಧಭಕ್ತಿಯ ಸ್ವರೂಪವನ್ನು ವರ್ಣಿಸಲಾಗಿದೆ. ಬಾಲಕಿಯಾದ ಕೊಡಗೂಸಿನ ಎಳೆಯ ಮನಸ್ಸು ಹೊರಜಗತ್ತಿನ ಕಲ್ಮಶಗಳನರಿಯದ ಕೂಸು. ಹಾಗಾಗಿ ಲೌಕಿಕ ಜೀವನದ ಪರಿವೇ ಇಲ್ಲದೆ ಶಿವಾಲಯದಲ್ಲಿ ಅವಳು ಶಿವನಿಗಾಗಿ ಪ್ರಲಾಪಿಸುವ ಚಿತ್ರಣ ಕರುಣಾಜನಕವಾಗಿದೆ.

**೭. ಬೇಡರ (ಉಡಮೂರಿ) ಕಣ್ಣಪ್ಪ :**

ಶ್ರೀ ಕಾಳಹಸ್ತಿಗಿರಿ ಪ್ರದೇಶದಲ್ಲಿ ಎಡುಮೂರಿ ಕಣ್ಣಪ್ಪನೆಂಬ ಶಿವಭಕ್ತನು ವಾಸಿಸಿದ್ದನು. ಒಮ್ಮೆ ಬೇಟೆಯಾಡಲು ಅಡವಿಗೆ ಹೋಗಿ ದಣಿವಾರಿಸಿಕೊಳ್ಳಲು ಒಂದು ಮರದಡಿ ಮಲಗಿರುತ್ತಾನೆ. ಕನಸಿನಲ್ಲಿ ಶಿವನು ತಾಪಸಿ ವೇಶದಿಂದ ಬಂದು ಹಣೆಗೆ ವಿಭೂತಿಯಿಟ್ಟು ಮುಂದೆ ಈ ದಾರಿಯಲ್ಲಿ ಹೋಗುವಾಗ ನಿನಗೆ ಘನಲಿಂಗವೊಂದು ಕಾಣುತ್ತದೆ. ಅದುವೆ ನಿನ್ನ ಪ್ರಾಣಲಿಂಗವೆಂದು ಉಪದೇಶಿಸುತ್ತಾನೆ. ಕನಸಿನಿಂದ ತಿಳಿದೆದ್ದ ಕಣ್ಣಪ್ಪ ಸುತ್ತಲೂ ನೋಡುವಾಗ ಈ ಮೊದಲು ಅಲ್ಲಿರದಿದ್ದ ದಾರಿಯೊಂದು ಕಾಣುತ್ತಿತ್ತು. ಕನಸಿನಲ್ಲಿ ಕಂಡದ್ದನ್ನು ನೆನೆದು ಆ ದಾರಿಯಲ್ಲಿ ಹೋಗಲು ಘನಲಿಂಗ ಮೂರ್ತಿಯೊಂದು ಕಾಣಿಸಿತು. ಅತ್ಯಂತ ಸಂತೋಷಗೊಂಡ ಕಣ್ಣಪ್ಪ ಭಕ್ತಿಯಿಂದ ಕೈಮುಗಿದು ಕನಸಿನಲಿ ಕಂಡದ್ದು ಫಲಸಿದ್ಧಿಯಾಯಿತೆಂದು ಹರ್ಷಗೊಂಡನು. ತಡಮಾಡದೆ ಈ ಲಿಂಗ ಮೂರ್ತಿಯನ್ನು ತನ್ನ ಹಳ್ಳಿಗೆ ಕೊಂಡೊಯ್ದು ಗುಡಿಯ ಕಟ್ಟಿಸಬೇಕು. ಬಿಸಿಲಲ್ಲಿ ನಿಲ್ಲಸಬಾರದೆಂದುಕೊಳ್ಳುತ್ತಾನೆ.

"ಬುದ್ದುಲು ಸೆಪ್ಪಿಯು ಬುಜ್ಜಗಿಂಚಿಯುನು
ದದ್ದಯುಂ ಗೀಡ್ಪಡಂ ದಗ ವೆಡ್ಡು ವೆಟ್ಟಿ
ವಲಸಿನ ವಸ್ತುವು ಲಿಲಂದೆಚ್ಚಿಯಿಚ್ಚಿ
ವಲಪಿಂಚಿ ಕೊನಿಪೋವವಲೆನನಿ ತಲಂಚಿ"

(ಗೂ.ವೆಂ.ಸು.(ಸಂ), ಬ.ಪು., ತೃ.ಆ., ಸಾಲು-೭೫೯-೭೬೨)

(ಬುದ್ಧಿ ಹೇಳಿ ಮನವೊಲಿಸುವೆ ಕೇಳದಿದ್ದರೆ ಮೋಸಮಾಡಿಯಾದರೂ ಬೇಕಾದ ವಸ್ತುಗಳೆಲ್ಲವನ್ನು ಕೊಟ್ಟು ರಮಿಸಿ ಕರೆದೊಯ್ಯಬೇಕೆಂದು ಬಗೆದು)

ಎಂಬ ಕಣ್ಣಪ್ಪನ ಮಾತುಗಳು ಅವನ ಮುಗ್ಧ ಅಮಾಯಕ ಭಕ್ತಿಯನ್ನು ತೋರಿಸುತ್ತವೆ. ಹಾಗೆಯೇ ತ್ರಿಭುವನಕರ್ತನಿಗೆ ಬುದ್ಧಿ ಹೇಳಬೇಕೆಂದುಕೊಳ್ಳುವುದು, ಅವನ ಮನಸ್ಸನ್ನು ಒಲಿಸಲು ಪ್ರಯತ್ನಿಸಬೇಕು ಎಂದುಕೊಳ್ಳುವುದು, ಮೋಸಮಾಡಿಯಾದರೂ ಕರೆದೊಯ್ಯಬೇಕೆನ್ನುವುದು, ಜೊತೆಗೆ ಅವನು ಕೇಳಿದ ವಸ್ತುಗಳೆಲ್ಲವನ್ನೂ ತಂದೊಪ್ಪಿಸಿ, ರಮಿಸಿ ಲಿಂಗಮೂರ್ತಿಯನ್ನು ತನ್ನೊಂದಿಗೆ ಹಳ್ಳಿಗೆ ಕರೆದುಕೊಂಡು ಹೋಗಬೇಕೆನ್ನುವ ಅವನ ಮಾತುಗಳು ಮುಗ್ಧತೆಯ ಪ್ರತೀಕವಾಗಿವೆ. ಇವೆಲ್ಲ ಆಸೆಗಳನ್ನು ಮನದಲ್ಲಿ ತುಂಬಿಕೊಂಡವನಿಗೆ, ಈ ಲಿಂಗಮೂರ್ತಿ ಇಲ್ಲಿಗೆ ಹೇಗೆ? ಯಾಕೆ ಬಂದ? ಎಂಬ ಪ್ರಶ್ನೆ ಮೂಡುತ್ತದೆ. ಪ್ರಾಣಲಿಂಗವಾದ ಆ ಮೂರ್ತಿಗೆ ತನ್ನ ಅಮಾಯಕ ಪ್ರಶ್ನೆಗಳ ಸುರಿಮಳೆಯನ್ನು ಹರಿಸುತ್ತಾನೆ.

ಅಕ್ಕಟಾ! ಯಿದ ಯೇಮಿ ಹರುಂಡ ಯೆಕ್ಕರುಂಡ
ವಿಕ್ಕಡ ನುಂಡಟ ಯೇಮಿ ಕಾರಣಮೊ
ತಲ ಸೂಪ ಕೇಯೂರಿ ತಮ್ಮಳ್ಳ ತೋಡ
ನಲಗಿ ವಚ್ಚಿತಿ ಸೆಪ್ಪು ಮಲುಕ ದೀರ್ಚೆದನು
ಗೊರಗ ಉಮ್ಮೆತ್ತ ಪತ್ತಿರಿಂಬೂಜ ಸೇಯ
ಮರುಲೆತ್ತಿ ವಚ್ಚಿತೋ ಯುರುತರಾಟವಿಕಿ
ಪರಸಲ ತ್ರೊಕ್ಕುನಂ ಬಡ ಜಾಲ ಕೀವು
ಸಿರಿಗಿರಿ ನುಂಡಕ ಸುರಂಗಿ ವಚ್ಚತಿವೋ?
ಜಟಲಕು ನೊಡಲಿಕಿ ಸವತಲು ವೋರ
ನುಡುಪಂಜಾಲಕ ವಚ್ಚಿ ಯಡವಿಂ ಜೊಚ್ಚಿತಿವೋ?
ಚೆನ್ನಯ್ಯ ಗಲಸಿನಂ ಜೆಡಂ ಗುಲಂ ಬನುಚು
ನಿನ್ನು ಲೋಕಲು ವೇಲಿ ಯನ್ನ ವಚ್ಚತಿವೋ?

(ಗೂ.ವೆಂ.ಸು.(ಸಂ), ಬ.ಪು., ತೃ.ಆ., ಸಾಲು-೭೬೬-೭೭೬)

(ಅಕ್ಕಟಾ ಏನಿದು ಹರನೆ ಒಬ್ಬಂಟಿಯಾಗಿ ನೀನಿಲ್ಲಿರಲು ಕಾರಣವೇನು ಯಾವೂರ ಜನರ ಮೇಲೆ ಮುನಿದು ಬಂದಿರುವೆ ಹೇಳು ನಿನ್ನ ಮುನಿಸನು ತೀರಿಸುವೆನು. ಗೊರವರು ಪತ್ರಿಯ ಪೂಜೆ ಮಾಡಿದ್ದಕ್ಕೆ

ಮರುಳಾಗಿ ಈ ಕಾಡಿಗೆ ಬಂದೆಯಾ, ಜಾತ್ರೆಯ ಗಿಜಿಗಿಜಿಗೆ ಸಹಿಸದೆ ಸಿರಿಗಿರಿಯಿಂದ ಪರಾರಿಯಾಗಿ ಬಂದೆಯಾ, ನಿನ್ನ ಜಡೆಗಳಲ್ಲಿರುವ ಸವತಿಯರ ಹೊರೆ ತಾಳಲಾರದೆ ಬಂದು ಈ ಅಡಿವಿಗೆ ಸೇರಿದೆಯಾ, ಚೆನ್ನಯನನ್ನು ಕೂಡಿದಾಗ ಲೋಕವೆಲ್ಲವೂ ಕುಲ ಕೆಟ್ಟಿತು ಎಂದು ನಿನ್ನನ್ನು ಜರಿದಿದ್ದಕ್ಕಾಗಿ ನೀನಿಲ್ಲಿಗೆ ಬಂದೆಯಾ?)

ಎನ್ನುತ್ತಾ, ಮುಂದುವರೆದು ನನ್ನ ಮೇಲಿರುವ ಮೋಹದಿಂದ ಬಂದೆಯೋ ಎಷ್ಟು ದಿನವಾಯಿತು. ಸದಾ ನಿನ್ನೊಂದಿಗೆ ಅರ್ಧನಾರಿಯಾಗುತ್ತಿದ್ದ ಉಮೆಯು ಎಲ್ಲಿ ಹೋದಳು ಎಂದು ಕೇಳುತ್ತಾನೆ. ಭಗವಂತಿಗೆ ಜಾತಿಬೇಧಗಳಿಲ್ಲ ಎಂಬುದನ್ನು ತಿಳಿಯದ ಕಣ್ಣಪ್ಪ "ಹೊಲೆಯನಾದ ಚೆನ್ನಯ್ಯನ ಜೊತೆ ಸೇರಿದ್ದರಿಂದ ನಿನ್ನನ್ನು ಊರಿನಿಂದ ಹೊರಗಿಟ್ಟರೆ ಎಂದು ಸಂಶಯಿಸುತ್ತಾನೆ. ಪ್ರಲಯಕಾರನಾದ ಶಿವನು ಭಗವಂತನಾದರೂ ಅವನನ್ನು ತನ್ನಂತೆಯೇ ಕಷ್ಟ-ಸುಖಗಳನ್ನು ಅನುಭವಿಸುತ್ತಿರುವ ಸಾಮಾನ್ಯ ಮನುಷ್ಯನಂತೆ ಕಾಣುತ್ತಾನೆ ಕಣ್ಣಪ್ಪ. ಊಟ, ನೀರಿಲ್ಲದೆ ಎಷ್ಟು ದಿನವಾಯ್ತೋ ಜೊತೆಗಾರ ಇಲ್ಲದ್ದರಿಂದ ಒಂಟಿಯಾಗಿ ಎಷ್ಟು ದಿಗಿಲುಗೊಂಡನೋ ಎಂದು ದುಃಖಿಸುತ್ತಾನೆ.

ನನ್ನ ಹಳ್ಳಿಗರು ನಿನ್ನ ನೋಡಿದರೆ ಅವರೂ ದುಃಖಿಸುವರು. ನಿನಗೆ ದಮ್ಮಯ್ಯ ಎನ್ನುವೆ ಬಾರಯ್ಯ 'ಕರುಳ ಬೇಯಲು ಸಾವು ತಪ್ಪುವುದೇನು?' ಶಿವ-ಪಾರ್ವತಿಯರು ಬೇರೆ ಬೇರೆಯಾಗಿರುವರು ಎಂದರೆ ಜನ ನಗುವುದಿಲ್ಲವೆ? ಎಂಬ ಕಣ್ಣಪ್ಪನ ಅಮಾಯಕತ್ವ, ಮಗುವಿನಂತ ಮನಸ್ಸು ನಮ್ಮನ್ನು ಮುಗ್ಧರನ್ನಾಗಿ ಮಾಡುತ್ತದೆ.

ಎಷ್ಟೇ ಬೇಡಿಕೊಂಡರೂ ಮಾತನಾಡದುದನ್ನು ಅರಿತ ಕಣ್ಣಪ್ಪ ಹಸಿವಿನಿಂದ ಈ ರೀತಿ ಮಾಡುತ್ತಿರಬಹುದೆಂದು ಆಹಾರವನ್ನು ತರಲು ಹೊರಡುತ್ತಾನೆ. ತಾನು ಬೇಟೆಗಾರನಾಗಿದ್ದರಿಂದ ಸಹಜವಾಗಿಯೇ ಸಿಕ್ಕ ಸಿಕ್ಕ ಪ್ರಾಣಿಗಳನ್ನು ಕೊಂದು, ಒಳ್ಳೆಯ ಮಾಂಸವನ್ನು ಆಯ್ದು ಅದನ್ನು ಚೆನ್ನಾಗಿ ಬೇಯಿಸುತ್ತಾನೆ. ಮಾಂಸದ ತುಂಡುಗಳನ್ನು ಮೊದಲು ತಾನು ತಿಂದು ಪರೀಕ್ಷಿಸಿ ರುಚಿಕರವಾದುವುಗಳನ್ನು ಬಿಲ್ವ ಪತ್ರೆಯಲ್ಲಿರಿಸಿಕೊಂಡು ಬಾಯಿತುಂಬಾ ನದಿಯ ನೀರನ್ನು ತುಂಬಿಕೊಂಡು ಶಿವಾಲಯಕ್ಕೆ ಬರುತ್ತಾನೆ. ಮೊದಲಿದ್ದ ಪೂಜೆಯ ವಸ್ತುಗಳನ್ನು ಚಪ್ಪಲಿ ಕಾಲಿನಿಂದ ನೂಕುತ್ತಾನೆ. ಬಾಯಲ್ಲಿ ತುಂಬಿಕೊಂಡು ತಂದಿದ್ದ ನೀರಿನಿಂದ ಲಿಂಗಕ್ಕೆ ಮಜ್ಜನ ಮಾಡಿ ಬಿಲ್ವಪತ್ರೆಯಲ್ಲಿ ತಂದಿದ್ದ ಮಾಂಸದ ತುಂಡುಗಳನ್ನು ಶಿವನಿಗೆ ಅರ್ಪಿಸುತ್ತಾನೆ. ತನ್ನೊಡೆಯನ ಹಸಿವು ನೀಗಿಸಬೇಕೆಂಬ ಆಲೋಚನೆಯೊಂದೇ ಅವನ ಮನಸ್ಸಲ್ಲಿ ಇದ್ದದ್ದು. ತಾನು ಬಾಯಲ್ಲಿ ತಂದ ನೀರು ಎಂಜಲು, ಇದನ್ನು ದೇವರಿಗೆ ಸಮರ್ಪಿಸಬಾರದು, ಚಪ್ಪಲಿ ಕಾಲಲ್ಲಿ ಗುಡಿ ಪ್ರವೇಶಿಸಬಾರದು ಎಂಬ ಯೋಚನೆಯನ್ನು ಮಾಡದಷ್ಟು ಮುಗ್ಧವ್ಯಕ್ತಿ ಕಣ್ಣಪ್ಪ. ಹೀಗೆ ಕೆಲ ದಿನಗಳು ಕಣ್ಣಪ್ಪ ತನ್ನ ಸೇವೆಯನ್ನು ಮಾಡುತ್ತಿರುವಾಗ ಒಂದು ದಿನ ಆ ಶಿವಾಲಯಕ್ಕೆ ನಿತ್ಯ ಪೂಜಿಸುವ ಪೂಜಾರಿಯು ಬಂದು ಅಲ್ಲಿನ ವ್ಯವಸ್ಥೆಯನ್ನು ನೋಡಿ ಹೇಸಿಕೊಳ್ಳುತ್ತಾನೆ. ಈ ರೀತಿ ಅಪಚಾರಗೈದವನನ್ನು ಹಿಡಿದು ದಂಡಿಸಲು ಮರೆಯಲ್ಲಿ ಅವಿತಿರುತ್ತಾನೆ. ಇತ್ತ ಕಣ್ಣಪ್ಪನ ವಿಲಕ್ಷಣ ಸೇವೆಯನ್ನು ಕಂಡ ಪಾರ್ವತಿದೇವಿಯೂ ಕೋಪಿಸಿಕೊಂಡು,

ಕಣ್ಣಪ್ಪನಿಂದಾಗುತ್ತಿರುವ ಅಪಚಾರವನ್ನು ಶಿವನಲ್ಲಿ ಪ್ರಶ್ನಿಸುತ್ತಾಳೆ. ಇದೆಲ್ಲಕ್ಕೂ ಉತ್ತರವನ್ನು ನೀಡಲು ಬಯಸಿದ ಶಿವನು ಕಣ್ಣಪ್ಪನ ನಿರ್ಮಲ ಮುಗ್ಧಭಕ್ತಿಯನ್ನು ಜಗತ್ತಿಗೆ ತೋರಿಸಲು ಮುಂದಾಗುತ್ತಾನೆ. ಕಣ್ಣಪ್ಪ ಎಂದಿನಂತೆ ಶಿವಾಲಯಕ್ಕೆ ಬಂದಾಗ ಘನಲಿಂಗದ ಬಲಗಣ್ಣಲಿ ನೀರು ಸುರಿಯುವುದನ್ನು ಕಂಡು ಭಯಗೊಳ್ಳುತ್ತಾನೆ. ಪೂಜಾರಿ ಮಾಡಿರುವ ಪೂಜೆಯನ್ನು ಚಪ್ಪಲಿ ಕಾಲಿನಿಂದ ನೂಕಿ ತಾನು ಪೂಜೆ ಮಾಡುತ್ತಾನೆ. ಕಣ್ಣಿನಿಂದ ಸುರಿಯುತ್ತಿರುವ ನೀರನ್ನು ನಿಲ್ಲಿಸುವುದು ಹೇಗೆಂದು ತಿಳಿಯದ ಕಣ್ಣಪ್ಪ 'ಅಯ್ಯೋ ಶಿವನೇ ಕಣ್ಣಲ್ಲಿ ನೀರು ಸೋರಲು ಕಾರಣವಾವುದು' ಎಂದು ಕೇಳುತ್ತಾನೆ. ಕಾರಣ ತಿಳಿಯದ ಕಣ್ಣಪ್ಪ ಈ ರೋಗವಾವುದೋ ಎಂದು ಚಿಂತಿಸುತ್ತಾನೆ.

"ಆಲಿ ನೊಂದುದೊ ಕಣ್ಣ ಬೇನೆಯೊ
ಮೈಲಗೆಯೊ ಹೂ ಹುಟ್ಟಿದುದೊ ಕಣು
ಶೂಲೆಯೋ ಅಳಿಗಣ್ಣೊ ತಿಮಿರವೊ ಟೊಳ್ಳೆ ಪೋದಪುದೋ
ಬೀಲಿದುದೊ ಪಡೆಗವಿದುದೋ ರವೆ
ಕೀಲಿಸಿತೊ ದುರ್ಮಾಂಸದೋಷವೊ
ನೀಲಿಗಣ್ಣೋ ಮಾಱವೆಯೊ ಕಣ್ಕುಟಿಲವೋ ಅರಿಯೋ"

(ಎಸ್. ವಿದ್ಯಾಶಂಕರ(ಸಂ), ಬ.ಪು.ಸಂ.೧೭, ಪ.೬೬)

ನೀನು ಕುರೂಪಿಯಾಗಿರಲು ಜನರು ನಿನ್ನ ನೋಡಿ ನಗುವರು. ಈ ಕಾಯಿಲೆಗೆ ಔಷಧವಾದರೂ ತಿಳಿದಿಲ್ಲ ಎನ್ನುತ್ತಾ "ಹೊಲದಲಿ ಗೂಳಿಯಂ ಹುಲಿ ಕೊಂದವೋಲಾಯ್ತು" ನನ್ನ ಸ್ಥಿತಿ ಎಂದು ಪರಿತಪಿಸುತ್ತಾನೆ. ಇನ್ನು ಯೋಚಿಸಿದರೆ ಫಲವಿಲ್ಲ. "ನಿನ್ನ ಕಣ್ಣಿಗೆ ನನ್ನ ಕಣ್ಣೇ ಮದ್ದು" ಎಂದು ಬಾಣದಿಂದ ತನ್ನ ಕಣ್ಣನ್ನು ಕಿತ್ತು ಶಿವಲಿಂಗದಲ್ಲಿ ಸೋರುತ್ತಿರುವ ಕಣ್ಣಿನ ಜಾಗಕ್ಕೆ ಸಿಕ್ಕಿಸಿದ. ತಕ್ಷಣವೇ ಬಲಗಣ್ಣು ನೀರು ನಿಂತು ಎಡಗಣ್ಣಲಿ ನೀರು ಸುರಿಯಲಾರಂಭಿಸಿತು. ದಿಕ್ಕೆಟ್ಟಿದಂತವನಾದ ಕಣ್ಣಪ್ಪ ಈ ಮರ್ಮವನ್ನು, ಕಪಟವನ್ನು ತಿಳಿಯದ ಮುಗ್ಧ ತನ್ನ ಎಡಗಣ್ಣನ್ನು ಕೀಳಲು ಮುಂದಾಗುತ್ತಾನೆ.

"ಕಂಗುಱುಪನಿಟ್ಟಾ ಕೆರಹುಗಾ
ಲುಂಗುಟವನಾತಂ ಮನಸಿನೊಳು
ಪಿಂಗದೆಡಗಣ್ಣಂಬಿನಲಿ ತಾಂ ತೆಗೆಯಲನಿತಱೊಳು
ಅಂಗಜಾಹಿತನಾಗ ಮೆಚ್ಚಿಯ
ಭಂಗವನಹ ಕಣ್ಣಪ್ಪದೇವನ
ತುಂಗ ಕರಯುಗಳಗ್ರಹಣಕರನಾಗಿ ಮುಂದಿರಲು"

(ಎಸ್. ವಿದ್ಯಾಶಂಕರ(ಸಂ), ಬ.ಪು.ಸಂ.೧೭, ಪ.೭೪)

ನೀಲಕಂಠನ ಕಣ್ಣಬಾದೆಯನ್ನು ನೀಗಿಸಲು ತನ್ನ ಕಣ್ಣುಗಳನ್ನೇ ದಾನ ಮಾಡಿದ ದೃಢಭಕ್ತಿ ಶಿಖಾಮಣಿ ಕಣ್ಣಪ್ಪ. ಔಷಧ ತಿಳಿಯದೆ ಅನ್ಯ ಮಾರ್ಗವಿಲ್ಲದೆ ತನಗೆ ತೋಚಿದ್ದನ್ನು ತಕ್ಷಣವೇ ಕಾರ್ಯರೂಪಕ್ಕೆ

ತಂದು ಪ್ರೀತಿಯಿಂದ ಕಣ್ಣುಗಳನ್ನು ಅರ್ಪಿಸುತ್ತಾನೆ ಕಣ್ಣಪ್ಪ. ಇಂತಹ ಇವನ ಮುಗ್ಧಭಕ್ತಿ ನಮ್ಮನ್ನು ಮುಗ್ಧರನ್ನಾಗಿ ಮಾಡದೆ ಬಿಡದು. ಮಹೇಶ್ವರನನ್ನು ಆನಂದಪಡಿಸಿ ತಾನು ಶಿವಾನುಗ್ರಹ ಪಡೆದ ಧನ್ಯಜೀವಿ ಕಣ್ಣಪ್ಪ. ಕಣ್ಣಪ್ಪನ ಮುಗ್ಧಭಕ್ತಿಗೆ ಕಣ್ಣಪ್ಪನ ಭಕ್ತಿಯೇ ಸಾಟಿ ಎಂಬುದನ್ನು ತೆಲುಗು–ಕನ್ನಡ ಬಸವಪುರಾಣಗಳಲ್ಲಿ ಕವಿಗಳು ಚಿತ್ರಣ ಮಾಡಿದ್ದಾರೆ.

ಈ ಮೇಲೆ ವಿವರಿಸಿದ ಪ್ರಮುಖ ಮುಗ್ಧಭಕ್ತರ ಕಥೆಗಳು 'ಬಸವಪುರಾಣ'ಗಳಲ್ಲಿವೆ. ಆ ಮೂಲಕ ಇಲ್ಲಿನ ಅನೇಕ ಶರಣರಲ್ಲಿ ಮುಗ್ಧತ್ವವನ್ನೇ ಮೈಗೂಡಿಸಿಕೊಂಡು ಶಿವನ ಸೇವೆಯಲ್ಲಿ ನಿರತರಾಗಿ ಶಿವನಿಂದ ಅನುಗ್ರಹಗೊಂಡು ಖ್ಯಾತಿಯನ್ನು ಗಳಿಸಿದ್ದಾರೆ. ಇಂತಹ ಮುಗ್ಧಶರಣರ ಜೀವನ ಚರಿತೆಗಳು ಇಂದು ಹೆಚ್ಚು ಪ್ರಸ್ತುತವಾಗಬೇಕಾಗಿದೆ. ಯಾವುದೇ ಕಲ್ಮಷವಿಲ್ಲದ, ಕಪಟವಿಲ್ಲದ ಪರಿಶುದ್ಧ ಮನಸ್ಸು, ನಿರ್ಮಲ ಪ್ರೀತಿ, ಪಲಾಪೇಕ್ಷಿಯಿಲ್ಲದ ಸೇವೆ ಮುಂತಾದ ಗುಣಗಳನ್ನು ಇಂದಿನ ಸಮಾಜದ ಜನರು ಅಳವಡಿಸಿಕೊಳ್ಳಬೇಕಾಗಿದೆ. ಕವಿಗಳು ಇಂತಹ ಮಹಾನ್ ವ್ಯಕ್ತಿಗಳ ಚರಿತ್ರೆಯನ್ನು ದಾಖಲಿಸಿದ್ದೂ ಇದೇ ಉದ್ದೇಶಕ್ಕಾಗಿಯೇ ಎಂಬುದು ಮೊದಲ ಕಾರಣವಾದರೆ, ಎರಡನೆಯದು ಧರ್ಮ ಪ್ರಸಾರಕ್ಕಾಗಿ ತಮ್ಮ ತಮ್ಮ ಧರ್ಮದ ಶ್ರೇಷ್ಠತೆಯನ್ನು ಪ್ರಕಟಿಸುವುದಕ್ಕಾಗಿ ಇಂತಹ ಮಹಿಮರ ಕಥೆಗಳನ್ನು ಕಾವ್ಯಗಳಲ್ಲಿ, ಪುರಾಣಗಳಲ್ಲಿ ಚಿತ್ರಿಸಿದ್ದಾರೆ.

**೩.೨ : ಉಗ್ರಭಕ್ತಿಯ ಶರಣರು :**

ತೆಲುಗು ಕನ್ನಡ 'ಬಸವಪುರಾಣ'ಗಳಲ್ಲಿ ಹಲವು ವಿಭಿನ್ನ ವ್ಯಕ್ತಿತ್ವವುಳ್ಳ ಶರಣರಿದ್ದಾರೆ. ಮುಗ್ಧಭಕ್ತಿ ಶರಣರಂತೆಯೇ ಉಗ್ರಭಕ್ತಿಯನ್ನು ಮೈಗೂಡಿಸಿಕೊಂಡು ಶಿವನ ಸೇವೆಯಲ್ಲಿ ತೊಡಗಿರುವ ಶರಣರಿದ್ದಾರೆ. 'ಉಗ್ರಭಕ್ತಿ' ಎಂದರೆ ತಮ್ಮ ವಿರುದ್ಧ ಅಥವಾ ತಮ್ಮ ಧರ್ಮದ ವಿರುದ್ಧ ವಿರೋಧಿಸುವವರನ್ನು, ಅಪಾಯವನ್ನು ಉಂಟುಮಾಡುವವರನ್ನು ಶಿಕ್ಷೆಗೆ ಒಳಪಡಿಸುವ ಮೂಲಕ, ಕೊಲ್ಲುವುದರ ಮೂಲಕ ತಮ್ಮ ಪವಿತ್ರತೆಯನ್ನು ಕಾಪಾಡಿಕೊಳ್ಳುವುದಾಗಿದೆ. ಶಿವನನ್ನು ಪೂಜಿಸುವ, ಪ್ರೀತಿಸುವ ಶಿವಭಕ್ತನಿಗೆ ಕೇಡುಂಟಾದಾಗ ತಕ್ಷಣಾ ನೆರವಿಗೆ ಬಂದು, ಅವರ ಕಷ್ಟವನ್ನು ಪರಿಹರಿಸುವುದು. ಈ ಮೂಲಕ ಶಿವನನ್ನು ಶಿವಭಕ್ತರನ್ನು ಕಾಪಾಡುವ ಕಾಯಕವೇ ತಮ್ಮ ದೇವರಿಗೆ ಅರ್ಪಿಸುವ ಭಕ್ತಿ ಎಂದುಕೊಳ್ಳುತ್ತಾರೆ. ಇಂತಹ ಉಗ್ರಭಕ್ತರು ಬಸವಪುರಾಣಗಳಲ್ಲಿ ಹಲವರಿದ್ದಾರೆ. ಅಧ್ಯಯನ ದೃಷ್ಟಿಯಿಂದ ಪ್ರಮುಖರಾದ ಶರಣರ ಜೀವನ ಚರಿತ್ರೆಯನ್ನು ಅವರ ಉಗ್ರಭಕ್ತಿಯ ಸ್ವರೂಪವನ್ನು ಮುಂದೆ ವಿವರಿಸಲಾಗಿದೆ.

ಪ್ರಮುಖ ಉಗ್ರಭಕ್ತರು

೧. ಮಡಿವಾಳ ಮಾಚಿದೇವ

೨. ಇರಿಭಕ್ತ

೩. ಬಾಹೂರ ಬೊಮ್ಮಯ್ಯ

೪. ಜಗದೇವ ದಂಡನಾಯಕ

೧. ಮಡಿವಾಳ ಮಾಚಿದೇವ :

ಮಡಿವಾಳ ಮಾಚಯ್ಯನ ಕಥೆಯು ತೆಲುಗು 'ಬಸವಪುರಾಣಮು'ವಿನಲ್ಲಿ ನಾಲ್ಕನೇ ಆಶ್ವಾಸದ ಆರಂಭದಲ್ಲಿ ಬಂದಿದೆ. ಕನ್ನಡ 'ಬಸವಪುರಾಣ'ದಲ್ಲಿ ಕಾಂಡ ನಾಲ್ಕು, ಸಂದಿ-೨೦ರಲ್ಲಿ ಚಿತ್ರಣಗೊಂಡಿದೆ. ಕಥೆಯ ವಸ್ತುವಿನಲ್ಲಿ ತೆಲುಗು ಕನ್ನಡದಲ್ಲಿ ಯಾವುದೇ ಬದಲಾವಣೆಗಳಿಲ್ಲ. ಮಾಚಯ್ಯನ ಭಕ್ತಿಯ ಚಿತ್ರಣವನ್ನು ಇಬ್ಬರು ಕವಿಗಳು ತುಂಬಾ ಸೊಗಸಾಗಿ ನಿರೂಪಿಸಿದ್ದಾರೆ. ಭೀಮಕವಿಯು ಸಂಧಿ ಆರಂಭದ ಸೂಚನಾ ಪದ್ಯದಲ್ಲಿಯೇ ಮಾಚಯ್ಯನ ವೀರತ್ವವನ್ನು ಪ್ರಕಟಿಸುತ್ತಾನೆ.

"ಮತ್ತಗಜವಂ ಕೊಂದದಱಸುವ
ನೆತ್ತಿ ಮುನ್ನಿಱಿದವನ ಹರಣವ
ನಿತ್ತು ಮೆಱೆದನು ಕಟಕದೊಳು ಮಡಿವಾಳ ಮಾಚಯ್ಯ"

(ಎಸ್. ವಿದ್ಯಾಶಂಕರ(ಸಂ),.ಬ.ಪು,ಸಂಧಿ-೨೦, ಸೂಚನಾ ಪದ್ಯ)

ಅನ್ಯೋನ್ಯ ವೀರ ವ್ರತಾಚಾರಿ ಶ್ರೇಷ್ಠನೂ, ಜಂಗಮನೂ, ನ್ಯಾಯ ನಿಷ್ಠುರಿಯೂ, ಗುಣಾನ್ವಿತನೂ, ಸುಪ್ರತಿಷ್ಠ ಕೀರ್ತಿವಂತನೂ, ಭವಜನ ಸಂಸರ್ಗನೂ ಆದ ಮಡಿವಾಳ ಮಾಚಯ್ಯನೆಂಬ ಶರಣನು ಬಸವಣ್ಣನನ್ನು ಕಾಣಲೆಂದು ಬರುತ್ತಾನೆ. ಬಸವಣ್ಣನ ವ್ಯಕ್ತಿತ್ವಕ್ಕೆ ಮಾರುಹೋದ ಮಾಚಯ್ಯ ಇಲ್ಲಿಯೇ ಇರಲು ಬಯಸುತ್ತಾನೆ. ಶಿವಭಕ್ತರ ಬಟ್ಟೆಗಳನ್ನು ತೊಳೆಯುವ ಕಾಯಕವನ್ನು ಮಾಡುತ್ತಾ ನಿತ್ಯವೂ ತನ್ನ ಕಾಯಕದಲ್ಲಿ ತೊಡಗಿರುತ್ತಾನೆ. ತನ್ನ ಕಾಯಕ ನಿಷ್ಠೆಯ ಪ್ರತೀಕವಾಗಿ ತಾನು ಮಡಿ ಮಾಡಿಕೊಂಡು ಹಿಂದಿರುಗಿ ಬರುವಾಗ ಯಾರೂ ತನ್ನನ್ನೂ ತಾಕಬಾರದು. ತಾಕಿದರೆ ಅವರನ್ನು ಕೊಂದುಬಿಡುವ ನಿಯಮವನ್ನು ಪಾಲಿಸುತ್ತಿರುತ್ತಾನೆ. ಒಮ್ಮೆ ಮಡಿ ಮಾಡಿದ ಬಟ್ಟೆಗಳನ್ನು ಹೊತ್ತುಕೊಂಡು ದಾರಿಯಲ್ಲಿ ಬರತ್ತಾ "ಭವಿಗಳಾದವರು ಶರಣರ ವಸ್ತ್ರಗಳನ್ನು ಮುಟ್ಟಿದರೆ ಇರಿದು ಕೊಲ್ಲುವೆನೆಂದು" ಹೇಳುತ್ತಾ ಅಡಿಗಡಿಗೆ ಗಂಟೆಯನ್ನು ಬಾರಿಸುತ್ತಾ ಬರುತ್ತಿದ್ದನು. ಹೀಗೆ ಕೆಲ ದಿನಗಳು ಕಳೆದ ಮೇಲೆ ಒಂದು ದಿನ ತನ್ನ ನಿಯಮಕ್ಕೆ ವಿರುದ್ಧವಾಗಿ ಒಬ್ಬ ಮಾಚಯ್ಯನನ್ನು ಮುಟ್ಟಿ ಮೈಲಿಗೆ ಮಾಡುತ್ತಾನೆ. ಸಿಟ್ಟಿಗೆದ್ದ ಮಾಚಯ್ಯ ಅವನ ಶಿರವನ್ನು ಕಡಿದು ಆಕಾಶಕ್ಕೆ ತೂರುತ್ತಾನೆ. ಈ ಕೃತ್ಯವನ್ನು ಕಂಡು ಅವರಿವರೆನ್ನದಂತೆ ಪುರದಲ್ಲಿದ್ದವರೆಲ್ಲ ಬಿಜ್ಜಳರಾಜನಲ್ಲಿ ದೂರನ್ನಿತ್ತು ಇಂತಹ ನೀಚನಿಗೆ ತಕ್ಕ ಶಿಕ್ಷೆಯಾಗಬೇಕೆಂದು ಮನವಿ ಮಾಡುತ್ತಾರೆ. ಈ ವಿಷಯ ಕೇಳಿದ ರಾಜ ತುಂಬಾ ಕೋಪಗೊಂಡು ಬಸವಣ್ಣನನ್ನು ನೋಡುತ್ತಾ

"ನಿದಿ ಯೇಮಿ ವಿಪರೀತ ಮಿಂಕ ನೆವ್ವರಿಕಿಂ
ಬ್ರದುಕಂಗವಚ್ಚು ನೀ ಭಕ್ತಲಚೇತಂ?
ಗೋಕಲುದುಕುಚಾಕಿ ಗ್ರೋವ್ವಿ ಯಿಪ್ಪುರಮು

ಲೋಕಂಬುನೆಲ್ಲಂ ಗಲ್ಲೋಲ ಮಾರ್ಚೆಡಿನಿ"

(ಗೂ.ವೆಂ.ಸು.(ಸಂ), ಬ.ಪು., ಚ.ಆ.ಸಾ-೭೬-೮೦)

(ಏನಿದು ವಿಪರೀತವಾಯಿತು. ಇನ್ನು ಉಳಿಯಲು ಸಾಧ್ಯವೇ ನಿಮ್ಮ ಭಕ್ತರ ಕೈಯಲ್ಲಿ. ಬಟ್ಟೆ ಒಗೆಯುವ ಅಗಸ ಕೊಬ್ಬಿ ಈ ಪುರವೆಲ್ಲವನ್ನು ಅಲ್ಲೋಲ ಕಲ್ಲೋಲಲಾಗಿಸಿದ)

ಸಹಜವಾಗಿಯೇ ಇಂಥ ಚಿಕ್ಕ ವಿಷಯಗಳಿಗೆ ಪ್ರಾಣವನ್ನೇ ತೆಗೆದ ಮಾಚಯ್ಯನ ಮೇಲೆ ರಾಜ ಕೋಪಿಸಿಕೊಳ್ಳುತ್ತಾನೆ. ಇಂಥಹ ಭಕ್ತ ಶರಣರಿಗೆಲ್ಲ ಗುರುವಾದ ಬಸವಣ್ಣನಿಗೆ ಬಯ್ಯುತ್ತಾನೆ. ಇಂಥ ಅವಿವೇಕದ ಕೃತ್ಯಗಳು ಶರಣರಿಗೆ ಸಮಂಜಸವೇ ಬಸವಣ್ಣ ಎಂದು ಪ್ರಶ್ನಿಸುತ್ತಾನೆ. ಇಂತಹ ಉದ್ಧಟತನವನ್ನು ಎಲ್ಲಿಯೂ ಕಾಣೆವು. ಬಟ್ಟೆಗಳನ್ನೂ ಮುಟ್ಟಿದರೆ ಹರಿದು ಹೋಗುವವೇ ಎಂದು ಮಾಚಯ್ಯನ ವೃತ್ತಿಯನ್ನು, ಜಾತಿಯನ್ನು ಮೂದಲಿಸುತ್ತಾ ಬಿಜ್ಜಳನು ಆ ಅಗಸನನ್ನು ಅಲ್ಲಿಯೇ ಹೋಗಿ ಕೊಂದುಬಿಡಿ ಎಂದು ಆಜ್ಞಾಪಿಸುತ್ತಾನೆ. ಆಗ ಬಸವಣ್ಣ ಕುಂಬಾರ, ಬೆಸ್ತ, ಬಡಗಿ, ಚಿನಿವಾರ, ಬೇಡ, ಗೊಲ್ಲ, ಸೂತ್ರಿಕ. ಮುಂತಾದ ವೃತ್ತಿಯನ್ನು ಮಾಡುವವರ ಶ್ರೇಷ್ಠತೆಯನ್ನು ತಿಳಿಸುತ್ತಾನೆ. ಇದಕ್ಕೆ ಒಪ್ಪದ ಬಿಜ್ಜಳ ಮಾಚಯ್ಯನ ಮೇಲೆ ಮದ್ದಾನೆಗಳನ್ನು ಬಿಟ್ಟು ತುಳಿಸಿ ಸಾಯಿಸುವಂತೆ ಸೈನಿಕರಿಗೆ ಸೂಚಿಸುತ್ತಾನೆ. ಅದರಂತೆ ತನ್ನ ಮೇಲೆ ಎರಗಿ ಬಂದ ಮದ್ದಾನೆಗಳನ್ನು;

"ಎರಡು ಕೈಗಳನುದ್ದಿಕೊಳುತ
ಬ್ಬರಿಸಿ ಬೆಳೆದೆಯ್ತಂದು ಪುಟನೆಗೆ
ದುರವಣಿಸಿ ಮಾವಂತರುಗಳಂ ಕೆಡಹಿ ಮದಕರಿಯ
ಕರವನುಜೆ ಪಿಡಿದೊತ್ತಿ ನೂಂಕುತ
ಬರಸೆಳೆದು ಹೊಡೆದಪ್ಪಳಿಸುತಂ
ಶರಣನೊಗೆವಂತಂಬರವನು ಮಿರ್೭ತಳಾಗ್ರದೊಳು"

(ಎಸ್. ವಿದ್ಯಾಶಂಕರ (ಸಂ), ಬ.ಪು.ಸಂ.೨೦.ಪ.೪೨)

ಮದಸಿದ ಆನೆಯ ಸೊಂಡಿಲನ್ನು ಹಿಡಿದು ತಿರುಗಿಸುತ್ತಾ ಶಿವನ ವೀರಭದ್ರನ ಅವತಾರದಂತೆ ಕೋಪಗೊಂಡು ಆಯುಧದಿಂದ ಸೀಳಿದನು. ಹರಿಯ ಬೆನ್ನೆಲುಬನ್ನು ರುದ್ರನು ಮುರಿವಂತೆ ಆನೆಯ ಎಲುಬುಗಳನ್ನು ಮಾಚಯ್ಯ ಮುರಿದನು. ಅಲ್ಲಿಗೆ ಬಂದ ಮಾವುತರನ್ನು ಕೊಂದು ಕೆಲವರು ದಿಕ್ಕೆಟ್ಟು ಓಡುವಂತೆ ಮಾಡಿದನು. ಹೊಲೆಯನಿಗೆ ಮಾಂಸ, ಮಾದಿಗನಿಗೆ ತೊಗಲು ಸಿಗದಂತೆ ಸಿಗಿದು ಎಸೆದನು. "ಎನ್ನ ಮೇಗಡೆ ಯಾರು ಆನೆಯ ಬಿಟ್ಟನಾ ವಸುದೇವನ ಕೊಬ್ಬಡಿಗಾಸನೆ" ಎಂದು ರೊಚ್ಚಿಗೆದ್ದ ವೀರಾವತಾರಿ ಮಾಚಯ್ಯನನ್ನು ಕಂಡು ಬಿಜ್ಜಳನು ತಲೆತಗ್ಗಿಸುತ್ತಾನೆ. ಬೇಡವೆಂದರೂ ನಾನು ಕೇಳದೆಯೇ ಛಲದಿಂದ ಕಳಿಸಿ ಮಾಚಯ್ಯನನ್ನು ಕೊಲ್ಲಿಸಬೇಕೆಂದುಕೊಂಡುದುದು ತಪ್ಪಾಯಿತು ಶಿವದ್ರೋಹವಾಯಿತು. ನಿಮ್ಮ ಮುಂದೆ ನಾನು ಸಣ್ಣವನಾದೆ ಬಸವಣ್ಣ ಕ್ಷಮೆಯಿರಲಿ ಎಂದು ಕೈಮುಗಿಯುತ್ತಾನೆ.

ಹೀಗೆ ಶಿವಭಕ್ತರಲ್ಲಿಯೂ ವೀರ, ಪರಾಕ್ರಮಿಗಳು ಇದ್ದರು ಎಂಬುದಕ್ಕೆ ಮಾಚಯ್ಯ ಉತ್ತಮ ಉದಾಹರಣೆ. ಕೇವಲ ದೇವರ ಮೂರ್ತಿಯ ಎದುರು ಕುಳಿತು ಪೂಜಿಸುತ್ತಾ ಶಿವದ್ಯಾನರಾಗಿ ಕುಳಿತುಕೊಳ್ಳುವುದಷ್ಟೇ ಅಲ್ಲ, ಹೋರಾಟ ಯುದ್ದಗಳಿಗೂ ಸಿದ್ಧರಾಗಿ ವೈರಿಗಳನ್ನು ಧೈರ್ಯದಿಂದ ಎದುರಿಸುವಂತಹ ಭಕ್ತಶರಣರೂ ಇದ್ದರು ಎಂಬುದನ್ನು ಬಸವಪುರಾಣಗಳಲ್ಲಿ ಕವಿಗಳು ತೋರಿಸಿಕೊಟ್ಟಿದ್ದಾರೆ.

**೨. ಇರಿಭಕ್ತ (ಇರುವದಂಡಾರಿ) :**

ದ್ರಾವಿಡ ದೇಶದ ಕರವೂಳ ಚೋಳನ ರಾಜ್ಯದಲ್ಲಿದ್ದ ಅರವತ್ಮೂರು ಶರಣರಲ್ಲಿ ಇರಿಭಕ್ತನೆಂಬುವನಿದ್ದನು. ಇವನು ಶಿವಾಗಣಾಗ್ರಣಿ, ವಿತರಣದಕಣಿ, ಸದಾಚಾರ ಸಂಪನ್ನವಾದ ಮಾರ್ಗವನ್ನು ಅನುಸರಿಸುವ ವೀರಭಕ್ತನಾಗಿದ್ದನು. ಶಿವದ್ರೋಹವನ್ನೆಸುಗುವವರಿಗೆ ಗಂಡನು, ಪ್ರತಾಪನು, ಮಾರ್ತಂಡನೂ ಆಗಿದ್ದನು. ಸಕಲ ಶಾಸ್ತ್ರಾಭ್ಯಾಸವನ್ನು ಕಲಿತ ಕಲಿಯೂ ಆಗಿದ್ದನು. ಇವನು ಮಾರಹರನಾದ ಪರಮೇಶ್ವರನಿಗೆ ಅಪಕಾರ ಮಾಡುವವರನ್ನು ಕೊಲ್ಲುವುದು ನನ್ನ ನೇಮವೆಂದು, ಶಿವದ್ರೋಹ ಗೈಯುವವರನ್ನು ಶಿಕ್ಷಿಸುತ್ತಾ ಇರುತ್ತಿದ್ದನು. ಶಿವಭಕ್ತನೊಬ್ಬನು ಹರನ ಪೂಜೆಗೆಂದು ಮುಂಜಾನೆ ಎದ್ದು ವಿವಿಧ ಪುಷ್ಪಗಳನ್ನು ಕಿತ್ತುಕೊಂಡು ಶಿವನನ್ನು ಪೂಜಿಸಬೇಕೆಂಬ ಆತುರದಲ್ಲಿ ಬರುತ್ತಿರುತ್ತಾನೆ. ದಾರಿಯಲ್ಲೊಂದು ಮದಗಜವು ಅವನನ್ನು ಅಡ್ಡಗಟ್ಟಿ ಹಿಂಸಿಸುತ್ತದೆ. ಕೊಂಬಿನಿಂದ ತಿವಿದು ರುಂಡವನ್ನು ಆಕಾಶಕ್ಕೆಸೆದಾಗ ಉರಿತಾಪದಿಂದ ಆ ಭಕ್ತನು "ಪ್ರಾಣೇಶ ಶಿವ ಶಿವಾ ಪರಮಾತ್ಮ" ಎಂದು ಕೂಗಿಕೊಳ್ಳುತ್ತಾ ಸಾಯುತ್ತಾನೆ. ಈ ಧ್ವನಿಯನ್ನು ಕೇಳಿಸಿಕೊಂಡ ಇರಿಭಕ್ತ ಇದು ಮಲಹರ ಭಕ್ತನ ಧ್ವನಿಯೇ ಆಗಿದೆ. ಯಾರಿಗೋ ಆಪತ್ತು ಬಂದೊದಗಿದೆ ಎನ್ನುತ್ತಾ ಕಟ್ಟುಗ್ರನಾಗಿ ಇಂತಹ ಆರ್ತನಾದವೇಕೋ ಎಂದು ಆ ಎಡೆಗೆ ಬರುತ್ತಾನೆ. ಸತ್ತು ಬಿದ್ದ ಭಕ್ತನನ್ನು ನೋಡಿ ಕೋಪಗೊಳ್ಳುತ್ತಾನೆ. ಎದುರು ನಿಂತಿದ್ದ ಮದಗಜವನ್ನು ನೋಡಿ ನಿನ್ನನ್ನು ಕೊಂದು ಸೀಳದೆ ಹಿಂದಿರುಗೆನು ಎಂದು ಅದರ ವಿರುದ್ದ ಸೆಣೆಸಾಡಲು ಮುಂದಾದನು. ರುದ್ರಾವತಾರಿಯಾದ ಇರಿಭಕ್ತ ಶಂಖನಾದವನ್ನು ಊದಿಸಿ

ವ್ಯಗ್ರದಾನೆಯ ಸುಂಡಿಲಂ ಹ
ಸ್ತಾಗ್ರದಿಂ ಪಿಡಿದೊತ್ತಿ ಬರಸೆಳೆ
ದಾಗ್ರಹಿಸಿ ಹಿಂದಕ್ಕೆ ತೆಗೆದಂ ಮೆಲ್ಗಡೆಗೆ ಪಾಯ್ದು
ಉಗ್ರರೂಪನು ಮಾವತಿಗನಂ
ನಿಗ್ರಹಿಸಿ ಕೆಡೆನೂಂಕಿ ಕಾಲಲು
ದಗ್ರ ವೃತ್ತಿಯೊಳದಟ ಕೊರಳಂ ಮೆಟ್ಟಿ ಬೊಬ್ಬಿಸುತ

(ಎಸ್. ವಿದ್ಯಾಶಂಕರ,(ಸಂ).ಸಂ–೨೧,ಪ–೧೫)

ಕಠಾರಿಯಿಂದ ಸೀಳೀದ ರಭಸಕ್ಕೆ ಪರ್ವತವು ಬಿದ್ದಂತೆ ಆನೆಯು ನೆಲಕ್ಕೆ ಬೀಳುತ್ತದೆ. ಶಿವಭಕ್ತನಿಗೆ ಮಾಡಿದ ಅನ್ಯಾಯವನ್ನು ಸಹಿಸದ ಇರಿಭಕ್ತ ಆ ಸೇಡನ್ನು ತೀರಿಸಿಕೊಳ್ಳುವುದರ ಮೂಲಕ ತನ್ನ ನೇಮಕ್ಕೆ ಬದ್ಧನಾಗಿರುವುದನ್ನು ತೋರಿಸುತ್ತಾನೆ. ಈ ವಿಷಯ ತಿಳಿದ ಚೋಳ ರಾಜನು ಬಂದು ಇರಿಭಕ್ತನ ಅಡಿಗೆರಗಿ ಕ್ಷಮೆಯಿರಲಿ ಎನ್ನುತ್ತಾ, ಶಿವಭಕ್ತನಿಗೆ ಆದ ಅನ್ಯಾಯಕ್ಕೆ ನಾನೆ ಹೊಣೆಗಾರ. ಅದನ್ನು ಸಾಕಿದವನು ನಾನೇ ಹಾಗಾಗಿ ಈ ಸಾವಿಗೆ ತನ್ನ ಸಾವೇ ಸಮವೆಂದು ಕತ್ತನ್ನು ಕತ್ತರಿಸಿಕೊಳ್ಳಲು ಮುಂದಾದನು. ಆಗ ಪರಮೇಶ್ವರನು ಪ್ರತ್ಯಕ್ಷನಾಗಿ ಪಟ್ಟವರ್ಧನನಾದ ಚೋಳ ರಾಜನ ಭಯಭಕ್ತಿಗೆ, ಇರಭಕ್ತನ ಭಕ್ತಿಯುನ್ನತಿಗೆ ಮೆಚ್ಚುತ್ತಾನೆ. ಸತ್ತ ಶಿವಭಕ್ತನನ್ನು ಆನೆಯನ್ನು ಬದುಕಿಸಿ ಜೀವ ನೀಡುತ್ತಾನೆ. ಶಿವನೇ ಪ್ರತ್ಯಕ್ಷನಾಗಿ ಇರಿಭಕ್ತನ ಸೇವೆಯನ್ನು ಮೆಚ್ಚಿದ್ದರಿಂದ ಇರಿಭಕ್ತ ಲೋಕಕ್ಕೆಲ್ಲ ಪ್ರಸಿದ್ಧಿಯಾಗುತ್ತಾನೆ. ಇಲ್ಲಿ ಚೋಳರಾಜನ ಅಹಂಕಾರವಿಲ್ಲದ ಮನಸ್ಸು, ತಾನು ಸಾಕಿದ ಪ್ರಾಣಿ ಮತ್ತೊಬ್ಬರಿಗೆ ಕೇಡುಂಟು ಮಾಡಿದ್ದರಿಂದ ಅದು ನನ್ನದೇ ತಪ್ಪು ಎಂದು ಭಾವಿಸುವ ರಾಜನ ಗುಣ ಮೆಚ್ಚುವಂತದ್ದೇ. ಶಿವಭಕ್ತರಿಗೆ ನೋವುಂಟು ಮಾಡಿದ ತಪ್ಪಿಗಾಗಿ ತನ್ನ ಪ್ರಾಣವನ್ನೇ ನೀಡಬಯಸಿದ ರಾಜನು ಶಿವನ ದೃಷ್ಟಿಯಲ್ಲಿ ಅತ್ಯಂತ ಮಹಿಮಾನ್ವಿತನಾಗುತ್ತಾನೆ. ಶಿವಭಕ್ತರ ರಕ್ಷಣೆಗಾಗಿ ತನ್ನನ್ನು ಮೀಸಲಿಟ್ಟುಕೊಂಡು ಅವರನ್ನು ಕಾಯುವ, ಕಾಪಾಡುವ ಇರಿಭಕ್ತನ ಭಕ್ತಿಯು ವಿಶೇಷವಾಗಿದೆ. ತೆಲುಗು ಮತ್ತು ಕನ್ನಡದಲ್ಲಿ ಇವನ ಕತೆಯು ಹೆಚ್ಚಿನ ವ್ಯತ್ಯಾಸಗಳಿಲ್ಲದೆ ಏಕ ರೀತಿಯಾಗಿ ಚಿತ್ರಣಗೊಂಡಿವೆ.

**೩. ಬಾಹೂರ ಬೊಮ್ಮಯ್ಯ :**

ಕರಕಂಠಭಕ್ತನೂ, ವೀರಮಹೇಶ್ವರಾಚಾರ ಮತಸ್ಥನು, ಧೈರ್ಯಸಂಪನ್ನನೂ, ಶೌರ್ಯ ಪಡಿತನೂ ಆದ ಬಾಹೂರ ಬೊಮ್ಮಯನೆಂಬ ಭಕ್ತನು ಇದ್ದನು. ಇವನು ವೀರ ಪರಾಕ್ರಮಗಳಿಗೆ ಹೆಸರಾಗಿದ್ದು, ಶಿವಭಕ್ತರ ಸೇವೆ ಮತ್ತು ಶಿವನ ಸೇವೆಯನ್ನು ನಿತ್ಯವೂ ಒಂದಿನಿತೂ ಕುಂದಾಗದಂತೆ ನೋಡಿಕೊಳ್ಳುತ್ತಿರುತ್ತಾನೆ. ಕೋಳಿ ಕೂಗುವ ಮುಂಚೆ ಎದ್ದು ಹೂದೋಟಕ್ಕೊಗಿ ಹೂವುಗಳ ತಂದು ಹಾರಗಳನ್ನು ಮಾಡಿ ಶಿವನಿಗೆ ಮುಡಿಸುತ್ತಿರುತ್ತಾನೆ. ಹೀಗೆ ಹಲವು ಕಾಲಗಳು ನಿರಂತರವಾಗಿ ನಡೆಯುತ್ತಿರುತ್ತದೆ. ಒಮ್ಮೆ ಆ ಭಾಗಕ್ಕೆ ಧರಣೀಶನೊಬ್ಬನು ಬಂದು ಬಿಡಾರ ಹೂಡಿರುತ್ತಾನೆ. ಅವನ ಆನೆಯೊಂದು ಮದವೇರಿ ಮಾವುತನನ್ನು ಕೊಂದು ಪುರಬೀದಿಗಳಲ್ಲಿ ನುಗ್ಗುತ್ತದೆ. ಎದುರಿಗೆ ಸಿಕ್ಕಸಿಕ್ಕವರನ್ನು ತುಳಿದು ಕೊಲ್ಲುತ್ತಾ ಅಪಾರ ಹಾನಿಯನ್ನುಂಟು ಮಾಡುತ್ತಿರುತ್ತದೆ. ಇದನ್ನು ಕಂಡ ಬಾಹೂರ ಬೊಮ್ಮಯ್ಯನು ಆನೆಗೆ ಎದುರಾಗಿ ಬಂದು ನಿಲ್ಲು ನಿಲ್ಲು ಮುಂದೆ ಬರಬೇಡ 'ಹೋಯೆಂದು ಛೀಳಿಟ್ಟು' ಗಧರಿಸಿದನು. ಬೊಮ್ಮಯ್ಯನು ಗದರಿದ ಬಾಯಿಯ ಶಬ್ದ ಕೇಳಿದ ಆ ಆನೆಯು.

"ಸಡಿಫಡಾ ಎಂದೊದಜೆ ಕೈಕಾಲ್
ಕೊಡಹಿಕೊಳುತಂ ಹಿಂದ ಹಿಂದಕೆ

ಅಡಿಯಿಡುತ ಘೀಳಿಡುತ ಸುಂಡಿಲ ತಲೆಯೊಳೊಂದಿಸುತ
ನಡನಡುಗಿ ಮದದಾನೆ ತಟನಿಯ
ತಡೆಯೊಳಾಗಳೆ ಮಡಿದು ಕೆಡೆಯಲು
ಒಡನೆ ಮಾವತಿಗರು ಮಹೀಪತಿಗೆಯ್ದಿ ಹೇಳಿದರು

(ಎಸ್. ವಿದ್ಯಾಶಂಕರ, ಸಂ-೨೧, ಪ-೩೧)

ಬೊಮ್ಮಯ್ಯನ ಧನಿ ಕೇಳಿಯೇ ಆನೆ ಸತ್ತು ಹೋಯಿತೇಂದರೆ ಬೊಮ್ಮಯ ಎಷ್ಟು ಪರಾಕ್ರಮಿಯಾಗಿರಬೇಕು. ಅದರೊಂದಿಗೆ ಕಾದಾಡದೆ ಕೇವಲ ಘರ್ಜಿಸಿಯೇ ಅದರ ರೋಷಾವೇಶವನ್ನು ಕಡಿಮೆಮಾಡಿ ಸಾಯುವಂತೆ ಮಾಡುತ್ತಾನೆ. ಸತ್ತ ಸುದ್ಧಿಯನ್ನು ಮಾವುತರ ತಮ್ಮ ಪ್ರಭುವಿನ ಬಳಿ ಹೇಳುತ್ತಾರೆ. ಒಡನೆಯೇ "ಅಯ್ಯೋ ಆ ಅಯ್ಯನನು ಗಜವೆಂತು ಕಾಡಿಸಿತೋ" ಎಂದು ಆತಂಕದಿಂದ ಓಡೋಡಿ ಬಂದು ಬೊಮ್ಮಯ್ಯನ ಪಾದಗಳಿಗೆರಗಿ ಕ್ಷಮೆ ಬೇಡುತ್ತಾನೆ. ತಪ್ಪಿನ ಅರಿವನ್ನು ಒಪ್ಪಿಕೊಂಡು ಕ್ಷಮೆ ನೀಡುವುದಿಲ್ಲವೆಂದು ಹೇಳಿ ಸತ್ತ ಆನೆಯನ್ನು ಬದುಕಿಸುತ್ತಾನೆ. ನೆರೆದ ಜನರೆಲ್ಲ ಬಾಹೂರ ಬೊಮ್ಮಯ್ಯನನ್ನು ಹೊಗಳುತ್ತಾ ಅವನ ಪರಾಕ್ರಮ, ಅವನ ದಯಾ ಗುಣವನ್ನು ಮೆಚ್ಚಿಕೊಳ್ಳುತ್ತಾ ಅಲ್ಲಿಂದ ಹೊರಟರು.

ಹೀಗೆ ಬಾಹೂರ ಬೊಮ್ಮಯ್ಯನ ಕಥೆಯನ್ನು ಕನ್ನಡ-ತೆಲುಗು 'ಬಸವಪುರಾಣ'ಗಳಲ್ಲಿ ಚಿತ್ರಸಲಾಗಿದೆ. ಬಿಜ್ಜಳನು ಮಡಿವಾಳ ಮಾಚಿದೇವನ ಮೇಲೆ ಮದಸಿದ ಆನೆಗಳನ್ನು ಬಿಟ್ಟು, ಕೊಲ್ಲಿರೆಂದು ಹೇಳಿದಾಗ ಬಶವಣ್ಣ ಬಿಜ್ಜಳನ ಈ ಅವಿವೇಕದ ನಿರ್ದಾರವನ್ನು ಖಂಡಿಸುತ್ತಾನೆ. ಈ ಹಿಂದೆ ಆನೆಗಳನ್ನು ಇರಿದು ಕೊಂದು ತಮ್ಮ ಧರ್ಮವನ್ನು ಕಾಪಾಡಿದ ಇರಿಭಕ್ತ ಮತ್ತು ಬಾಹೂರ ಬೊಮ್ಮಯ್ಯಗಳ ಕಥೆಯನ್ನು ಬಿಜ್ಜಳನಿಗೆ ಮನದಟ್ಟು ಮಾಡುವನು. ಬಿಜ್ಜಳ ಬಸವಣ್ಣ ಹೇಳಿದ ವೀರ, ಉಗ್ರ ಶರಣರ ಕಥೆಯನ್ನು ಕೇಳಿ ತನ್ನ ತಪ್ಪನ್ನು ಮನ್ನಿಸಬೇಕೆಂದು ಕೇಳುತ್ತಾನೆ. ಹೀಗೆ ಬಸವಣ್ಣ ಉಗ್ರಭಕ್ತರ ಕಥೆಗಳನ್ನು ಹೇಳುವ ಸಂದರ್ಭ 'ಬಸವಪುರಾಣ'ಗಳಲ್ಲಿ ಚಿತ್ರಣಗೊಂಡಿದೆ.

**೪. ಜಗದೇವ ದಂಡನಾಯಕ :**

'ಬಸವಪುರಾಣ'ಗಳಲ್ಲಿ ಬರುವ ಉಗ್ರ ಶಿವಭಕ್ತರಲ್ಲಿ ಅತ್ಯಂತ ಪರಾಕ್ರಮಿ, ವೀರ, ಶೌರ್ಯಗಳನ್ನು ಮೈತುಂಬಿಕೊಂಡು ಶಿವನ ಸೇವೆಗಾಗಿ ಪ್ರಾಣವನ್ನು ಲೆಕ್ಕಿಸದೇ ಹೋರಾಡಿದವನು ಜಗದೇವ ದಂಡನಾಯಕ. ಇವನು ಶಿವದ್ರೋಹಗೈದ ತನ್ನ ದೇಶದ ರಾಜನನ್ನೇ(ಬಿಜ್ಜಳ) ಕೊಲ್ಲುವುದಕ್ಕೆ ನಿರ್ಧರಿಸಿದನು. ಬಿಜ್ಜಳನನ್ನು ಸಂಹಾರಗೈದು ಅದರಂತೆ ತನ್ನ ವೀರ ಉಗ್ರಭಕ್ತಿಯನ್ನು ತೋರಿಸಿದ್ದಾನೆ.

ಒಮ್ಮೆ ಜಗದೇವ ದಂಡನಾಯಕನು ಬಸವಣ್ಣನಲ್ಲಿಗೆ ಬಂದು ಜಂಗಮಕೂಟದೊಂದಿಗೆ ದಾಸೋಹಕ್ಕೆ ಆಗಮಿಸಬೇಕೆಂದು ಹೇಳಿಕೊಳ್ಳುತ್ತಾನೆ. ಅದರಂತೆ ಬಸವಣ್ಣ ಒಪ್ಪಿಕೊಂಡಿರುತ್ತಾನೆ. ಜಗದೇವ ದಂಡನಾಯಕ ದಾಸೋಹದ ಸಕಲ ಸಿದ್ಧತೆಯನ್ನು ಮಾಡಿಕೊಂಡು ಬಸವಣ್ಣನನ್ನು

ಎದುರು ನೋಡಿತ್ತಿರುತ್ತಾನೆ. ಬಸವಣ್ಣ ಬರುವುದು ತಡವಾಗುತ್ತದೆಂದು ಭಾವಿಸಿದ ಜಗದೇವ ಬ್ರಾಹ್ಮಣರಿಗೆ ಮೊದಲು ದಾಸೋಹವನ್ನು ನೀಡುತ್ತಾನೆ. ಇದನ್ನು ತನ್ನ ಜ್ಞಾನ ದೃಷ್ಟಿಯಿಂದ ತಿಳಿದ ಬಸವಣ್ಣ ಜಗದೇವನ ಮೇಲೆ ಕೋಪಗೊಂಡು ಈ ಅಪರಾಧಕ್ಕೆ ಪ್ರಾಯಶ್ಚಿತವಾಗಿ ಮುಂದೊಂದು ದಿನ ಶಿವದ್ರೋಹವಾಗುತ್ತದೆ ಆಗ ಆ ದ್ರೋಹಿಯನ್ನು ಕೊಂದು ಶಿವಧರ್ಮವನ್ನು ಕಾಪಾಡು ಎಂದು ಹೇಳುತ್ತಾನೆ. ಅಂತೆಯೇ ಹರಳಯ್ಯ-ಮಧುವರಸರ ಕಣ್ಣುಗಳನ್ನು ಕೀಳಿಸಿ ಆನೆಯ ಕಾಲುಗಳಿಂದ ಕಟ್ಟಿ ಎಳೆಯುವಂತಹ ಉಗ್ರ ಶಿಕ್ಷೆಯ ಮೂಲಕ ಅವರ ಸಾವಿಗೆ ಕಾರಣನಾಗುತ್ತಾನೆ ಬಿಜ್ಜಳ. ಹೀಗೆ ಮಹಾಪರಾಧ ಮಾಡಿದ ಬಿಜ್ಜಳನನ್ನು ಜಗದೇವ ದಂಡನಾಯಕ ಮಲ್ಲೆಬೊಮ್ಮಯ್ಯರ ಸಹಾಯದಿಂದ ಕೊಲೆಮಾಡುತ್ತಾನೆ.

ಮಲ್ಲೆಬೊಮ್ಮಯ್ಯ ಎಂಬ ಹೆಸರು ಒಬ್ಬರನ್ನು ಸೂಚಿಸುತ್ತದೆಯೋ ಅಥವಾ ಇಬ್ಬರನ್ನು ಸೂಚಿಸುತ್ತದೆಯೋ ಎಂಬ ಗೊಂದಲ ಸಾಹಿತ್ಯ ಚರಿತ್ರಕಾರರಲ್ಲಿ ಈಗಲೂ ಉಳಿದಿದೆ. ಈ ಗೊಂದಲಕ್ಕೆ ಕಾರಣ ತೆಲುಗು ಬಸವಪುರಾಣದಲ್ಲಿ "ಮಲ್ಲಬ್ರಹ್ಮಯ್ಯನೆಂಬತಿ ವೀರಭಕ್ತಿ"ಯು ಶಿವದ್ರೋಹದ ವಾರ್ತೆಯ ಕೇಳಿ ಅರ್ಧರಾತ್ರಿಯಲ್ಲಿ "ಬೇಗಬೇಗ್ಯೆತಂದಾ" ಸರಿ ಹೊತ್ತಿನಲಿ ಎಂದು ಏಕವಚನ ರೂಪದಲ್ಲಿ ಹೇಳಲಾಗಿದೆ. ಕನ್ನಡ 'ಬಸವಪುರಾಣ'ದಲ್ಲಿ "ಲಿಂಗವಂತರು ಮೊಲ್ಲ ಬೊಮ್ಮಯ್ಯಂಗಳೆ" ಎಂಬುವರು ಶಿವದ್ರೋಹವಾರ್ತೆಯ ಕೇಳಿ "ಜಗದೇವನಲ್ಲಿಗೆ ಬಂದೊಂದಾಗಿ ತಾವು" ಎಂಬ ಬಹುವಚನ ರೂಪವಿರುವುದರಿಂದ ಮೊಲ್ಲೆ ಬೊಮ್ಮಯ್ಯರ ವಿಚಾರವಾಗಿ ಒಬ್ಬರೇ, ಇಬ್ಬರೇ ಎಂಬ ಗೊಂದಲ ಸೃಷ್ಟಿಯಾಗಿದೆ. ಮುಂದೆ ಕನ್ನಡ 'ಬಸವಪುರಾಣ'ದಲ್ಲಿ ಇದಕ್ಕೆ ಸ್ಪಷ್ಟತೆಯನ್ನು ನೀಡಲಾಗಿದೆ. ಮುಂದಿನ ಪದ್ಯದಲ್ಲಿ ವೀರಾವತರಿಗಳಾಗಿ ವೀರಭದ್ರಾದಿ ಪ್ರಮಥವರರ ಭಾವದಲ್ಲಿ ನೆನೆದುಗ್ರಕೈದುಗಳೋವಿ 'ಮೂವರು' ತಮತಮಗೆ ಪರಿದಾ ಎಂದು ಸ್ಪಷ್ಟವಾಗಿ ಮೂವರು ಎಂಬುದನ್ನು ಭೀಮಕವಿ ದೇಳಿದ್ದಾನೆ.

ಹೀಗೆ ಮೂವರು ಒಂದಾಗಿ ಜಗದೇವನ ತಾಯಿಯ ಆಶೀರ್ವಾದ ಪಡೆದು ಬಿಜ್ಜಳನ ಅರಮನೆಗೆ ಹೊರಡುತ್ತಾರೆ. ಈ ಸಂದರ್ಭವನ್ನು ಪಾಲ್ಕುರಿಕೆ ಸೋಮನಾಥ ಸಂಕ್ಷಿಪ್ತವಾಗಿ ವಿವರಿಸಿದ್ದಾನೆ. ಅಂದರೆ ನೇರವಾಗಿ ಈ ಮೂವರು ಬಿಜ್ಜಳನನ್ನು ಕತ್ತಿಯಿಂದ ಹಿರಿದು. ಹೊಡೆಯುತ್ತಾ ಜರ್ಜರಿತನನ್ನಾಗಿ ಮಾಡುತ್ತಾರೆ. ನಂತರ ಅವನ ತಲೆಯನ್ನು ಕೊಯ್ದು ಈ ನರಾಧಮನನ್ನು ಕೊಂದೆವು ಎಂದು ಕೂಗುತ್ತಾರೆ. ಲಿಂಗಭಕ್ತರಿಗೆದುರಾರಿಲ್ಲವೆನುತ "ಬಿಜ್ಜಳನ ತಲೆಗೊಂಡ ಗಂಡಾ" ಎಂದು ಕೂಗುತ್ತಾರೆಂದು ಸೋಮನಾಥ ಹೇಳುವನು. ನಂತರ ಶಿವದ್ರೋಹ ಮಾಡಿದ ಬಿಜ್ಜಳನನ್ನು ತಕ್ಷಣವೇ ಕೊಲ್ಲದೆ ತಡಮಾಡಿದೆನಲ್ಲಾ ಎಂದು ವ್ಯಥೆಪಡುತ್ತಾ ಜಗದೇವ ತನ್ನ ಶಿರವನ್ನು ಕತ್ತರಿಸಿಕೊಂಡು ಕೈಲಾಸಕ್ಕೆ ಹೊಗುತ್ತಾನೆ ಎಂದಿದೆ. ಕನ್ನಡ 'ಬಸವಪುರಾಣ'ದಲ್ಲಿ ಈ ಶಿವದ್ರೋಹಿಯ ಕೊಲೆಯ ಚಿತ್ರಣವನ್ನು ಅತ್ಯಂತ ಭೀಭತ್ಸವಾಗಿ ಚಿತ್ರಸಲಾಗಿದೆ.

ಮೊಲ್ಲೆಬೊಮ್ಮಯ್ಯ ಮತ್ತು ಜಗದೇವರು ಬಿಜ್ಜಳನನ್ನು ಕೊಲ್ಲಲು ಹೊರಟಾಗ ದೇವವಸ್ತ್ರವನುಟ್ಟು, ಭಸ್ಮಾಂಗ ವಿಭೂಷಣರಾಗಿ ಬರುವಾಗ ದಾರಿಯಲ್ಲಿ ಆನೆಗಳು, ಮಾವುತರು, ತುರಗಗಳು, ಜನರು ಎಲ್ಲರೂ ದಾರಿಯನ್ನು ಬಿಡುತ್ತಾ ಪಕ್ಕಕ್ಕೆ ಸರಿಯುತ್ತಿರಲು ಧೀರರಾದ ಇವರು ಅತ್ಯುಗ್ರ ಕೋಪದಿಂದ ನಡೆಯುತ್ತಿದ್ದರು. ಇವರ ವೀರತ್ವವನ್ನು ಭೀಮಕವಿ ಹೀಗೆ ಹೇಳುತ್ತಾನೆ.

"ಹರಿಗೆಗಳ ಅಡ್ಡಾಯುಧಂಗಳ
ಕರದ ಕರವಾಳುಗಳ ಬಿಲುಗಳ
ಸರಳ ಹೆದೆಗಳ ಸಬಳಾಗಳ ಈಟಿಗಳ ಕೋಲುಗಳ
ಸುರಿಗೆಗಳ ಶೂಲಾಯುಧಂಗಳ
ಪರಿಪರಿಯ ಕೈದುಗಳ ಪಿಡಿಪಿಡಿ
ದುರವಣಿಯ ಸಂದಣಿಯ ಪರಿವಾರಂಗಳನ್ನುಳುಹಿ"

(ಎಸ್. ವಿದ್ಯಾಶಂಕರ(ಸಂ), ಬ.ಪು.ಸಂ.೬೦.ಪದ್ಯ.೨೫)

ಹೀಗೆ ಹಲವು ಅಸ್ತ್ರಗಳನ್ನಿಡಿದು ವಿವಿಧ ವೇಷಭೂಷಣಗಳನ್ನು ತೊಟ್ಟು ರೋಷದಿಂದ ರಾಜಮಂದಿರಕ್ಕೆ ಹೊಗುತ್ತಾರೆ. ಗದ್ದುಗೆಯ ಮೇಲಿದ್ದ ಬಿಜ್ಜಳನನ್ನು ಕಂಡು ಶರವೇಗದಲ್ಲಿ ಬಂದು ಅವನನ್ನೆಳೆದು ಕೆಳಗೆ ಕೆಡವಿ ಆಯುಧಗಳಿಂದ ಗಾಯಗೊಳಿಸಿದರು. ಮೇಲೆ ಮೇಲೆ ಹಾರುತ್ತ ಬಿಜ್ಜಳನ ಶರೀರಕ್ಕೆ ಆಯುಧಗಳಿಂದ ಚುಚ್ಚಿದರು. ಕೂಗುತ್ತಾ, ಬೊಬ್ಬಿಡುತ್ತಾ, ವೀರಭಕ್ತರಿಗಿದಿರು ಮಲೆವವರು ಯಾರು? ಎನ್ನುತ್ತಾ ಗಹಗಹಿಸಿ ನಗುತ್ತಿದ್ದರು. ಕಠಾರಿಗಳನ್ನು ತಿರುಗಿಸುತ್ತಾ, ಮೇಲೆ ಕುಣಿಸುತ್ತಾ ಕುಣಿಯತೊಡಗಿದರು. ಬಿಜ್ಜಳನ ತಲೆಯನ್ನು ಕತ್ತರಿಸಿ 'ಬಿಜ್ಜಳನ ತಲೆಗೊಂಡಗೊಂಡಾ' ಎಂಬ ಪರಿಪೂರ್ಣತೆ ಭೂಮಿಯಲ್ಲಿ ಹರಡುವಂತೆ ಮಾಡಿದರು. ಹೀಗೆ ಭೀಮಕವಿ ಜಗದೇವನ ಮತ್ತು ಅವನ ಸಹಚರರ ವೀರಾವೇಶ ಆ ಮೂಲಕ ಅವರ ಶಿವಭಕ್ತಿಯ ಸಮರ್ಪಣೆಯ ಸನ್ನಿವೇಷವನ್ನು ಚಿತ್ರಿಸಿದ್ದಾನೆ.

**೩.೩. ಧರ್ಮನಿಷ್ಠಭಕ್ತಿಯ ಶರಣರು :**

ಕನ್ನಡ ಮತ್ತು ತೆಲುಗು 'ಬಸವಪರಾಣ'ಗಳಲ್ಲಿ ಮುಗ್ಧಭಕ್ತರು ಮತ್ತು ಉಗ್ರಭಕ್ತರಿರುವಂತೆ ಧರ್ಮನಿಷ್ಠ ಭಕ್ತರೂ ಇದ್ದಾರೆ. ಧರ್ಮನಿಷ್ಟ ಭಕ್ತರು ಎಂದರೆ ತಮ್ಮ ಧರ್ಮವನ್ನು ಅತಿಯಾಗಿ ಪ್ರೀತಿಸುವ, ಮೋಹಿಸುವ, ತಮ್ಮ ಧರ್ಮವೇ ಶ್ರೇಷ್ಠ ಉಳಿದ ಧರ್ಮಗಳು ಕನಿಷ್ಟ ಎಂಬ ಧೋರಣೆಯುಳ್ಳ ಭಕ್ತ ಸಮೂಹವನ್ನು ಧರ್ಮನಿಷ್ಠ ಭಕ್ತರು ಎಂದು ಸಾಮಾನ್ಯವಾಗಿ ಅರ್ಥೈಸಬಹುದು. ಈ ರೀತಿಯ ಗುಣಗಳುಳ್ಳ ಭಕ್ತರು ತಮ್ಮ ಧರ್ಮದ ಶ್ರೇಷ್ಠತೆಯನ್ನು ಕಾಪಾಡುವ ಸಲುವಾಗಿ ಜೀವವನ್ನು ಅರ್ಪಿಸಲೂ ಹಿಂದೆ ಸರಿಯುವುದಿಲ್ಲ. ಜೈನಬೌದ್ಧಾದಿ ಧರ್ಮಗಳ ವಿರುದ್ಧ ಅತ್ಯಂತ ಕಠಿಣವಾಗಿ ನಡೆದುಕೊಳ್ಳುವ ಈ ಭಕ್ತರ ಉದ್ದೇಶ ಅನ್ಯಧರ್ಮದವರನ್ನು ತಮ್ಮ ಧರ್ಮಕ್ಕೆ ಸೆಳೆಯುವುದಾಗಿತ್ತು. ವೀರಶೈವ ಧರ್ಮವನ್ನು ಪ್ರೀತಿಸುವಂತೆ ಆ ಧರ್ಮವನ್ನು ಸ್ವೀಕರಿಸುವಂತೆ

ಮಾಡಲಾಗುತ್ತಿತ್ತು. ಇದು ಕೂಡ ವೀರಶೈವ ಧರ್ಮವನ್ನು ಪ್ರಚಾರ ಮಾಡಲು ಮತ್ತು ಬೆಳೆಸಲು ಭಕ್ತರು ತೋರುವ ಹೊಸ ಮಾರ್ಗದ ವಿಧಾನ. ಈ ಮೂಲಕ ಶಿವನಿಗೆ ತಮ್ಮ ಭಕ್ತಿಯನ್ನು ಅರ್ಪಿಸುತ್ತಿದ್ದರು. ಜೊತೆಗೆ ಶಿವಧರ್ಮದ ರಕ್ಷಣೆಗೆ ನಿಲ್ಲುವುದು ಇವರ ಮುಖ್ಯ ಕಾಯಕವಗಿತ್ತು. ಇಂತಹ ಶಿವಭಕ್ತರ ಕಥೆಗಳನ್ನು ಕವಿಗಳು ಚಿತ್ರಿಸಿದ ಮುಖ್ಯ ಉದ್ದೇಶ ಜೈನ, ಬೌದ್ಧ, ವೈಷ್ಣವ ಮುಂತಾದ ಧರ್ಮದವರಿಗೆ ವೀರಶೈವ ಧರ್ಮದ ಮಹತ್ವವನ್ನು ತಿಳಿಸುವುದು. ಆ ಮೂಲಕ ತಮ್ಮ ಧರ್ಮದೆಡೆಗೆ ಅವರನ್ನು ಸೆಳೆಯುವುದಾಗಿತ್ತು. ಈ ಕಾಯಕ ಸಾಧನೆಗಾಗಿ ತಮ್ಮ ಪುರಾಣಗಳಲ್ಲಿ ಇಂತಹ ಮಹಾನ್ ಚರಿತ್ರೆಗಳನ್ನು ಚಿತ್ರಿಸಿ ಪ್ರಚಾರ ಮಾಡಿದ್ದಾರೆ. ಅಧ್ಯಯನದ ದೃಷ್ಟಿಯಿಂದ ಈ ಎರಡೂ ಪುರಾಣಗಳಲ್ಲಿ ಪ್ರಮುಖ ಧರ್ಮನಿಷ್ಠ ಭಕ್ತರನ್ನು ಆಯ್ದುಕೊಂಡು ವಿಶ್ಲೇಷಣೆಗೆ ಒಳಪಡಿಸುವ ಉದ್ದೇಶದಿಂದ ಕೆಳಗಿನ ಶರಣರನ್ನು ಆಯ್ದುಕೊಳ್ಳಲಾಗಿದೆ.

೧. ಏಕಾಂತ ರಾಮಯ್ಯ

೨. ತಿರುವಾಂಕರೀಶ

೩. ಇರುವದಂಡಾರಿ

೪. ಪಿಳ್ಳೆನೈನಾರ

೫. ನಮಿನಂದಿ

೬. ಸೊಡ್ಡಳ ಬಾಚರಸ

**೧. ಏಕಾಂತ ರಾಮಯ್ಯ :**

ವಸುಮತಿಯೊಳಗೆ ಮೆರೆಯುವ ಅಬ್ಬಲೂರು ಎಂಬ ಪಟ್ಟಣದಲ್ಲಿರುವ ಶಿವ ಸಮಯ ಪರಿಪಾಲನೂ, ಲಿಂಗಸಮ್ಯಜ್ಞಾನಿಯೂ, ಧೀರಮಹೋಭಾರ ಶೂರಗಂಭೀರನೂ, ಜೈನ ಸಮಯ ಕೋಲಾಹಲನೂ ಆದ ಏಕಾಂತ ರಾಮಯ್ಯನೆಂಬ ಅತ್ಯಂತ ಧರ್ಮನಿಷ್ಠ ಭಕ್ತನೊಬ್ಬನಿದ್ದನು. ಬಸವಣ್ಣನ ಭಕ್ತಿ ದೆಸೆದೆಸೆಗೆ ಹಬ್ಬಿ ಅವನ ಕೀರ್ತಿ ಸಮುದ್ರದಂತೆ ಹರಿಯುತ್ತಿರುವುದನ್ನು ತಿಳಿದ ರಾಮಯ್ಯನು ಬಸವಣ್ಣನ ದರ್ಶನ ಪಡೆಯಲು ಬರುತ್ತಾನೆ. ಬಸವಣ್ಣನ ಕೀರ್ತಿಯನ್ನು ತನ್ನ ಪ್ರಚ್ಛನ್ನಯುಕ್ತಿಯಿಂದ ನೋಡಿ ಸಂತಸಗೊಳ್ಳುತ್ತಾನೆ.

ಬಸವಣ್ಣನ ವೀರಶೈವ ನಿಷ್ಠೆಯನ್ನು ನೆನೆಯುತ್ತಾ ಹಿಂದಿರುಗಿ ಶಿವಾಲಯದಲ್ಲಿ ತಂಗಿರುತ್ತಾನೆ. ಜೈನನೊಬ್ಬನು ಚಪ್ಪಲಿ ಕಾಲಿನಿಂದ ಶಿವಾಲಯ ಪ್ರವೇಶಿಸುವುದನ್ನು ಕಂಡು ಅವನನ್ನು ತಡೆದು ಕೋಪದಿಂದ

ಈ ಪಾಪಮುನ ಕಂಕ ನೇಗುಜೆಗಲದು
ರೋರಿ ಜೈನುಂಡ ತಗ ದುಡುರಾಜಧರುನ
ಗಾರಾಂತರಮುಂ ಜೆಪ್ಪುಂಗಾಳ್ಗಂ ಜೋರಂಗಂ

గడవం జొచ్చితినని మృడనకుం జాంగం
బడి మ్రొక్కు చెప్పులు వాఱింగ వ్యెచి

(గూ.వెం.సు.(సం), బ.పు., ష.ఆ.సా.೩೬-೪೦)

(ಈ ಪಾಪಕ್ಕೆ ಬೇರೆಯಾವ ಶಿಕ್ಷೆಯಿರುವುದು. ಎಲವೋ ಜೈನನೆ ಉಡುರಾಜಧರನಂದ ಶಿವಾಲಯಕ್ಕೆ ಚಪ್ಪಲಿ ಕಾಲಿನಲ್ಲಿ ಬಂದಿರುವೆ ಎಂದು ಮೃಡನಿಗೆ ಉದ್ದಂಡ ನಮಸ್ಕಾರ ಮಾಡಿ ಚಪ್ಪಲಿಗಳನ್ನು ಬಿಟ್ಟು ಬಾ)

ಎಂದು ಹೇಳುತ್ತಾನೆ. ಆದರೆ ಆ ಜೈನನು ಏಕಾಂತ ರಾಮಯ್ಯನ ಮಾತನ್ನು ಧಿಃಕ್ಕರಿಸುತ್ತಾ ಪ್ರತಿವಾದ ಮಾಡುತ್ತಾನೆ. ಅಯ್ಯಾ ಭಕ್ತನೆ ಸುಮ್ಮನೇಕೆ ಆಗ್ರಹಿಸುತ್ತಿರುವೆ, ಇದು ಜಿನನು ವಾಸಿಸುವ ಬಸದಿ ಇಲ್ಲಿರುವವನು ಜಿನನೇ ಎನ್ನುತ್ತಾ ಇದು ಅಲ್ಲವೆಂದರೆ, ನಿಮ್ಮ ಶಿವನೇ ಇರುವುದೆನ್ನುವುದಾದರೆ ನಿನ್ನ ತಲೆಯನ್ನು ಕತ್ತರಿಸಿಕೊಂಡು ಮತ್ತೆ ಪಡೆಯುವುದಾದರೆ ನಾನು ಒಪ್ಪುತ್ತೇನೆಂದು ಸವಾಲು ಹಾಕುತ್ತಾನೆ. ಈ ಮಾತು ಕೇಳಿ ಮತ್ತಷ್ಟು ಕೋಪಗೊಂಡ ಏಕಾಂತ ರಾಮಯ್ಯ ಇವನನ್ನು ಕ್ಷಣಮಾತ್ರದಲ್ಲಿ ಕೊಂದುಬಿಡಬಹುದು, ಆದರೆ ಇವನಿಗೆ ಶಿವನ ನಿಜವಾದ ರೂಪವನ್ನು ತೋರಿಸಲು ಆಗುವುದಿಲ್ಲ. ಹಾಗಾಗಿ 'ಶಿರವಿತ್ತು ಪಡೆಯುವೆನು ಜಿನಸಮಯದ ಶಿರವ ಕಡಿದು ಭಾಷೆ ಸಲಿಸುವೆ' ಎನ್ನುತ್ತಾ ಯೋಚಿಸಿ ಹಿಂದೆ ತನ್ನಂತೆಯೇ ಧರ್ಮ ರಕ್ಷಣೆಗಾಗಿ ತಮ್ಮನ್ನು ಅರ್ಪಿಸಿಕೊಂಡ ಅನೇಕ ಶರಣರ ಕಥೆಗಳನ್ನು ಆ ಜೈನನಿಗೆ ಹೇಳುತ್ತಾನೆ. ಅದಾವುದೂ ಅವನ ಕಿವಿಗೆ ಹೋಗುವುದಿಲ್ಲ. ಇನ್ನು ತನ್ನ ಶಿರವನ್ನು ಕತ್ತರಿಸಿಕೊಳ್ಳಲು ಮುಂದಾಗುತ್ತಾನೆ. ಎಲವೋ ಜೈನ ಈಗಲೇ ನಾನು ಶಿರವನ್ನು ಕಡಿದು ಏಳು ದಿನಗಳು ಈ ಪುರದ ಬೀದಿಯಲ್ಲಿ ಮೆರವಣಿಗೆ ಮಾಡಿ ಮತ್ತೆ ಪಡೆಯುತ್ತೇನೆ. ಆಗ ಬಸದಿಗಳೆಲ್ಲಾ ಹಾಳಾಗಿ ಜಿನಪ್ರತಿಮೆಗಳೆಲ್ಲಾ ಚೂರಾಗುವುವು. ಇದು ನನ್ನ ಭಾಷೆ ಎನ್ನಲು ಅದಕ್ಕೆ ಅಲ್ಲಿ ನೆರೆದಿದ್ದವರೆಲ್ಲ ಒಪ್ಪುತ್ತಾರೆ. ಒಂದೆಡೆಗೆ ಜಿನಮತಸ್ತರು ಮತ್ತೊಂದೆಡೆ ಬಸವನ ಸಹಿತ ಭಕ್ತ ನಿಕಾಯವೂ ಕೂಡಿರುತ್ತದೆ. ಅಂಕಕಾರವ ರೀತಿ ಕಚ್ಚೆಯನು ಕಟ್ಟಿ ನೆರೆದ ಭಕ್ತರಿಗೆಲ್ಲ ಕೈಮುಗಿದು

ದರಹಸಿತಸಿತ ಕಾಂತಿಮುಖ ಪಂ
ಕರುಹದೊಳು ತುಳುಕಾಡೆ ಮಾಹೇ
ಶ್ವರನಿಕಾಯಕೆ ನಮಿಸಿ ಬೊಟ್ಟಿಟ್ಟೊಲ್ದು ಶರಣೆಂದು
ಉರವಣಿಸಿ ಕೂರಲಗುಮಂ ಕಂ
ಧರದೊಳೊಂದಿಸಿಯೊಂದು ಕೈಯಲಿ
ಶಿರದ ಮುಡಿಯಂ ಪಿಡಿದು ಮುನಿಯಲುದಗ್ರ ವೃತ್ತಿಯಲಿ

(ಎಸ್. ವಿದ್ಯಾಶಂಕರ(ಸಂ),ಬ.ಪು.,ಸಂ-೫೧,ಪು-೩೯)

ಹೀಗೆ ಕತ್ತರಿಸಿಕೊಂಡ ತಲೆಯನ್ನು ಏಳು ದಿನಗಳವರೆಗೆ ಪುರಬೀದಿಗಳಲ್ಲಿ ಮೆರವಣಿಗೆ ಮಾಡಿ ಮತ್ತೆ ಶಿರವನ್ನು ಮುನ್ನಿನಂತೆ ಪಡೆಯುತ್ತಾನೆ. ಶಿವನ ಸತ್ಯವನ್ನು ರಾಮಯ್ಯನ ನಿಷ್ಠೆಯನ್ನು ಕಂಡು ಜೈನರೆಲ್ಲರೂ ರಾಮಯ್ಯನಿಗೆ ವಂದಿಸುತ್ತಾರೆ. ಮುನ್ನಿನ ಭಾಷೆಯಂತೆ ಜಿನಾಲಯಗಳನ್ನೆಲ್ಲಾ ಕೆಡವಿ ನಾಶ ಮಾಡುತ್ತಾರೆ. ಜಿನಮೂರ್ತಿಗಳನ್ನು ಒಡೆದು ಚೂರು ಮಾಡುತ್ತಾರೆ. ಹೀಗೆ ಏಕಾಂತರಾಮಯ್ಯ ಜಿನಸಮಯವನ್ನು ನಾಶಮಾಡಿ ಶಿವಸಮಯವನ್ನು ಬೆಳಗಿಸಿದ ಧರ್ಮನಿಷ್ಠ ಭಕ್ತಿಯ ಕಥೆಯು ಕನ್ನಡ–ತೆಲುಗು 'ಬಸವಪುರಾಣ'ಗಳಲ್ಲಿ ಚಿತ್ರಣಗೊಂಡಿದೆ.

**೨. ತಿರುವಾಂಕರೀಶ :**

ತಿರುನಾವಲೂರು ಎಂಬ ಊರಿನಲ್ಲಿನ ಜೈನ ಗುರುವಾದ ತಿರುವಾಂಕರೀಶನು ಜೈನಾಚಾರ್ಯನು ಜಿನಸಮಯ ಮುಖ್ಯನೂ ಆಗಿದ್ದನು. ಇವನಿಗೆ ಭಯಂಕರಾದ ಶೂಲೆ(ಕಾಯಿಲೆ)ಯು ಬಾಧಿಸುತಿತ್ತು. ಇದರ ನೋವಿನಿಂದ ಪ್ರತಿದಿನವೂ ಸಂಕಟದಿಂದ ಭೂಮಿಯ ಮೇಲೆ ಬೀಳುತ್ತೇಳುತ್ತಾ, ಹೊರಳುತ್ತಾ ನರಳುತ್ತಿದ್ದನು. ಇಂತಹ ಸಮಯದಲ್ಲಿ ಅವನ ತಂಗಿಯು ಬಂದು ಇದೊಂದು ವಾಯುರೋಗ ತಂತ್ರ ಮಂತ್ರಗಳಿಗಿದು ವಾಸಿಯಾಗುವುದಿಲ್ಲ. ನೀನು ಶಿವಭಕ್ತಿ ಮಾರ್ಗದಲ್ಲಿ ನಡೆದು ಶೂಲಿ ಮಂತ್ರವನ್ನು ತಿಳಿದೆಯಾದರೆ ನಿನಗೆ ಆ ರೋಗ ವಾಸಿಯಾಗುತ್ತದೆ. ಜೊತೆಗೆ ನಿನ್ನ ಇಷ್ಟಾರ್ಥಗಳು ನೆರವೇರುತ್ತವೆ ಎಂದು ಹೇಳುತ್ತಾಳೆ. ಒಡನೆ ಒಪ್ಪಿದ ತಿರುವಾಂಕರೀಶ 'ಶಿವಭಕ್ತನಾಗುವೆನಿನ್ನು ಅನುಮಾನವೊಂದಿಷ್ಟು ಪಡೆಯದಿರು' ಎನ್ನುತ್ತಾ ಶಪಥ ಮಾಡುತ್ತಾನೆ. ಅಂತೆಯೇ ಅವನ ಹೆಂಡತಿ ಪಂಚಾಕ್ಷರಿ ಮಂತ್ರದಿಂದ ಭಸಿತವನ್ನು ಮಂತ್ರಿಸಿ ಹಣೆಗೆ ಹಚ್ಚುವಳು. ಕ್ಷಣಮಾತ್ರದಲ್ಲಿ ಶೂಲೆ ರೋಗವು ವಾಸಿಯಾಗಲು ಸತಿಗೆ ಸಾಷ್ಟಾಂಗ ನಮಸ್ಕರಿಸಿ "ಸತಿ ನಿನ್ನ ಕತದಿಂದ ಬದುಕಿದೆನಿನ್ನು ನಿಷ್ಠೆಯಿಂ ಭಕ್ತನಾಗುವೆ" ಎನ್ನುವನು. ಒಡನೆಯೆ ಹೊಲಗೇರಿಗೆ ಹೋಗಿ ಶಿವದರ್ಶನ ಪಡೆದು ಸಾಷ್ಟಾಂಗವೆರಗಿ ಭಕ್ತಿಯಿಂದ ಪೂಜಿಸುತ್ತಾನೆ. ಜೈನಗುರುವಾದ ತಿರುವಾಂಕರೀಶನು ಈ ರೀತಿ ಶಿವನನ್ನು ಪೂಜಿಸುವುದನ್ನು ಕಂಡ ಜೈನರು "ಅನ್ಯದರ್ಶನ ಮಾರ್ಗನಿವನಾದ" ಎನ್ನುತ್ತಾ ಎಲ್ಲರು ಅವನನ್ನು ಕೊಲ್ಲಲೆಂದು ಆನೆಯ ಬಳಿಗೆ ನೂಕಿದರು; ಆನೆ ಅವನನ್ನು ಏನೂ ಮಾಡಲಿಲ್ಲ. ವಿಷವನ್ನು ಕುಡಿಸಿದರು; ಆದರೂ ಸಾಯಲಿಲ್ಲ. ಕಾರಣ ವಿಷ ಸಂಹರನಾದ ಈಶ್ವರನ ಭಂಟನಾಗಿದ್ದರಿಂದ ಏನಾದರೂ ಮಾಡಿ ತಿರುವಾಂಕರೀಶನನ್ನು ಸಾಯಿಸಲು ಬೇರೆ ಬೇರೆ ಪ್ರಯತ್ನಗಳನ್ನು ಮಾಡುತ್ತಾರೆ ಆದರೆ ಎಷ್ಟು ಪ್ರಯತ್ನಿಸಿದರೂ ತಿರುವಾಂಕರೀಶ ಸಾಯದಿರುವುದನ್ನು ಕಂಡು ಜೈನರೆಲ್ಲರೂ ಶರಣಾಗಿ ಬರುತ್ತಾರೆ. ಪ್ರೀತಿಯಿಂದ ಅವರನ್ನು ಸ್ವಾಗತಿಸಿ ಮೊದಲು ಧರಿಸಿದ್ದ ಜಿನನ ಲಾಂಛನಗಳನ್ನು ತೆಗಿಯಿಸಿ, ರುದ್ರಾಕ್ಷಿ ಭಸಿತವನ್ನು ಪೂಸಿದನು. ರೌದ್ರಾವತಾರಿಯಾದ ತಿರುವಾಂಕರೀಶನು ಜೈನ ಪ್ರತಿಮೆಗಳನ್ನು ತೆಗೆದೆಸೆಯುತ್ತ ಬಸದಿಗಳನ್ನು ಪುಡಿಮಾಡುತ್ತಾ ಧ್ವಂಸ ಮಾಡುತ್ತಾನೆ. ಹೀಗೆ ಶಿವಭಕ್ತನಾಗಿ ಶಿವಧರ್ಮವನ್ನು ಸ್ವೀಕರಿಸಿ ಆ ಧರ್ಮಕ್ಕೆ ಅಧೀನನಾದ ತಿರುವಾಂಕರೀಶನ ಭಕ್ತಿ ಚಿತ್ರಣ ಎರಡೂ ಬಸವಪುರಾಣಗಳಲ್ಲಿ ವಿಶಿಷ್ಟವಾಗಿ ಚಿತ್ರಣಗೊಂಡಿದೆ.

### ೩. ಇರುತ್ತಾಂಡಿ :

ತಿರುವಾಂಕರೀಶನು ವಾಸಿಸುತ್ತಿದ್ದ ತಿರುವಾಲೂರಿನಲ್ಲಿಯೇ ಇರುತ್ತಾಂಡಿ ಎಂಬ ಶಿವಭಕ್ತನಿದ್ದನು. ಇವನು ಹುಟ್ಟು ಕುರುಡನಾಗಿರುತ್ತಾನೆ. ಶಿವಾಲಯದಲ್ಲಿರುವ, ಶಿವನ ಮೂರ್ತಿಗೆ ಮಜ್ಜನ ಮಾಡಲು ನೀರಿಗಾಗಿ ತಾನೇ ಒಂದು ಬಾವಿಯನ್ನು ತೋಡಲು ನಿರ್ಧರಿಸುತ್ತಾನೆ. ದೇವಾಲಯದ ಮುಂದೆ ಗುದ್ದಲಿಯಿಂದ ಅಗೆಯುತ್ತಾ ಕುರುಹಿಗಾಗಿ ಎರಡು ಕಂಬಗಳನ್ನು ದೇವಾಲಯದಿಂದ ಬಾವಿಯ ಮಧ್ಯೆ ನೆಡುತ್ತಾನೆ. ಈ ಕಾರ್ಯವನ್ನು ನೋಡಿ ಸಹಿಸದ ದ್ರೋಹಿಗಳು ಹಲವು ರೀತಿಯಲ್ಲಿ ವಿಘ್ನಗಳನ್ನು ಮಾಡುತ್ತಾರೆ. ಆದರೂ ಹೆದರದೆ ಎಂದಿನ ರೀತಿಯಲ್ಲಿ ಅಗೆಯುತ್ತಿರುತ್ತಾನೆ. ಆದರೂ ಮತ್ತೆ ಕಿರುಕುಳ ನೀಡಿದ ದ್ರೋಹಿಗಳು ಕಟ್ಟಿರುವ ಹಗ್ಗವನ್ನು ಕಂಬಗಳನ್ನು ಕಿತ್ತು ಬಿಸಾಡುತ್ತಾರೆ. ಎಲ್ಲವನ್ನು ಸಹಿಸಿದ ಇರುತ್ತಾಂಡಿ ಉಗ್ರರೂಪವನ್ನು ತಾಳುತ್ತಾನೆ.

"ಮೃಡನ ಕೈಯಲು ಕಂಗಳಂ ತಾಂ
ಪಡೆದು ನಿಮಿಷದೊಳಾರುಹತರಂ
ಕಡುಗುರುಡರಂ ಮಾಡಿ ಬಸದಿಗಳಂ ಹಿರಿದು ಕೆಡಹಿ
ಘುಡುಘಡುಸಿ ತಜ್ಜಿನಪ್ರತಿಮೆಗಳ
ನೊಡೆಬಡಿದು ಭಕ್ತಿಯೊಳೆಸೆದನೀ
ಪೊಡವಿಯೊಳಿರಿತ್ತಾಂಡಿಯರ ಮಹಿಮೆಯನಜೆಯಿರಲ್ಲ"

(ಎಸ್. ವಿದ್ಯಾಶಂಕರ(ಸಂ), ಬ.ಪು.ಸಂ.೪೮.ಪದ್ಯ.೪೬)

ಹೀಗೆ ತನಗೆ ಕಷ್ಟಕೊಟ್ಟವರಿಗೆ ತಕ್ಕ ಶಿಕ್ಷೆಯನ್ನು ನೀಡಿ ತನ್ನ ಭಕ್ತಿಯನ್ನು ಕಾಪಾಡಿಕೊಳ್ಳುತ್ತಾನೆ. ಶಿವನಿಷ್ಠೆಯಲ್ಲಿ ತೊಡಗಿದ ಈ ಶಿವಭಕ್ತನಿಗೆ ಕಿರುಕುಳ ನೀಡಿದರೆ ಶಿವಭಕ್ತರು ಸಹಿಸುವುದಿಲ್ಲ ಎಂಬುದನ್ನು ಈ ಇರುತ್ತಾಂಡಿಯ ಕಥೆಯ ಮೂಲಕ ತೋರಿಸಲಾಗಿದೆ.

### ೪. ಪಿಳ್ಳೆನೈನಾರ :

ಶ್ರೀಕಾಳಿ ಎನ್ನುವ ಪುರದಲ್ಲಿ ವಾಸಿಸುತ್ತಿದ್ದ ಪಿಳ್ಳೈನೈನಾರು ಎಂಬ ಶಿವಭಕ್ತ ಅತ್ಯಂತ ಧರ್ಮನಿಷ್ಠ ಭಕ್ತಿವಂತನಾಗಿದ್ದನು. ಇವನು ಬಾಲಕನಿರುವಾಗಲೇ ಪಾರ್ವತಿ ದೇವಿಯ ಅನುಗ್ರಹವನ್ನು ಪಡೆದಿರುತ್ತಾನೆ. ಧರಣೀಶನಾದ ಕುಲೋತ್ತುಂಗ ಚೋಳನಿಗೆ ಶಿವದೀಕ್ಷೆ ನೀಡಿ ಶಿವಭಕ್ತನನ್ನಾಗಿ ಮಾಡಿರುತ್ತಾನೆ. ಕುಲೋತ್ತುಂಗ ಚೋಳನ ಓಲಗದಲ್ಲಿ ಬೌದ್ಧ ಗುರುವನ್ನು ವಾದದಲ್ಲಿ ಸೋಲಿಸಿ ಮತ್ತೆ ಇಂತಹ ಎರಡು ಸಹಸ್ರ ಬೌದ್ಧರನ್ನು ಶಿವಭಕ್ತಪರರನ್ನಾಗಿ ಮಾಡಿರುತ್ತಾನೆ. ತಿರುನಾವಲೂರೆಂಬ ಪುರಕ್ಕೆ ಬಂದು ಅಲ್ಲಿನ ಹದಿನೆಂಟು ಸಹಸ್ರ ಜೈನರೆಲ್ಲರನ್ನು ಸೋಲಿಸಿ ಅಲ್ಲಿ ಮಡಿದಿದ್ದ ಶೂದ್ರನಿಗೆ ಪ್ರಾಣವನ್ನು ನೀಡುತ್ತಾನೆ ಪಿಳ್ಳೈನೈನಾರನ ಈ ಕಾರ್ಯಗಳನ್ನು ನೋಡಿ ಸಹಿಸದ ಜೈನರು ಅವನು ವಾಸಿಸುತ್ತಿದ್ದ ಗುಡಿಸಿಲಿಗೆ ಬೆಂಕಿ ಹಚ್ಚುವುದೇ ಮುಂತಾಗಿ ಅನೇಕ ಹಿಂಸೆಗಳನ್ನು ನೀಡುತ್ತಾರೆ.

ಆದರೂ ಎಲ್ಲವನ್ನು ತನ್ನ ಭಕ್ತಿಯಿಂದ ಮುಕ್ತಿಗೊಳಿಸಿಕೊಂಡು ಜೈನರಿಗೆ ಬುದ್ಧಿಕಲಿಸುತ್ತಾನೆ. ಏನಾದರೂ ಮಾಡಿ ತಾವು ಗೆಲ್ಲಲೇಬೇಕೆಂಬ ಹಠದಿಂದ ನೈನಾರನಿಗೆ ಒಂದು ಸವಾಲನ್ನು ಹಾಕುತ್ತಾರೆ ಜೈನರು.

ಏನೆಂದರೆ ಜಿನಮಂತ್ರ ಲೇಖೆ ಮತ್ತು ಶಿವಮಂತ್ರ ಲೇಖೆ ಈ ಎರಡನ್ನು ಬೆಂಕಿಯಲ್ಲಿ ಹಾಕೋಣ. ಆ ಎರಡರಲ್ಲಿ ಯಾವುದು ಸುಡುವುದಿಲ್ಲವೋ ಆ ಧರ್ಮ ಗೆದ್ದಂತೆ ಎಂಬ ಜೈನರ ಮಾತಿಗೆ "ಹೊನ್ನೊಡನೊಂದು ನಾಯಿಯ ಹಲ್ಲ ತೂಗೆ ಚಿನ್ನವು ಮೂಳೆಯು ಸರಿಯಹುದೇನು? ಎಂದು ಪಿಳ್ಳೈನೈನಾರ ಗೇಲಿ ಮಾಡಿ ಎರಡೂ ಪತ್ರಗಳನ್ನು ಬೆಂಕಿಯಲ್ಲಿ ಹಾಕಿಸುತ್ತಾನೆ. ಬೆಂಕಿಯಲಿ ಹಾಕಿದ ತಕ್ಷಣ ಜೈನರ ಮಂತ್ರದ ಪತ್ರ ಸುರಸುರ ಕಮರಿ ಹೋಗುತ್ತದೆ. ಶಿವಮಂತ್ರ ಪತ್ರವು ಸರಸಿ ಜಲದಂತೆ ಮಿನುಗುತ್ತಿರುತ್ತದೆ. ಇಲ್ಲಿಯೂ ಸೋತ ಜೈನರು ಮತ್ತೊಂದು ಸವಾಲು ಹಾಕುತ್ತಾರೆ. ಎರಡೂ ಪತ್ರಗಳನ್ನು ಕಾವೇರಿ ನದಿಯಲ್ಲಿ ಹಾಕುವುದು, ನೀರಿನೊಂದಿಗೆ ಹೋಗುವ ಪತ್ರ ಸೋತಂತೆ, ನೀರಿಗೆ ಎದುರಾಗಿ ಬರುವ ಪತ್ರವು ಜಯಿಸಿದಂತೆ ಎಂಬ ನಿಯಮವನ್ನು ಹಾಕುತ್ತಾರೆ. ಅಂತೆಯೇ ಶಿವಮಂತ್ರ ಪತ್ರವು ನೀರಿಗೆದುರಾಗಿ ಬಂದು ಜಯಿಸುತ್ತದೆ. ಇಷ್ಟು ಮಹಿಮೆಗಳನ್ನು ತೋರಿದ ನೈನಾರನು ಅನ್ಯಮತಸ್ಥರನ್ನು ಹಿಂಸಿಸುವುದರಲ್ಲಿ ಹಿಂದೆ ಸರಿಯಲಿಲ್ಲ ಹದಿನೆಂಟು ಸಾವಿರ ಜೈನರನು ಹಿಡಿದು ಕಾದಿರುವ ಲೋಹದ ಶೂಲಗಳಲ್ಲಿ ಕ್ರಮವಾಗಿ ತಿರುಗಿಸುತ್ತಾ ಈ ಭೂಮಿಯಲ್ಲೆಲ್ಲ ಗೊತ್ತಾಗುವಂತೆ ಮಾಡುತ್ತಾನೆ.

ಹೀಗೆ ತನ್ನ ಧರ್ಮದ ರಕ್ಷಣೆಗಾಗಿ ಎಲ್ಲಾ ರೀತಿಯಿಂದಲೂ ಮಾನ, ಪ್ರಾಣವನ್ನು ಅರ್ಪಿಸಿದ ಪಿಳ್ಳೈನೈನಾರನ ಭಕ್ತಿಯು 'ಬಸವಪುರಾಣ'ಗಳಲ್ಲಿ ಅನಾವರಣಗೊಂಡಿದೆ.

**೫. ನಮಿನಂದಿ :**

ಚೆಲ್ಲತಿರುವಾಲೂರಿನಲ್ಲಿದ್ದ ನಮಿನಂದಿ ಎಂಬ ಒಬ್ಬನೇ ಒಬ್ಬ ಶಿವಭಕ್ತ ನಿತ್ಯವೂ ಪರಮೇಶ್ವರನಿಗೆ ಸಾವಿರ ದೀಪಗಳನ್ನು ತುಪ್ಪದಿಂದ ಬೆಳಗಿಸುವ ವ್ರತವನ್ನು ಮಾಡುತ್ತಿರುತ್ತಾನೆ. ನಮಿನಂದಿಯ ಈ ವ್ರತವನ್ನು ಭಂಗಗೊಳಿಸಿ ಅವನನ್ನು ಆ ಊರಿನಿಂದ ತೊಲಗಿಸಬೇಕೆಂಬ ಉದ್ದೇಶದಿಂದ ಈ ಊರಿನಲ್ಲಿ ಅವನಿಗೆ ಯಾರೂ ತುಪ್ಪವನ್ನು ನೀಡಕೂಡದು. ಆಗ ದೀಪಗಳನ್ನು ಬೆಳಗಿಸುವ ತನ್ನ ವ್ರತವನ್ನು ಮುಂದುವರೆಸಲಾಗದೆ ಈ ಊರು ತೊರೆಯುತ್ತಾನೆ ಎಂದು ಜೈನರೆಲ್ಲರೂ ಒಂದು ನಿರ್ಧಾರಕ್ಕೆ ಬರುತ್ತಾರೆ. ಅದರಂತೆ ಮರುದಿನ ಎಲ್ಲಿಯೂ ತುಪ್ಪ ಸಿಗದಿರಲು " ಪ್ರಾಣೇಶ ತುಪ್ಪವೆಲ್ಲಿಯೂ ಇಲ್ಲ, ಪ್ರಾಣವ ಬಿಡುವೆ ದೀಪಗಳಾರಿದಾಗ" ಎಂದು ಶಿವನಲ್ಲಿ ಬೇಡಿಕೊಳ್ಳುತ್ತಾನೆ. ಆಗ ಪರಮೇಶ್ವರನು ಪ್ರತ್ಯಕ್ಷನಾಗಿ ಚಿಂತಿಸಬೇಡ ಸಜ್ಜನಶೀಲನೆ ಬಾವಿಯಲ್ಲಿನ ನೀರಿನಿಂದಲೇ ನಿನ್ನ ವ್ರತವನ್ನು ಮುಂದುವರೆಸು ನೀರನ್ನು ಹಾಕಿ ದೀಪಗಳ ಬೆಳಗಿಸು. ನಿನಗೆ ಅನ್ಯಾಯ ಮಾಡಿದ ಜೈನರ ಪಶುಗಳು ಇಂದೇ ಸಾಯುತ್ತವೆ ಎಂದು ಹೇಳಿ ಪರಮೇಶ್ವರ ಮಾಯವಾಗುತ್ತಾನೆ. ಅಂದಿನಿಂದ ಆ ಬಾವಿ ನೀರಿನಿಂದಲೇ ಕೋಟಿ ದೀಪಗಳನ್ನು ಬೆಳಗಿಸುತ್ತಾನೆ ನಮಿನಂದಿ.

ಮರುದಿನ ಜೈನರ ಹಸುಗಳೆಲ್ಲ ಸತ್ತು ಹೋಗುತ್ತವೆ. ಇದರ ಮರ್ಮವರಿಯದ ಜೈನರು ದಿಕ್ಕುತೋಚದಂತಾಗುತ್ತಾರೆ. ನಮಿನಂದಿ ಕೋಟಿ ಕೋಟಿ ದೀಪಗಳನ್ನು ಬಾವಿಯ ನೀರಿನಿಂದ ಬೆಳಗಿಸುತ್ತಿದ್ದಾನೆ. ನಮ್ಮ ಹಸುಗಳು ಕದಲದೆ ಸತ್ತಿವೆ. ಆ ತಪಸ್ವಿಯು ನಾವು ತುಪ್ಪ ನೀಡದಿದ್ದಕ್ಕಾಗಿ ಶಪಿಸಿದನೇ ಎಂದುಕೊಳ್ಳುತ್ತಾ ನಮಿನಂದಿಯ ಬಳಿ ಬರುತ್ತಾರೆ. ನಮಿನಂದಿಯ ಉಜ್ವಲ ಭಕ್ತಿ ಮತ್ತು ಅವನ ಪ್ರಾಮಾಣಿಕ ಧರ್ಮನಿಷ್ಠತೆಗೆ ಮೆಚ್ಚಿ

"ಕರಯುಗಳವಂ ಮುಗಿದು ವಂದಿಸಿ
ಶರಣು ಶರಣಾಗೆನುತ ಕೀರ್ತಿಸೆ
ಸರಸಕರುಣಾದೃಷ್ಟಿಯಿಂದವೆ ನೋಡಿ ನಮಿನಂದಿ
ಧರಣಿಯೊಳು ಮಡಿದಿರ್ದ ಪಶುಗಳ
ಹರಣಮಂ ಕೊಟ್ಟಾರುಹತರಂ
ಪೊರೆಯನೇ ಶಿವದೀಕ್ಷೆಗಳನಿತ್ತೆಲೊ ಅಧಮಜೈನ"

(ಎಸ್. ವಿದ್ಯಾಶಂಕರ (ಸಂ), ಪು.ಸಂ.೪೯,ಪ-೬೧)

ಜೈನರು ತಾವು ಮಾಡಿದ ತಪ್ಪನ್ನು ಕ್ಷಮಿಸಬೇಕೆಂದು ಕೇಳಿದಾಗ ಅವರ ಪಶುಗಳನ್ನು ಬದುಕಿಸಿ ಅಲ್ಲಿನ ಜೈನರೆಲ್ಲರಿಗೂ ಶಿವದೀಕ್ಷೆ ನೀಡುತ್ತಾನೆ. ಹೀಗೆ ಶಿವಧರ್ಮವನ್ನು ಕಾಪಾಡುವುದರ ಜೊತೆಗೆ ಶಿವಧರ್ಮದ ಶ್ರೇಷ್ಠತೆಯನ್ನು ಈ ನಮಿನಂದಿಯ ಕಥೆಯ ಮೂಲಕ ಹೇಳಲಾಗಿದೆ.

**೬. ಸೊಡ್ಡಳ ಬಾಚರಸ :**

ಸೊಡ್ಡಳ ಬಾಚರಸನು ಅತ್ಯಂತ ಧರ್ಮನಿಷ್ಠ ಭಕ್ತಿಯನ್ನು ಮೈಗೂಡಿಸಿಕೊಂಡವನು. ಶಿವನನ್ನು ಬಿಟ್ಟರೆ ಮತ್ತಾವ ದೇವರನ್ನು ಕಣ್ಣೆತ್ತಿಯೂ ನೋಡದ ಅತ್ಯಂತ ನಿಶ್ಚಲ ಭಕ್ತಿಶೀಲನು. ಪಶುಪತಿಯೇ ಕರ್ತನು ಇತರ ದೈವಗಳು ಪಶುಗಳಿಗೆ ಸಮಾನ ಎಂದು ಮೂದಲಿಸುತ್ತ ಜಿನ ದೇವಾಲಯಗಳನ್ನು ವಿಷ್ಣುಮೂರ್ತಿಗಳನ್ನು ನಾಶಮಾಡುತ್ತಾ ಸರ್ವೇಶ್ವರನ ಭಕ್ತಿಯನ್ನು ಮೆರೆಸುತ್ತಿದ್ದನು. ಇವನು ಪ್ರತಿ ಶಿವರಾತ್ರಿಯಂದು ಸೋಮೇಶ್ವರನ ಸನ್ನಿದಾನಕ್ಕೆ ಹೋಗಿ ಜಾಗರಣೆ ಮಾಡಿಬರುವ ನೇಮವನ್ನು ಮಾಡುತ್ತಿರುತ್ತಾನೆ. ಒಮ್ಮೆ ಶಿವರಾತ್ರಿಯ ಜಾಗರಣೆಗೆ ಹೋಗಲು ಬಿಜ್ಜಳನು ಒಪ್ಪಿಗೆಯನ್ನು ಕೊಡದೆ ಕೆಲಸ ಸಾಕಷ್ಟಿದೆ ಎನ್ನುತ್ತಾ

"...ರಾಚ
ಯೂಳಿಗಂಬುನು ಭಕ್ತಿಯನುಗೂರ್ಚಿ ನಡವ
ಸೌರಾಷ್ಟ್ರಮುನ ಕೀವು ಸನುಮು ಗಾದೇನಿ
ಸೌರಾಷ್ಟ್ರನಾಥುಂಡು ಸನುದೇರ ನಿಮ್ಮು
ಶಿವರಾತ್ರಿ ಶಿವರಾತ್ರಿ ಸೇಯುಟ ಮಾನು
ತವಲಿ ಯೀಯೂಳಿಗಂಬು ದಪ್ಪಿಂಪರಾದು"

(ಗೂ.ವೆಂ.ಸು.(ಸಂ), ಬ.ಪು., ಷ.ಆ.ಸಾ.೨೫೮-೨೬೨)

(ರಾಜನ ಊಳಿಗ, ಭಕ್ತಿಯ ಜೊತೆಗೆ ಕೂಡಿ ನಡೆಯಬೇಕು ನೀನು ಸೌರಾಷ್ಟ್ರಕ್ಕೆ ಹೋಗುವುದು ಬೇಡ. ಸೌರಾಷ್ಟ್ರನಾಥನನು ಇಲ್ಲಿಗೆಯೇ ಕರೆಸಿಕೋ ಶಿವರಾತ್ರಿ ಗಿವರಾತ್ರಿ ಮಾಡುವುದನು ಬಿಡು. ತಪ್ಪಿಸುವಂತಿಲ್ಲ ಒಪ್ಪಿಕೊಂಡ ಊಳಿಗವನ್ನು)

ಎಂದು ಹೇಳಿದಾಗ ಸೋಮೇಶ್ವರನನ್ನು ತಾನಿದ್ದಲ್ಲಿಗೇ ಕರಿಸಿಕೊಂಡು ಬಿಜ್ಜಳನು ತಮಾಷೆಯಾಗಿ ಹೇಳಿದ್ದನ್ನು ನಿಜಮಾಡಿ ತೋರಿಸುತ್ತಾನೆ. ಮತ್ತೊಂದು ದಿವಸ ವಿಷ್ಣುವಿನ ದೇವಾಲಯದಲ್ಲಿ ನಡೆಯುವ ಪೂಜೆಗೆ ಬಿಜ್ಜಳ ಹೇಳಿ ಕಳಿಸಿದಾಗ, ನಾನು ಅನ್ಯ ದೇವರನ್ನು ನೋಡುವುದಿಲ್ಲ ಎಂದು ತಿಳಿಸುತ್ತಾನೆ. ಶಿವನೇ ಸರ್ವ ಕುಲಕ್ಕೆಲ್ಲ ದೇವರು ವಿಷ್ಣು ದೇವರಲ್ಲ ಎಂದು ಹೇಳುತ್ತಾನೆ. ಬಾಚರಸ ಬಿಜ್ಜಳನ ಕಟ್ಟಪ್ಪಣೆಯ ಮೇರೆಗೆ ವಿಷ್ಣುದೇವಾಲಯಕ್ಕೆ ಬಂದ ಬಾಚರಸನು ವಿಷ್ಣುವಿನ ಶಿಲಾ ಮೂರ್ತಿಯನ್ನು ಕೋಪದಿಂದ ನೋಡಲು ಆ ಪ್ರತಿಮೆ ಹೆದರಿ

"ಬಂದು ನೋಡಲು ಹೆದಱಿ ಮಿಗೆ ಜರಿಜರಿದು ಕರಗುತ್ತ
ಬೆಂದುದಾಗಳೆ ನೆರೆದ ತಾರ್ಕಿಕ
ವೃಂದವುಂ ಬಿಜ್ಜಳನು ತಲೆವಾ
ಗಿಂದುಮೌಳಿಯ ಶರಣ ಸೊಡ್ಡಳ ಬಾಚರಸ ನಗುತೆ"

(ಎಸ್. ವಿದ್ಯಾಶಂಕರ(ಸಂ), ಬ.ಪು.ಸಂ.೫೩, ಪ.೮೦)

ಬಾಚರಸನ ಈ ಮಹಿಮೆಯನ್ನು ನೋಡಿದ ಬಿಜ್ಜಳನಿಗೆ ತುಟಿಗಳು ಅದುರಿದವು. ಮೌನದಿಂದಲೆ ತಲೆ ತಗ್ಗಿಸುತ್ತಾನೆ. ಬಾಚರಸನ ಈ ದೇವನಿಷ್ಠೆ, ಅನ್ಯ ಧರ್ಮದ ವಿರೋಧ ಮುಂತಾದ ಅಂಶಗಳು ವೀರಶೈವ ಶರಣರ ಶಿವಧರ್ಮ ನೀತಿಯನ್ನು ತೋರಿಸುತ್ತವೆ.

ಹೀಗೆ ಮೇಲೆ ಉಲ್ಲೇಖಿಸಲ್ಪಟ್ಟ ಎಲ್ಲಾ ಶರಣರು ತಮ್ಮ ಧರ್ಮದ ಅನನ್ಯತೆಯನ್ನು ಸಾರಿದ್ದಾರೆ. ಧರ್ಮನಿಷ್ಠರಾಗಿ ಅನ್ಯದೈವವನ್ನು ವಿರೋಧಿಸುವ ಇಂತಹ ಶರಣರ ಭಕ್ತಿಯನ್ನು ಈ ಬಸವಪುರಾಣ ಕಾವ್ಯಗಳಲ್ಲಿ ಕಾಣಬಹುದು. ಬಸವಪುರಾಣ ಕಾವ್ಯಗಳು ಮುಗ್ಧಭಕ್ತರು, ಉಗ್ರಭಕ್ತರು, ಧರ್ಮನಿಷ್ಠ ಭಕ್ತರನ್ನು ಒಳಗೊಂಡು ವೀರಶೈವ ಧರ್ಮದ ಮಹತ್ವವನ್ನು ಸಾರುವಲ್ಲಿ ಪ್ರಮುಖ ಪಾತ್ರವಹಿಸಿವೆ. ಈ ಕಾರಣವಾಗಿ ಎರಡು ಪುರಾಣಗಳು ವೀರಶೈವ ಧರ್ಮದ ಮುಖ್ಯ ಶಿಖರಗಳಾಗಿವೆ ಎಂಬುದರಲ್ಲಿ ಎರಡು ಮಾತಿಲ್ಲ.

# ಅಧ್ಯಾಯ – ೪

# ಕನ್ನಡ–ತೆಲುಗು ‘ಬಸವಪುರಾಣ’ಗಳಲ್ಲಿನ ಪವಾಡಗಳ ಚಿತ್ರಣ

೪.೧. ಬಸವಣ್ಣನ ಪವಾಡಗಳು

೪.೨. ಇತರೆ ಶರಣರ ಪವಾಡಗಳು

# ಅಧ್ಯಾಯ – ನಾಲ್ಕು

# ಕನ್ನಡ–ತೆಲುಗು 'ಬಸವಪುರಾಣ'ಗಳಲ್ಲಿನ ಪವಾಡಗಳ ಚಿತ್ರಣ

'ಪವಾಡ' ಎಂದರೆ ದೈವಿಕ ಶಕ್ತಿ. ಜ್ಞಾನ ಬಲದಿಂದ ಅಸಾಮಾನ್ಯವಾದುದನ್ನು ಸಾಮಾನ್ಯ ಎಂಬಂತೆ ಪರಿಹರಿಸುವ, ಪರಿಹಾರಗಳನ್ನು ಕಂಡುಕೊಳ್ಳುವ ಒಂದು ಕ್ರಿಯೆ ಎಂದು ಸಾಮಾನ್ಯವಾಗಿ ಅರ್ಥೈಸಬಹುದು. "ಪವಾಡ ಎಂಬ ಶಬ್ದ 'ಪ್ರವಾದ' ಎಂಬ ಸಂಸ್ಕೃತ ಪದದಿಂದ ಬಂದಿದೆ. ಬಳಕೆಯ ಮಾತಿನಲ್ಲಿ ಪವಾಡವೆಂದರೆ ಒಂದು ಅದ್ಭುತ ಕ್ರಿಯೆ, ಲೌಖಿಕ ಶಕ್ತಿ, ನಿಸರ್ಗಕ್ಕೆ ವಿರುದ್ಧವಾದ ಪ್ರಕ್ರಿಯೆ. ಪ್ರಪಂಚದಲ್ಲಿ ಸಾಮಾನ್ಯ ಜನತೆಯ ದಿನನಿತ್ಯದ ಅನುಭವಕ್ಕಿಂತ ಬೇರೆಯಾದ ಸಂಗತಿ ಎಂದು ಕರೆಯುವುದುಂಟು." (ವ್ಹಿ. ಜಿ. ಪೂಜಾರ, ಪು.೭) ಪವಾಡವನ್ನು ಇಂಗ್ಲಿಷ್‌ನಲ್ಲಿ 'ಮಿರಾಕಲ್' ಎಂದು ಕರೆಯುವರು.

ಭಾರತವು ಧರ್ಮ ಪ್ರಧಾನವಾದ ದೇಶ. ಇಲ್ಲಿ ಹಲವು ಧರ್ಮಗಳ ಸಮುದಾಯಗಳು ತಮ್ಮ ಬದುಕನ್ನು ರೂಪಿಸಿಕೊಂಡು ಜೀವನ ನಡೆಸುತ್ತಿವೆ. ಹಲವು ಸಂಸ್ಕೃತಿಗಳು, ಹಲವು ಧರ್ಮಗಳು, ಇಂದು ನಮ್ಮ ನಡುವೆ ಬಹು ಹಿಂದಿನ ಕಾಲದಿಂದಲೂ ಜೊತೆಜೊತೆಯಾಗಿಯೇ ಬಂದಿವೆ. ಹೀಗೆ ಬೆಳೆದು ಬಂದ ಪ್ರತಿಯೊಂದು ಧರ್ಮದಲ್ಲಿ ಆ ಧರ್ಮಕ್ಕೆ ಸಂಬಂಧಿಸಿದ ಮಹಾಪುರುಷರು ಇದ್ದಾರೆ. ಇವರು ತಾವು ಜೀವಿಸುತ್ತಿದ್ದ ಸಂದರ್ಭದಲ್ಲಿ ತಮ್ಮ ಧರ್ಮ ಪ್ರತಿಪಾದನೆಗಾಗಿ ಹಾಗೂ ಉಳುವಿಗಾಗಿ ಮತ್ತು ಅದರ ಬೆಳವಣಿಗೆಯ ದೃಷ್ಠಿಯಿಂದ ಅನೇಕ ಮಹತ್ಕಾರ್ಯಗಳನ್ನು ಮಾಡುತ್ತಾ ಬಂದಿದ್ದಾರೆ. ಇಂತಹ ಮಹತ್ಕಾರ್ಯಗಳನ್ನು ಅದ್ಭುತ ಸೃಷ್ಠಿ ಅಥವಾ ಪವಾಡ ಸದೃಶವೆಂಬಂತೆ ಬಿಂಬಿಸಿಕೊಂಡು ಬರಲಾಗಿದೆ. ಹೀಗೆ ರೂಪುಗೊಂಡು ಸೃಷ್ಠಿಯಾದವುಗಳೇ ಈ ಪವಾಡ ಕತೆಗಳು.

ಇವು ಎಷ್ಟರಮಟ್ಟಿಗೆ ಸತ್ಯವೋ, ಮಿತ್ಯವೋ ನಿಖರವಾಗಿ ನಿರ್ಣಯಿಸುವುದು ಕಷ್ಟವಾದರೂ ಬಸವಣ್ಣನವರೇ ತಮ್ಮದೊಂದು ವಚನದಲ್ಲಿ ಹೀಗೆ ಹೇಳಿದ್ದಾರೆ.

"ಮೂವತ್ತಾರು ಕೊಂಡೆಯವ ಪರಿಹರಿಸಿ
ಎಂಬತ್ತೆಂಟು ಪವಾಡವ ಮೆಚೆವಲ್ಲಿ
ಮುನ್ನೂಱುಱುವತ್ತು ಸತ್ತ ಪ್ರಾಣಿಗಳನೆತ್ತುವಲ್ಲಿ
ಅಂದು ನೀನೇನಾಗಿರ್ದೆ ಹೇಳಾ ಕೂಡಲಸಂಗಮದೇವ"

(ಆರ್. ಸಿ. ಹಿರೇಮಠ(ಸಂ) ವ. ೮೯೧)

ಮೇಲಿನ ವಚನಗಳಲ್ಲಿ ಸ್ವತಃ ಬಸವಣ್ಣನೇ ಪವಾಡಗಳ ವಿಷಯ ಹೇಳಿರುವುದನ್ನು ಗಮನಿಸಿದರೆ ಇಂತಹ ಅದ್ಭುತಗಳು ನಡೆದಿರಬಹುದೆಂದು ಊಹಿಸಬಹುದು. ಬಸವಣ್ಣನ ಸಮಕಾಲೀನ ಕೆಲವು ಶರಣರು ಕೂಡ ಬಸವಣ್ಣನನ್ನು ಒಬ್ಬ ಮಹಿಮಾ ಪುರುಷ, ಮಹಾಶಿವಭಕ್ತ, ಕಾರಣಿಕ ಪುರುಷ ಎಂದು ಹೇಳಿರುವರು. ಜೊತೆಗೆ ಚೆನ್ನಬಸವಣ್ಣ, ಸಿದ್ದರಾಮ, ಸಕಲೇಶ ಮಾದರಸ ಮುಂತಾದವರು ಬಸವಣ್ಣ ಮಾಡಿದ ಪವಾಡಗಳ ಕುರಿತಾಗಿ ಹೇಳಿದ್ದಾರೆ. ಬಸವಣ್ಣನ ಪತ್ನಿಯಾದ ನೀಲಾಂಬಿಕೆಯು

"ಎಂಬತ್ತೆಂಟು ಪವಾಡವಂ ಗೆದ್ದು
ಮುನ್ನೂಱುಱುವತ್ತು ಸತ್ತ ಪ್ರಾಣವನ್ನೆತ್ತಿ ಮೆರೆದು
ಪರಸಮಯವನಳಿದಾತ ನಮ್ಮ ಬಸವಯ್ಯನು
ಇಪ್ಪತ್ತೈದು ಸಾವಿರ ಚಾರ್ವಾಕರ ನೆಗ್ಗಲೊತ್ತಿ
ಅಪ್ರತಿಮ ಶಿವಗಣಂಗಳ ಮಹಾತ್ಮೆಯಂ ಮೆರೆದಾತ ನಮ್ಮ ಬಸವಯ್ಯನು"

(ಆರ್. ಸಿ. ಹಿರೇಮಠ (ಸಂ), ಶಿವಶರಣೆಯರ ವಚನಗಳು ಪು.೧೯೨)

ಎಂದು ಹೇಳಿರುವುದನ್ನು ಗಮನಿಸಿದರೆ ಈ ಪವಾಡ ಕ್ರಿಯೆಗಳು ನಡೆದಿರಬೇಕೆನಿಸುತ್ತದೆ. ಆದರೂ ಇವುಗಳ ಸತ್ಯಾಸತ್ತತೆಯನ್ನು ಗುರುತಿಸುವುದು ಕಷ್ಟಸಾಧ್ಯವಾದರೂ ಕವಿಗಳು ಮಾತ್ರ ಕಾವ್ಯಗಳಲ್ಲಿ ತಮ್ಮ ತಮ್ಮ ಧರ್ಮಗಳ, ಮಹಾಪುರುಷರ ಸಾಧನೆಗಳನ್ನು ಚಿತ್ರಿಸುವಾಗ ಅವರನ್ನು ಅದ್ಭುತ ಸೃಷ್ಟಿಕರ್ತರು, ಪವಾಡ ಪುರುಷರು ಎಂಬತೆ ಚಿತ್ರಿಸಿದ್ದಾರೆ. ಇದಕ್ಕೆ ಕನ್ನಡ ಮತ್ತು ತೆಲುಗು ವೀರಶೈವ ಸಾಹಿತ್ಯವೂ ಹೊರತಾಗಿಲ್ಲ. ವೀರಶೈವ ಕಾವ್ಯಗಳಲ್ಲಂತೂ ಪವಾಡ ಕತೆಗಳು, ಸನ್ನಿವೇಶಗಳು ಕಾವ್ಯದಿಂದ ಕಾವ್ಯಕ್ಕೆ ಹೆಚ್ಚಾಗುತ್ತಾ, ಪವಾಡ ಕತೆಯಿಲ್ಲದ ಯಾವ ಶರಣನ ಚರಿತ್ರೆಯೂ ಇಲ್ಲ ಎಂಬುವಷ್ಟರ ಮಟ್ಟಿಗೆ ಅವರ ಕತೆಗಳಲ್ಲಿ, ಚರಿತ್ರೆಗಳಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿವೆ.

ತಮಿಳುನಾಡಿನ ಶೈವ ಪುರಾತನರೂ ಹಾಗೂ ಕನ್ನಡ-ತೆಲುಗು ಪ್ರದೇಶಗಳ ನೂತನ ಶರಣರು ಅತ್ಯಂತ ನಿಷ್ಠೆಯುಳ್ಳ ಶಿವಭಕ್ತರು. ಇವರ ಭಕ್ತಿಯ ಸಮರ್ಪಣೆಗೆ ಶಿವನೊಲಿದು ಅವರಿಗೆ ವಿಶೇಷವಾದ ದೈವಿಕ ಶಕ್ತಿಯನ್ನು ನೀಡಿ ಅವರನ್ನು ಪುರಾಣ ಪ್ರಸಿದ್ಧರನ್ನಾಗಿ ಮಾಡಿದ್ದಾನೆ. ಈ ದೈವಶಕ್ತಿಯಿಂದ ತಮ್ಮ ಪರಿಸರಗಳಲ್ಲಿ ನಡೆಯುವ ಅಸಂವಿಧಾನಿಕ ಘಟನೆಗಳನ್ನು ತಮ್ಮ ಬುದ್ಧಿಶಕ್ತಿಯಿಂದ ಕಾಪಾಡುವುದರ

ಜೊತೆಗೆ ಸಮಾಜದ ಎಲ್ಲಾ ವರ್ಗದ ಜನರೂ ಒಂದೇ ಎಂಬ ಭಾವದಿಂದ ಕಂಡರು. ತಮ್ಮ ಪರಿಸರದ ಜನರಿಗೆ ಭಕ್ತಿಯ ಮಾರ್ಗ ತೋರಿಸುವುದರ ಮೂಲಕ ಸಮಾಜದೊಂದಿಗೆ ಸಂತೋಷದಿಂದ ಬದುಕಲು ಸಹಕಾರಿಯಾದರು. ಇಂತಹ ಮಹಿಮಾಶಾಲಿಗಳ ಚರಿತ್ರೆಯನ್ನು ಅವರ ಆದರ್ಶದ ಬದುಕನ್ನು ಮುಂದಿನ ಪೀಳಿಗೆಗೆ ತಿಳಿಸುವ ಸಲುವಾಗಿ ಕವಿಗಳು ಅವರ ಜೀವನ ಚರಿತ್ರೆಗಳನ್ನು ರಚಿಸಲು ಮುಂದಾದರು. ತಮ್ಮ ಕಾವ್ಯಗಳಿಗೆ ಇಂತಹ ಮಹಾನ್ ವ್ಯಕ್ತಿಗಳ ಜೀವನ ಕತೆ, ಅವರು ಬದುಕಿ ತೋರಿಸಿದ ಬದುಕನ್ನೇ ವಸ್ತುವಾಗಿ ಆರಿಸಿಕೊಂಡು ಅವುಗಳನ್ನೇ ಅದ್ಭುತ ಕತೆಗಳನ್ನಾಗಿ ಸೃಷ್ಟಿಸಿದರು. ಹೀಗೆ ಸೃಷ್ಟಿಸುವಾಗ ಕವಿಯ ಕಲ್ಪನಾ ಶಕ್ತಿಯಲ್ಲಿ ಶರಣರ ಚರಿತ್ರೆಯು ಕವಿಯಿಂದ ಕವಿಗೆ ಕಾಲದಿಂದ ಕಾಲಕ್ಕೆ ಅನೇಕ ಬದಲಾವಣೆಗಳನ್ನು ಹೊಂದುತ್ತಾ ಬಂದಿರುವುದು ಸಾಮಾನ್ಯ. ಪವಾಡಗಳ ಸಂಖ್ಯೆಯೂ ಹೆಚ್ಚುತ್ತಾ ಹೋಯಿತು. ಪವಾಡಗಳನ್ನು ಸೃಷ್ಟಿಸುವ ಮತ್ತು ಅವುಗಳನ್ನು ವರ್ಣನೆಗಳಲ್ಲಿ ಕಟ್ಟುವ ಕ್ರಮವೂ ಬದಲಾಗುತ್ತಾ, ಕೊನೆಗೆ ಕೆಲವೊಂದು ಕಾವ್ಯಗಳಲ್ಲಿನ ಪವಾಡ ಕತೆಗಳನ್ನು ನಂಬಲೂ ಆಗದಂತಹ ರೀತಿಯಲ್ಲಿ ಚಿತ್ರಣಗೊಂಡಿರುವುದನ್ನು ಕಾಣುತ್ತೇವೆ.

ಬಸವಣ್ಣನ ಪವಾಡಗಳು ಪಾಲ್ಕುರಿಕೆ ಸೋಮನಾಥನ 'ಬಸವಪುರಾಣಮು'ವಿನಲ್ಲಿ ಎಂಟು, ಕನ್ನಡದ ಭೀಮಕವಿಯ 'ಬಸವಪುರಾಣ'ದಲ್ಲಿ ಸುಮಾರು ಹನ್ನೊಂದು, ಲಕ್ಕಣ್ಣ ದಂಡೇಶನ 'ಶಿವತತ್ವ ಚಿಂತಾಮಣಿ'ಯಲ್ಲಿ ಅರವತ್ತು, ಗುರುಚೆನ್ನಬಸವನ ಶಿಷ್ಯನ 'ಬಸವಪವಾಡ'ದಲ್ಲಿ ಎಂಬತ್ತು, ಸಿಂಗಿರಾಜನ 'ಅಮಲಬಸವರಾಜ ಚಾರಿತ್ರ'ದಲ್ಲಿ ಎಂಬತ್ತೆಂಟು ಹೀಗೆ ಕಾವ್ಯದಿಂದ ಕಾವ್ಯಕ್ಕೆ ಪವಾಡಗಳು ಹೆಚ್ಚುತ್ತಾ ಹೋಗಿವೆ. "ಒಬ್ಬ ಮಹಿಮಾನ್ವಿತ ವ್ಯಕ್ತಿಯ ಬಗ್ಗೆ ಪವಾಡಗಳು ಹಬ್ಬುವುದು ಕೇವಲ ವ್ಯಾಚ್ಯವೆಂದು ತಾನೇ ಏಕೆ ನಂಬಬೇಕು? ಅವುಗಳಲ್ಲಿ ನಾವು ಕಾಣಬೇಕಾಗಿದ್ದು, ಕಾವ್ಯಸತ್ವವನ್ನು, ಸಾಂಕೇತಿಕತೆಯನ್ನೇ ವಿನಾ ಅವುಗಳ ಐತಿಹಾಸಿಕ ಸತ್ಯವನ್ನಲ್ಲ." (ಪಿ.ವಿ. ನಾರಾಯಣ, ಬ.ಪು. ಪುಟ-೪೪೨) ಆದ್ದರಿಂದ ಆ ಪವಾಡಗಳ ಹಿಂದಿನ ಮೂಲೋದ್ದೇಶಗಳನ್ನು ಅರಿಯುವುದು ಇಲ್ಲಿ ಮುಖ್ಯವಾಗುತ್ತದೆ. ಕವಿಗಳು ಈ ರೀತಿಯ ಪವಾಡ ಕತೆಗಳನ್ನು ತಮ್ಮ ಕಾವ್ಯಗಳಲ್ಲಿ ಚಿತ್ರಿಸಿರುವ ಹಿಂದಿನ ಉದ್ದೇಶಗಳನ್ನು ಮತ್ತು ಕಾರಣಗಳನ್ನು ಸೂಕ್ಷ್ಮವಾಗಿ ಗಮನಿಸದರೆ ಹಲವು ಮಹತ್ವದ ಅಂಶಗಳು ನಮಗೆ ದೊರೆಯುತ್ತವೆ. ಮುಖ್ಯವಾದ ಕೆಲವು ಅಂಶಗಳನ್ನು ಹೇಳುವುದಾದರೆ,

* ತಮ್ಮ ಧರ್ಮದ ಧಾರ್ಮಿಕ ಪುರುಷನನ್ನು ಮಹಾಪುರುಷನನ್ನಾಗಿ ಮಾಡುವುದು.
* ಸಾಮಾನ್ಯರ ಕಷ್ಟಗಳಿಗೆ ಸ್ಪಂದಿಸಿ, ಪರಿಹಾರೋಪಾಯಗಳನ್ನು ಸೂಚಿಸುವ ಮೂಲಕ ತಮ್ಮ ಧರ್ಮವನ್ನು ಪ್ರಸಿದ್ಧಿ ಮತ್ತು ಪ್ರಚಾರ ಮಾಡುವುದು.
* ಮಹಾಪುರುಷನೆಂದು ಗುರುತಿಸಲ್ಪಡುವ ಅಥವಾ ಗುರುತಿಸಿಕೊಂಡಿರುವ ವ್ಯಕ್ತಿಯ ಗುಣ, ಮಹಿಮೆ, ಖ್ಯಾತಿಗಳ ಮಹತ್ವವನ್ನು ಜಗತ್ತಿಗೆ ಸಾರುವುದು.
* ಅನ್ಯ ಧರ್ಮಗಳ ವಿರುದ್ಧ ವಾದ-ತರ್ಕಗಳಲ್ಲಿ ಜಯಸುವ ಮೂಲಕ ತಮ್ಮ ಧರ್ಮವೇ ಶ್ರೇಷ್ಠ ಎಂಬ ಅಂಶಗಳನ್ನು ಸಾರಲು ಅದ್ಭುತ ಘಟನೆಗಳನ್ನು ಸೃಷ್ಟಿಸಲಾಗಿದೆ.

* ತಮ್ಮ ಧರ್ಮದ ಮಹಾಪುರುಷನನ್ನು ಸಾಂಸ್ಕೃತಿಕ ಮತ್ತು ಚಾರಿತ್ರಿಕ ವ್ಯಕ್ತಿಯಾಗಿ ಬಿಂಬಿಸುವುದು.
* ಅಷ್ಟಾವರಣಗಳಾದ ಗುರು, ಲಿಂಗ, ಜಂಗಮ, ಪ್ರಸಾದ, ಪಾದೋದಕ, ವಿಭೂತಿ, ರುದ್ರಾಕ್ಷಿ ಮಂತ್ರ ಇವುಗಳ ಮಹತ್ವವನ್ನು ತಿಳಿಸುವುದು.
* ಪಂಚಾಚಾರಗಳಾದ ಶಿವಾಚಾರ, ಸದಾಚಾರ, ಗಣಾಚಾರ, ಭೃತ್ಯಾಚಾರ, ಲಿಂಗಾಚಾರಗಳ ಶ್ರೇಷ್ಠತೆಯನ್ನು ಪರಿಚಯಿಸುವುದು.
* ಕಾಯಕ ತತ್ವದ ಪ್ರತಿಪಾದನೆಗಾಗಿ.

ಈ ಮೇಲಿನ ಎಲ್ಲಾ ಉದ್ಧೇಶಗಳ ಹಿನ್ನೆಲೆಯಲ್ಲಿ ಕವಿಗಳು ಪವಾಡ ಸದೃಶ ಕತೆಗಳನ್ನು ತಮ್ಮ ಪುರಾಣಗಳಲ್ಲಿ, ಕಾವ್ಯಗಳಲ್ಲಿ ಸೃಷ್ಟಿಸಿದ್ದಾರೆ.

ಶರಣರ ಜೀವನ ಚರಿತ್ರೆಯನ್ನು ಪವಾಡ ಕಥೆಗಳ ಮೂಲಕ ನಿರೂಪಿಸಿದ ಪಾಲ್ಕುರಿಕೆ ಸೋಮನಾಥ ಮತ್ತು ಭೀಮಕವಿ ತಮ್ಮ 'ಬಸವಪುರಾಣ'ಗಳಲ್ಲಿ ಈ ಪವಾಡ ಕಥೆಗಳನ್ನು ಹೇಗೆ ಚಿತ್ರಿಸಿದ್ದಾರೆ ಎಂಬುವುದರ ಜೊತೆಗೆ ಅವುಗಳ ಹಿಂದಿನ ಉದ್ದೇಶವೇನು? ಎಂಬುದನ್ನು ಮುಂದೆ ವಿಶ್ಲೇಷಿಸಲಾಗಿದೆ. ಅಧ್ಯಯನದ ದೃಷ್ಟಿಯಿಂದ ಪವಾಡ ಕಥೆಗಳನ್ನು 'ಬಸವಣ್ಣನ ಪವಾಡಗಳು', ಮತ್ತು 'ಇತರೆ ಪ್ರಮುಖ ಶರಣರ ಪವಾಡಗಳು' ಎಂಬುದಾಗಿ ಎರಡು ಭಾಗಗಳಲ್ಲಿ ವಿಂಗಡಿಸಿಕೊಳ್ಳಲಾಗಿದೆ.

**೪.೧. ಬಸವಣ್ಣನ ಪವಾಡಗಳು :**

ವೀರಶೈವ ಸಾಹಿತ್ಯದ ಮೊದಲ ಪುರಾಣಗಳಾದ ತೆಲುಗು ಮತ್ತು ಕನ್ನಡ 'ಬಸವಪುರಾಣ'ಗಳಲ್ಲಿಯೂ ಪವಾಡ ಚಿತ್ರಣಗಳಿವೆ. ಈ ಪುರಾಣಗಳಲ್ಲಿ ಮುಖ್ಯವಾಗಿ ಕಥಾನಾಯಕನಾದ ಬಸವಣ್ಣನ ಪವಾಡಗಳು ಮತ್ತು ಇತರ ಶರಣರು ನಡೆಸಿದ ಪವಾಡಗಳು ಇವೆ. ಕವಿಗಳು ಪುರಾಣಗಳಲ್ಲಿ ಬಸವಣ್ಣನ ಪವಾಡಗಳಿಗೆ ನೀಡಿದ ಪ್ರಾಮುಖ್ಯತೆಯನ್ನು ಇತರೆ ಶರಣರು ಮಾಡಿದ ಪವಾಡಗಳಿಗೆ ಹೆಚ್ಚು ಪ್ರಾಧಾನ್ಯತೆ ನೀಡದಿರುವುದನ್ನು ಗಮನಿಸಬಹುದು. ಪವಾಡಗಳ ವರ್ಣನೆಯನ್ನು ಮಾಡುವಾಗ ಬಸವಣ್ಣ ಮಾಡಿರುವ ಪವಾಡಗಳನ್ನು ಹೆಚ್ಚು ಹೆಚ್ಚು ವರ್ಣನೆಗಳಿಂದ ಕೇಳುಗರ ಮನಸ್ಸಿಗೆ ನಾಟುವಂತೆ, ವಿಸ್ಮಯಪಡುವಂತೆ ಚಿತ್ರಿಸಲಾಗಿದೆ. ಆದರೆ ಇತರ ಶರಣರ ಪವಾಡಗಳನ್ನು ಹೇಳುವಾಗ ಹೆಚ್ಚು ವರ್ಣನೆಗಳನ್ನು ಮಾಡದೆ ತೇಲಿಸಿಕೊಂಡು ಆ ಪವಾಡದ ಮುಖ್ಯ ವಿಷಯವನ್ನು ಮಾತ್ರ ಪ್ರಸ್ತಾಪಿಸಿರುವುದನ್ನು ಕಾಣಬಹುದು. ಈ ರೀತಿಯ ಕ್ರಮಕ್ಕೆ ಮುಖ್ಯ ಕಾರಣ ಕಥಾನಾಯಕನಾದ ಬಸವಣ್ಣನ ಮಹಿಮೆಯನ್ನು ಹೆಚ್ಚು ಪ್ರಸಿದ್ದಿಗೆ ತರುವ ಬಯಕೆ ಇರಬಹುದು. ಜೊತೆಗೆ ಕಥಾನಾಯಕನ ಶ್ರೇಷ್ಠತೆಯನ್ನು ಜಗತ್ತಿಗೆ ತಿಳಿಸುವ ಕಾರಣವಾಗಿಯೂ ಈ ರೀತಿಯ ಮಾರ್ಗವನ್ನು ಅನುಸರಿಸಿರಬಹುದೆಂದು ಕಾಣುತ್ತದೆ.

ಕನ್ನಡದಲ್ಲಿ ಬಸವಣ್ಣನ ಚರಿತ್ರೆಯನ್ನು ಮೊದಲು ರಚಿಸಿದ ಹರಿಹರನು ತನ್ನ 'ಬಸವರಾಜದೇವರ ರಗಳೆ'ಯಲ್ಲಿ ಬಸವಣ್ಣನು ಮಾಡಿದ ಎಂಟು ಪವಾಡಗಳನ್ನು ಚಿತ್ರಿಸಿದ್ದಾನೆ. ಅವುಗಳೆಂದರೆ

೧. ಬಿಜ್ಜಳನ ಕರಣಸಾಲೆಯಲ್ಲಿ ಗಣಕರು ಮಾಡಿದ ತಪ್ಪನ್ನು ತೋರಿಸಿದುದು.

೨. ಕೇತಕೀ ಪುಷ್ಪವನ್ನು ಲಿಂಗಕ್ಕೇರಿಸಿದುದು.

೩. ಬಿಜ್ಜಳನ ಭಂಡಾರದ ಹಣವನ್ನು ನೂರು ಪಟ್ಟು ಹೆಚ್ಚಿಸಿದುದು.

೪. ಕಳ್ಳರು ಕಟ್ಟಿಕೊಂಡು ಬಂದಿದ್ದ ಬದನೆಕಾಯಿಗಳನ್ನು ಲಿಂಗಗಳನ್ನಾಗಿ ಮಾಡಿದುದು.

೫. ಶಿವಯೋಗ ನಿದ್ರಾಮುದ್ರೆಯ ಪವಾಡ.

೬. ಸಂಬೋಳಿ ನಾಗಿದೇವನ ಉಂಗಟದಿಂದ ಕ್ಷೀರಧಾರೆಯನ್ನು ಹರಿಸಿದುದು.

೭. ಕಳಿಂಗದ ಮಹದೇವ ಸೆಟ್ಟಿಗೆ ನವರತ್ನದ ಮಳೆಯನ್ನು ಕರೆಯಿಸಿದುದು.

೮. ಶಿವನು ಜಂಗಮ ವೇಷಧಾರಿಯಾಗಿ ಬಂದು ಮಾಯಿದೇವಿಯನ್ನು ಕೇಳಲು, ಬಸವಣ್ಣ ಹಿಂದು ಮುಂದು ಯೋಚಿಸದೆ ಕೊಟ್ಟಾಗ ಜಂಗಮದೇವರು ಸಂಗಮದೇವರಾದುದು.

ಇವು ಹರಿಹರನು ಹೇಳಿದ ಪವಾಡ ಕತೆಗಳು. 'ಬಸವರಾಜದೇವರ ರಗಳೆ'ಯ ನಂತರ ರಚನೆಗೊಂಡ ತೆಲುಗು 'ಬಸವಪುರಾಣಮು'ವಿನಲ್ಲಿ ಪಾಲ್ಕುರಿಕೆ ಸೋಮನಾಥನು, ಹರಿಹರ ಹೇಳಿದ ಕೆಲವು ಪವಾಡಗಳ ಜೊತೆಗೆ ತನಗೆ ತಿಳಿದ ಹೊಸ ಪವಾಡಗಳನ್ನು ಚಿತ್ರಿಸುತ್ತನಾದರೂ ಸಂಖ್ಯೆಯಲ್ಲಿ ವ್ಯತ್ಯಾಸವಿಲ್ಲ. ಇವನೂ ಎಂಟು ಪವಾಡಗಳನ್ನು ಹೇಳಿದ್ದಾನೆ. ಅವುಗಳೆಂದರೆ.

೧. ಬದನೆಕಾಯಿಗಳು ಲಿಂಗಗಳಾದುದು.

೨. ಭಂಡಾರದ ಹಣವನ್ನು ಹೆಚ್ಚು ಮಾಡಿದ್ದು.

೩. ಶಿವನಾಗಮಯ್ಯನ ಕಾರಾಂಗುಲಿನಿಂದ ಹಾಲು ಕರೆದುದು.

ಇವು ಹರಿಹರನಲ್ಲಿವೆ. ಸೋಮನಾಥನು ಹೊಸದಾಗಿ ಹೇಳಿದ ಪವಾಡಗಳೆಂದರೆ,

೪. ಮೂಗೊಳಗ ಜೋಳವನ್ನು ಮುತ್ತಾಗಿಸಿದುದು.

೫. ಜಂಗಮೇಶಿ ಶಿವನಿಗೆ ಮೂರನೇ ಕಣ್ಣನ್ನು ತೋರಿಸಿದುದು.

೬. ಗೊಲ್ಲತಿಯ ಮೊಸರಿನ ಮಡಕೆಯನ್ನು ಆಗಸದಲ್ಲಿ ನಿಲ್ಲಿಸಿದುದು.

೭. ವಿಷವನ್ನು ಅಮೃತವನ್ನಾಗಿ ಮಾಡಿದುದು.

೮. ಗಂಗಾಂಬಿಕೆಯ ಸೀರೆ ಅಕ್ಷಯವಾದುದು.

ಒಟ್ಟು ಎಂಟು ಪವಾಡಗಳನ್ನು ಪಾಲ್ಕುರಿಗೆ ಸೋಮನಾಥ ಹೇಳುತ್ತಾನೆ. ಭೀಮಕವಿಯು ಮೂಲ ತೆಲುಗು 'ಬಸವಪುರಾಣಮು'ವಿಗೆ ಋಣಿಯಾಗಿ ತನ್ನ 'ಬಸವಪುರಾಣ'ವನ್ನು ರಚಿಸಿರುವುದರಿಂದ, ಸೋಮನಾಥ ಹೇಳಿದ ಎಂಟು ಪವಾಡಗಳನ್ನು ಚಿತ್ರಿಸಿರುವುದರ ಜೊತೆಗೆ ತನ್ನ ಕಾಲಕ್ಕೆ ಪ್ರಸ್ತುತದಲ್ಲಿದ್ದ ಅಥವಾ ತನಗೆ ತಿಳಿದಿದ್ದ ಹಾಗೂ ಸೋಮನಾಥನಿಗೆ ತಿಳಿಯದೇ ಇದ್ದ ಇನ್ನೂ ಮೂರು ಪವಾಡಗಳನ್ನು ಸೇರಿಸುತ್ತಾನೆ. ಅವುಗಳೆಂದರೆ.

೧. ಚರಲಿಂಗ ಪ್ರಾಣಿತ್ವದ ಪವಾಡ

೨. ಭವಿಪಾಕದಲ್ಲಿ ಬಾಲ ಹುಳುಗಳನ್ನು ತೋರಿದ ಪವಾಡ

೩. ಲಿಪಿಯ ಪವಾಡ

ಈ ಮೂರನ್ನು ಸೇರಿಸಿ ಒಟ್ಟು ಹನ್ನೊಂದು ಪವಾಡಗಳನ್ನು ಭೀಮಕವಿ ತನ್ನ 'ಬಸವಪುರಾಣ'ದಲ್ಲಿ ಹೇಳಿದ್ದಾನೆ.

ಈ ಪವಾಡಗಳು ತೆಲುಗು ಮತ್ತು ಕನ್ನಡದಲ್ಲಿ ಹೇಗೆ ರಚನೆಗೊಂಡಿವೆ ಎಂಬುದನ್ನು ಒಂದೊಂದಾಗಿ ಮುಂದೆ ವಿಶ್ಲೇಷಿಸಲಾಗಿದೆ. ಇಲ್ಲಿ ಸಾಂದರ್ಭಿಕವಾಗಿ ಹರಿಹರ ಹೇಳಿದ ಪವಾಡಗಳ ಚಿತ್ರಣವನ್ನು ತೌಲನಿಕವಾಗಿ ನೀಡಲಾಗಿದೆ.

**೧. ಬದನೆಕಾಯಿಗಳು ಲಿಂಗಗಳಾದ ಪವಾಡ :**

ಈ ಪವಾಡ ಕಥೆಯು ಹರಿಹರನಲ್ಲಿ ಹೀಗಿದೆ : ಬಸವಣ್ಣನು ಬೇಡಿಬಂದ ಜಂಗಮರಿಗೆ ಧನ, ಕನಕಾದಿಗಳನ್ನು ಉಚಿತವಾಗಿ ದಾನ ಮಾಡುವನೆಂದು ತಿಳಿದು, ಕೆಲವು ಕುಹಕಿಗಳು ಜಂಗಮ ವೇಷದಿಂದ ಲಿಂಗಗಳಿಗೆ ಬದಲಾಗಿ ಕರಿಯ ಬದನೆಕಾಯಿಗಳನ್ನು ಕಟ್ಟಿಕೊಂಡು ಬರುವರು. ಬಸವಣ್ಣ ಅವರನ್ನು ಪ್ರೀತಿಯಿಂದ ಬರಮಾಡಿಕೊಂಡು ಲಿಂಗಾರ್ಚನೆ ಮಾಡಿಕೊಳ್ಳಿರೆಂದು ಹೇಳಿದಾಗ ಭಯಭೀತರಾದ ಕುಹಕಿಗಳು ಒಬ್ಬರನ್ನೊಬ್ಬರು ನೋಡಿಕೊಂಡು ದಿಗಿಲಾಗುತ್ತಾರೆ. ನಂತರ ಬಸವಣ್ಣ ಅವರಿಗೆ ಧೈರ್ಯ ತುಂಬಲು ಮನಸ್ಸಿನಲ್ಲಿಯೇ ಬಸವ ನಮ್ಮನ್ನು ಕ್ಷಮಿಸು ಎನ್ನುತ್ತಾ ಲಿಂಗಪೂಜೆಗೆ ಅಣಿಯಾಗುತ್ತಾರೆ. ಬಸವನ ಭಕ್ತಿ ಭಾವದಿಂದ ಅವರು ಕಟ್ಟಿಕೊಂಡು ಬಂದಿದ್ದ ಬದನೆಕಾಯಿಗಳು ಲಿಂಗಗಳಾಗಿ ಪರಿವರ್ತಿತವಾಗಿರುತ್ತವೆ. ಇದರಿಂದ ತಮ್ಮ ತಪ್ಪಿನ ಅರಿವಾಗಿ ಬಸವಣ್ಣನಿಗೆ ನಮಿಸುತ್ತಾರೆ.

ಇದೇ ಕತೆಯನ್ನು ಪಾಲ್ಕುರಿಕೆ ಸೋಮನಾಥ ಹಾಗೂ ಭೀಮಕವಿಯರು ಕೊಂಚ ಮಾರ್ಪಡಿಸಿ ಹೇಳುತ್ತಾರೆ. ಬಸವಣ್ಣನು ಜಂಗಮಾರ್ಚನೆ ಮಾಡುವ ಸಮಯದಲ್ಲಿ ಕೆಲವು ಕಳ್ಳರು ಬಸವಣ್ಣನನ್ನು ಬಂಧಿಸಲು ಮುಂದಾಗುತ್ತಾರೆ. ಲಿಂಗವತಂರಲ್ಲದ ನಮ್ಮಂತವರು ಬಸವಣ್ಣನಲ್ಲಿಗೆ ಹೋಗಲು ಸಾಧ್ಯವಾಗದಿರುವುದನ್ನು ತಿಳಿದ ಕಳ್ಳರು

ವಂಗಕಾಯಲು ಗಟ್ಟುಕೊಂಗಲಂ ಬೊದಿವಿ
ಲಿಂಗಸನ್ನಿಹಿತಲಭಂಗಿ ವಟ್ರಿಲ್ಲಂ
ಬಸವಣದಂಡನಾಥುಂಡು
ಗನಿ ಭಯಂಪಡಿ ಮ್ರೊಕ್ಕಂ ಗನ್ನುಲ ನವ್ವಿ

(ಗೂ.ವೆಂ.ಸು.(ಸಂ), ಬ.ಪು., ದ್ವಿಆ. ಸಾಲು. ೪೬೬–೪೭೦)

(ಬದನೆಕಾಯಿಗಳನ್ನು ಸೆರಗಿನಲ್ಲಿ ಕಟ್ಟಿಕೊಂಡು ಲಿಂಗವಂತರಂತೆ ನಟಿಸುತ್ತಾ ಬಂದು ಬಸವದಂಡನಾಥನನ್ನು ಕಂಡು ಭಯದಿಂದ ಕೈಮುಗಿದು ಕಣ್ಣಲ್ಲೇ ನಕ್ಕು)

"ಕರಿಯ ಬದನೆಕಾಯಿಗಳನಂ
ಬರದ ಸೆಜಿಗಿಂ ಪುದಿದೀ ಬಿಗದೀ
ಶ್ವರನ ಭಕ್ತರ ತೆಜದಿ ಬಂದಾ ಬಸವನಂ ಕಂಡು"

(ಎಸ್. ವಿದ್ಯಾಶಂಕರ(ಸಂ), ಬ.ಪು. ಸಂ.೮.ಪ.೨)

ಹೀಗೆ ಬದನೆಕಾಯಿಗಳನ್ನು ಕಟ್ಟಿಕೊಂಡು ಬಂದ ಆ ಕಳ್ಳರನ್ನು ಬಸವಣ್ಣ ಬರಮಾಡಿಕೊಂಡು ತಾವು ಭಕ್ತರು ಈಶ್ವರಾರ್ಚನೆಯನ್ನು ಸಲ್ಲಿಸಿರೆಂದು ಕುಳ್ಳಿರಿಸಲು ಕಳ್ಳರು ಭಯಭೀತರಾಗುತ್ತಾರೆ. ಅನ್ಯಾಯವಾಗಿ ನಾವು ಬಂದು ಸಿಲುಕಿಕೊಂಡೆವು. ಇನ್ನು ಇಲ್ಲಿಂದ ಪಾರಾಗುವುದು ಕಷ್ಟ. ನಮ್ಮ ಸಾವು ತಪ್ಪದು ಎಂದು ದಿಗಿಲುಗೊಳ್ಳುತ್ತಾರೆ. ದೇವರು ಇರುವುದೇ ಆದಲ್ಲಿ ನಮ್ಮ ಸಾವು ತಪ್ಪುವುದು ಎಂದು ದೇವರನ್ನು ಪ್ರಾರ್ಥಿಸುತ್ತಾ ತಾವು ಕಟ್ಟಿಕೊಂಡು ಬಂದಿದ್ದ ಬದನೆಕಾಯಿಗಳನ್ನು ನಿಧಾನವಾಗಿ ತೆಗೆಯಲು ಬಸವಣ್ಣನ ಸಂಗಭಾವದಿಂದ ಅವು ಪ್ರಾಣಲಿಂಗಗಳಾಗಿದ್ದವು. ಇದನ್ನು ಕಂಡು ತಾವು ಮಾಡಿದ ತಪ್ಪಿಗೆ ಮನಸ್ಸಿನಲ್ಲಿಯೇ ಕ್ಷಮೆ ಕೋರಿಕೊಳ್ಳುತ್ತಾರೆ.

ಈ ಪವಾಡ ಕಥೆಯಿಂದ ಹರಿಹರ ಹೇಳುವುದು ಧನಕನಕದ ಆಸೆಗೆ ಮರುಳಾಗಿ ಮೋಸದಿಂದ ಪಡೆಯುವ ದುರ್ಬುದ್ಧಿಯನ್ನು ಬಯಲಿಗೆಳೆದು, ಸನ್ಮಾರ್ಗದಿಂದ ನಡೆದುಕೊಂಡರೆ ಎಲ್ಲಾ ಕಾರ್ಯಗಳು ಸುಗಮವಾಗಿರುತ್ತವೆ. ಹಾಗೂ ವಂಚನೆಯಿಂದಾಗುವ ದುಷ್ಪರಿಣಾಮಗಳನ್ನು ಕೂಡ ಇಲ್ಲಿ ಸೂಕ್ಷ್ಮವಾಗಿ ತಿಳಿಸಲಾಗಿದೆ. ಹಾಗೆಯೇ ಪಾಲ್ಕುರಿಕೆ ಸೋಮನಾಥ ಮತ್ತು ಭೀಮಕವಿಯರು ಹೇಳುವುದು ಇದೇ ಸಂದೇಶವನ್ನು. ಶಿವಭಕ್ತರನ್ನು ವಂಚಿಸುವ ಉದ್ದೇಶದಿಂದ ಬಂದಿದ್ದ ಕಳ್ಳರು ಶಿವಭಕ್ತರಾಗುತ್ತಾರೆ. ಶಿವಸ್ವರೂಪಿಯಾದ ಬಸವಣ್ಣನನ್ನು ಮೋಸ ಮಾಡುವುದು, ಸುಲಭವಾದ ಕೆಲಸವಲ್ಲ ಎಂಬ ಅಂಶಗಳು ಇಲ್ಲಿ ವ್ಯಕ್ತವಾಗಿವೆ. ನಿರ್ಮಲವಾದ, ತೇಜೋಸ್ವರೂಪಿಯಾದ ಬಸವಣ್ಣನ ಮಾತುಗಳು ಕಳ್ಳರ ಮನಸ್ಸನ್ನು ಬದಲಿಸುತ್ತವೆ. ಹಾಗಾಗಿ ಶಿವಭಕ್ತರ ನುಡಿಗಳಿಗೆ ಮರುಳಾಗದವರೇ ಇಲ್ಲ. ಒಟ್ಟಿನಲ್ಲಿ ಇಂತಹ ಅಸಾಮಾನ್ಯ ವ್ಯಕ್ತಿಯಾದ ಬಸವಣ್ಣನ ಭಕ್ತಿಯ ಅಚಲತೆಯನ್ನು ತೋರಿಸುವುದೇ ಕವಿಗಳ ಉದ್ದೇಶವಾಗಿದೆ.

**೨. ಜೋಳವನ್ನು ಮುತ್ತುಗಳನ್ನಾಗಿ ಮಾಡಿದ ಪವಾಡ :**

ಈ ಪವಾಡ ಕಥೆಯು ಹರಿಹರನ ರಗಳೆಯಲ್ಲಿಯೂ ಇದೆ. ಆದರೆ ಹರಿಹರ ಹೇಳುವ ಕಥೆಗೂ ಪಾಲ್ಕುರಿಕೆ ಸೋಮನಾಥ ಮತ್ತು ಭೀಮಕವಿಯರು ಹೇಳುವ ಕಥೆಗೂ ಭಿನ್ನತೆಯಿದೆ. ಹರಿಹರನ ರಗಳೆಯಲ್ಲಿ ಕಳಿಂಗದೇಶದ ಮಹಾದೇವ ಶೆಟ್ಟಿ ಎಂಬುವನು ಮುತ್ತು, ರತ್ನಗಳನ್ನು ಬೇಡಲು ಬಸವಣ್ಣನಲ್ಲಿಗೆ ಬರುತ್ತಾನೆ. ಬಸವಣ್ಣನ ದಾನ ಕಾರ್ಯಗಳನ್ನು ನೋಡುತ್ತಾ ಮೈಮರೆತು ದವಸ. ಧಾನ್ಯಗಳನ್ನು ಬೇಡುತ್ತಾನೆ. ಆಗ ಬಸವಣ್ಣನು ಮಹದೇವ ಶೆಟ್ಟಿಯನ್ನು ಎಚ್ಚರಿಸಿ ನೀವು ಬರುವ ಮೊದಲು ಏನನ್ನು ಬೇಡಲು ಬಂದಿರುವಿರೋ ಅದನ್ನೇ ಬೇಡಿರೆಂದು ಹೇಳಿ ನವರತ್ನದ ಮಳೆಯನ್ನೇ ಭರಿಸುತ್ತಾನೆ. ಈ ಪವಾಡ ಕಥಾಪ್ರಸಂಗವು 'ಬಸವಪುರಾಣ'ಗಳಲ್ಲಿ ಹರಿಹರನಿಗಿಂತ ಭಿನ್ನವಾಗಿದೆ. ಎರಡೂ 'ಬಸವಪುರಾಣ'ಗಳಲ್ಲಿನ ಕಥಾಂಶವು ಹೆಚ್ಚು ವ್ಯತ್ಯಾಸಗಳಿಲ್ಲದೆ ಚಿತ್ರಣಗೊಂಡಿದೆ.

"ಮಱೆಯುನು ನೊಕ ಜಂಗಮಂ ಬೆಂಗುದೆಂಚಿ
ಯಱೆಮುಱೆ ನಭ್ಯಂಜನಾವಸರಮುನ
ನಿತ್ಯ ನೇಮಂ ಬಿದಿ ನೇಂಟ್ರಿ ಮ್ರುಗ್ಗುನಕು
ಮುತ್ಯಾಲಪೊಡಿ ಮಾಕು ಮುಕ್ಕುಸ ವಲಯುಂ
ಗದಲಕ ಮೆದಲ ಕೀಕ್ಷಣಮಾತ್ರಮೋನಂ
ಬದಿ ಪುಟ್ಲ ಮುತ್ಯಮುಲೋ ಬಸವ ಯಿಮ್ಮಮನಿ"

(ಗೂ.ವೆಂ.ಸು.(ಸಂ), ಬ.ಪು., ದ್ವಿಆ. ಪದ್ಯ–೪೮೩–೪೮೯)

(ಒಮ್ಮೆ ಜಂಗಮನೊಬ್ಬನು ಬಂದು ಅಭ್ಯಂಜನ ಮಾಡುವ ಸಮಯದಲ್ಲಿ ನನ್ನ ಪ್ರತಿದಿನದ ಕಾಯಕವಾದ ರಂಗೋಲಿ ಹಾಕುವುದಕ್ಕಾಗಿ ಮೂರು ಬಳ್ಳದಷ್ಟು ಪುಡಿಯು ಬೇಕಾಗಿದೆ. ಅದು ಈ ಕ್ಷಣದಲ್ಲಿಯೇ ಬೇಕು. ಹತ್ತು ಖಂಡುಕದಷ್ಟು ಮುತ್ತುಗಳು ಬೇಕು ಬಸವ ನೀಡೆಂದು)

"ಸಂಗಮೇಶಾರ್ಪಿತದ ತೈಲಾ
ಭ್ಯಂಗನಂ ಮಾಡುವ ಸಮಯದಲಿ
ಜಂಗಮಯ್ಯನು ಬಂದು ಮುತ್ತಿನ ಚೂರ್ಣವೀದಿನಕೆ
ಹಿಂಗದೊಕ್ಕುಳ ನಿತ್ಯನೇಮದ
ರಂಗವಾಲಿಗೆ ಸಲಿಸಬೇಕಾ
ವಂಗದಿಂದೋಸರಿಸಬಾರದು ನಿಮಿಷಮಾತ್ರದಲಿ"

(ವಿದ್ಯಾಶಂಕರ, ಬ.ಪು., ಸಂಧಿ–೮, ಪದ್ಯ–೨೦)

ಬಸವಣ್ಣನು ತೈಲಾಭ್ಯಂಜನ ಮಾಡುವ ಸಮಯದಲ್ಲಿ ಜಂಗಮನೊಬ್ಬನು ಬಂದು ಮುತ್ತಿನ ಚೂರ್ಣದಲ್ಲಿ ರಂಗವಲ್ಲಿಯಿಡುವ ತನ್ನ ನೇಮಕ್ಕಾಗಿ ಹತ್ತು ಖಂಡುಗಗಳಷ್ಟು ಮುತ್ತುಗಳು ಬೇಕು. ನೀವು ಕೊಡದಿದ್ದರೆ ನಾನು ಇಲ್ಲಿಂದ ಕದಲುವುದಿಲ್ಲ ಎಂದು ಹೇಳಿದಾಗ ಬಸವಣ್ಣನು ತನ್ನ ದಿವ್ಯದೃಷ್ಟಿಯಿಂದ ಅಲ್ಲಿಯೇ ಇದ್ದ ಜೋಳದ ರಾಶಿಯನ್ನು ನೋಡುತ್ತಾನೆ. ಆ ರಾಶಿಯೆಲ್ಲವೂ ಮುತ್ತಿನ ರಾಶಿಯಾಗಲು ಆ ಜಂಗಮನನ್ನು ಕರೆದು "ಅನಘ ನಿಮಗೀ ಹತ್ತು ಖಂಡುಗವೆನಿಪ ಸಂಖ್ಯೆಯದೇಕೆ ಬೇಕಾದನಿತುಮಂ ಕೈಕೊಂಡು ನೀವಿಂತೀಗಳುದ್ದರಿಸು" ಎಂದು ಬಸವಣ್ಣ ಹೇಳುತ್ತಾನೆ. ಆಗ ಆ ಜಂಗಮ ಅಲ್ಲಿನ ಮುತ್ತುಗಳಷ್ಟನ್ನು ಮೂಟೆಗಳಲ್ಲಿ ಕೊಂಡೊಯ್ಯುತ್ತಾನೆ.

ಈ ಪವಾಡದಲ್ಲಿ ಬಸವಣ್ಣನು ಬೇಡಿದುದನ್ನೆಲ್ಲವನ್ನು ಇಲ್ಲೆನ್ನದೆ ನೀಡುವಂತಹ ಪ್ರಸಾದಿ ಗುಣವನ್ನು ಹೊಂದಿರುವ ವ್ಯಕ್ತಿ ಎಂಬುದನ್ನು ತಿಳಿಸುವ ಉದ್ದೇಶವಿದೆ. ಹಾಗೆಯೇ ಶರಣರ ಕಾಯಕ ಅಥವಾ ಅವರ ಕೈಗೊಂಡ ವ್ರತಗಳಿಗೆ ಕುಂದುಂಟಾಗಬಾರದು, ಶಿವಭಕ್ತಿಯಲ್ಲಿ ಕೊರತೆಯೂ ಉಂಟಾಗಬಾರದೆನ್ನುವ ಉದ್ದೇಶದಿಂದ ಬಸವಣ್ಣನ ಈ ಪವಾಡದ ಮೂಲಕವಾಗಿ ಚಿತ್ರಿಸಿರುವ ರೀತಿ ವಿಶಿಷ್ಟವೆನಿಸಿದೆ.

**೩. ಭಂಡಾರದ ದ್ರವ್ಯವನ್ನು ನೂರ್ಮಡಿ ಮಾಡಿದ ಪವಾಡ :**

ಒಮ್ಮೆ ಬಸವಣ್ಣನಿದ್ದಲ್ಲಿಗೆ ಮಿಂಡಜಂಗಮನೊಬ್ಬನು ಬಂದು ಬಸವ ಪೆಟ್ಟಿಗೆಯಲ್ಲಿರುವ ಹೊನ್ನೆಲ್ಲವನ್ನು ಈಗಿಂದೀಗಲೇ ಕೊಡು ಎಂದಾಗ ಬಸವಣ್ಣ ಪೆಟ್ಟಿಗೆ ಸಮೇತ ಎಲ್ಲವನ್ನು ಕೊಡುತ್ತಾನೆ. ಇದನ್ನು ಅಲ್ಲಿಯೇ ಇದ್ದ ಬಿಜ್ಜಳನ ಮಂತ್ರಿವರ್ಗವು ನೋಡಿ ರಾಜನಿಗೆ ದೂರನ್ನು ನೀಡುತ್ತಾರೆ. ಬಸವಣ್ಣ ಹೊನ್ನ ಪೆಟ್ಟಿಗೆಗಳನ್ನು ಮಿಂಡಜಂಗಮರಿಗೆ ನೀಡುತ್ತಾ ಭಂಡಾರದ ಹಣವೆಲ್ಲವನ್ನೂ ಹಾಳು ಮಾಡುತ್ತಿದ್ದಾನೆಂದು ಆರೋಪಿಸುವರು. ಈ ವಿಷಯ ಕೇಳಿದ ರಾಜನು ಬಸವಣ್ಣನನ್ನು ಕರೆಸಿ 'ನಿನ್ನನ್ನು ದಂಡಿಸಲಾಗದೆಂದು ಭಂಡಾರದೊಳಗಿರುವ ಹಣವೆಲ್ಲವನ್ನು ಹಾಳು ಮಾಡಿರುವೆಯಲ್ಲ ಬಸವಣ್ಣ ಪರ ಧನವನ್ನು ಅಪಹರಿಸುವುದಿಲ್ಲ ಎಂಬ ನಿನ್ನ ಭಾಷೆಯನ್ನು ಮರೆತು ಆ ಹಣವನ್ನು ಏಕೆ ತೆಗೆದುಕೊಂಡೆ' ಎನ್ನುತ್ತಾ ಹೆಚ್ಚು ಮಾತುಗಳ ಅವಶ್ಯವಿಲ್ಲ ಈ ಆರೋಪಕ್ಕೆ ಉತ್ತರವನ್ನು ನೀಡಿ ನೀನು ಭಂಡಾರದ ಹುದ್ದೆಯನ್ನು ಬಿಟ್ಟು ಹೋಗು ಎಂದು ಬಯ್ಯುತ್ತಾನೆ. ಆಗ ಬಸವಣ್ಣ ನಸುನಗುತ ಬಿಜ್ಜಳನಿಗೆ ಹೀಗೆ ಹೇಳುತ್ತಾನೆ. ಪರಮೇಶ ಭಕ್ತಿಯೆಂಬ ಸುರಧೇನುವಿರುವಾಗ, ಹರಭಕ್ತಿಯೆನ್ನುವ ಕನಕಾಚಲವಿರುವಾಗ, ಭಕ್ತನು ಆಶಿಸುತ್ತಾನೆಯೇ ಪರಧನಕ್ಕೆ ಎನ್ನತ್ತಾ ಸಿಂಹವೆಂದಾದರು ಹುಲ್ಲು ಮೇಯುವುದೇ? ಕ್ಷೀರಾಬ್ಧಿಯಲಿ ಆಡುವ ಹಂಸವು ಕೆಸರಿನಲಿ ಆಡಲಿಚ್ಚಿಸುವುದೇ? ಚೂತಫಲಗಳನ್ನು ತಿನ್ನುವ ಗಿಳಿಯು ಬೂರುಗ ಬೀಜಕ್ಕೆ ಆಶಿಸುವುದೆ? ಎಂದು ಸೋಮನಾಥ ವರ್ಣಿಸಿದರೆ, ಭೀಮಕವಿ ಮುಂದುವರೆದು

"ಪೊಡವಿ ನಡುಗಿದಡುರಗರಾಜನ
ಹೆಡೆ ಬಳುಕಿದಡೆ ಜಲಧಿ ಬಱತಡೆ
ವಡಬಶಿಖಿ ನಂದಿದಡೆ ಕುಲಶೈಲಂಗಳಲುಗಿದಡೆ
ಉಡುವರಂ ಹಿಮಹುಡುಗಿದಡೆ ರವಿ
ಪಡುವಲುದಯಂಗೆಯ್ದಡಂ ಕೇಳ್
ಮೃಡನ ಭಕ್ತರು ಪರಧನಕ್ಕೆ ಕೈದುಡುಕುವರೆ ಭೂಪ"

(ಎಸ್. ವಿದ್ಯಾಶಂಕರ, ಬ.ಪು., ಸಂಧಿ-೧೦, ಪ-೧೨)

ಎನ್ನುತ್ತಾ ಬಸವಣ್ಣ ನಾನು ನಿಮ್ಮ ಹಣಕ್ಕೆ ದಾಸನಾಗಿಲ್ಲ. ಭಕ್ತರ ಹಣವನ್ನು ಭಕ್ತರಿಗೆ ಕೊಟ್ಟಿದ್ದೇನೆ. ನಿನ್ನ ಹಣದಲ್ಲಿ ಒಂದಾಣೆಯನ್ನು ಮುಟ್ಟಿಲ್ಲ. ಸಂದೇಹವನ್ನು ಬಿಟ್ಟು ಎಣಿಸು ನಿಮ್ಮ ಹಣದಲ್ಲಿ ಲೋಪವುಂಟಾಗಿದ್ದರೆ ನಾನು ಈಶ ಭಕ್ತನೇ ಅಲ್ಲ ಎಂದು ಬಿಜ್ಜಳನಿಗೆ ಉತ್ತರ ಕೊಡುತ್ತಾನೆ. ಅಂತೆಯೇ ಬಿಜ್ಜಳ ಹೊನ್ನ ಪೆಟ್ಟಿಗೆಗಳನ್ನು ತೆಗೆಸಲು ಅಲ್ಲಿನ ಧನಕನಕವು ನೂರು ಪಟ್ಟು ಹೆಚ್ಚಾಗಿರುವುದನ್ನು ನೋಡಿದ ಬಿಜ್ಜಳ ಬಸವಣ್ಣನನ್ನು ಕೀರ್ತಿಸುತ್ತ ಹಿಂದಿರುಗಿದನು.

ಈ ಪವಾಡ ಕಥೆಯ ವರ್ಣನೆಗಳಲ್ಲಿ ಭೀಮಕವಿ ಕೆಲವು ಸೂಕ್ಷ್ಮ ವಿಚಾರಗಳನ್ನು ಸ್ಪಷ್ಟವಾಗಿ ಹೇಳಿರುವುದು ಕಂಡುಬರುತ್ತದೆ. ತೆಲುಗು ಪುರಾಣದಲ್ಲಿ ಬಸವಣ್ಣನ ವಿರುದ್ಧ ಆರೋಪಿಸಿದವರು ಮಂತ್ರಿವರ್ಗ ಎಂದು ಮಾತ್ರ ಹೇಳಲಾಗಿದೆ. ಕನ್ನಡ 'ಬಸವಪುರಾಣ'ದಲ್ಲಿ ಕಾಳಿಮರಸ, ಕರಿಯ ಕೇಶವ, ಚೋಳಿಯಣ್ಣ, ಕುಂದುತಮ ಭೂಪಾಲ, ಕಸವಮಂತ್ರಿ, ಮೇಳಿ ಗರಸರು ಸಮೇತ ರಾಜನಿಗೆ ದೂರು ಹೇಳಿದರು ಎಂದು ಹೇಳಲಾಗಿದೆ. ಇದರಿಂದ ಬಿಜ್ಜಳನ ಆಸ್ಥಾನದಲ್ಲಿದ್ದ ಮಂತ್ರಿಗಳು ಯಾರು ಎಂಬುದು ಸ್ಪಷ್ಟವಾಗಿ ತಿಳಿದಂತಾಗಿದೆ. ಇಂತಹ ನಿಖರವಾದ ಮಾಹಿತಿಗಳನ್ನು ನೀಡುವ ಭೀಮಕವಿಯ ದೃಷ್ಟಿಕೋನ ನಿಜಕ್ಕೂ ಮೆಚ್ಚಿವಂತದ್ದೇ ಆಗಿದೆ.

ಬಿಜ್ಜಳನ ಆಸ್ಥಾನದಲ್ಲಿ ಪ್ರಬಲವಾಗಿ ಬೆಳೆಯುತ್ತಿರುವ ಬಸವಣ್ಣನನ್ನು ನೋಡಿ ಸಹಿಸದ ಅಸಂತೃಪ್ತರು ಅನ್ಯಮಾರ್ಗಗಳ ಮೂಲಕ ಹೇಗೆ ನಿಯಂತ್ರಿಸಲು ಯೋಚಿಸುತ್ತಿದ್ದರು ಎಂಬುದು ಮತ್ತು ಬಸವಣ್ಣನ ಪ್ರಾಮಾಣಿಕವಾದ ಬದುಕಿನ ಮತ್ತೊಂದು ಮುಖವನ್ನು ಪರಿಚಯಿಸುವುದು ಈ ಪವಾಡದ ಹಿಂದಿನ ಮುಖ್ಯ ಉದ್ದೇಶವಾಗಿದೆ.

**೪. ಗೊಲ್ಲತಿಯ ಮೊಸರಿನ ಮಡಿಕೆಯನ್ನು ಆಗಸದಲ್ಲಿ ನಿಲ್ಲಿಸಿದ ಪವಾಡ**

ಈ ಪವಾಡ ಹರಿಹರನಲ್ಲಿಲ್ಲ. ಮೊದಲಿಗೆ 'ಬಸವಪುರಾಣ'ಗಳಲ್ಲಿ ಬಂದಿದೆ. ಬಿಜ್ಜಳ ಮತ್ತು ಬಸವಣ್ಣನಾದಿಯಾಗಿ ಎಲ್ಲರೂ ಸಭೆಯಲ್ಲಿರುವಾಗ ಇದ್ದಕ್ಕಿದ್ದಂತೆಯೇ ಬಸವಣ್ಣ ತನ್ನೆರಡೂ ಕೈಗಳನ್ನು ಚಾಚಿ ಅಂಜದಿರು ಓಹೋ ಎನ್ನುತ್ತಾ ನಿಲ್ಲುವನು. ಇದನ್ನು ಕಂಡು ಸಭೆಯಲ್ಲಿದ್ದವರೆಲ್ಲ ಬಸವಣ್ಣನಿಗೆ ಮರುಳುಂಟಾಗಿದೆ ಎಂದು ನಗಲಾರಂಭಿಸಿದ. ಬಿಜ್ಜಳನು ಬಸವಯ್ಯಾ ಭಕ್ತಿರಸ ತಲೆಗೇರಿ ನಿನಗೆ ಶಿವಮರುಳು ಉಂಟಾಗಿದೆ. ತುಂಬು ಸಭೆಯಲ್ಲಿ ನೀನು ಈ ರೀತಿ ಮಾಡಲು ಕಾರಣವೇನು ಎಂದು ಕೇಳಿದಾಗ, ಬಸವಣ್ಣ ಚಿಂತಿಸುತ್ತಾ ಈ ವಿಷಯುವನ್ನು ಹೇಳಿದರೆ ಸ್ವಕೀರ್ತಿಯನ್ನು ಪ್ರಶಂಸಿಕೊಂಡಂತಾಗುತ್ತದೆ. ಹೇಳದಿದ್ದರೆ ಸಭೆಯಲ್ಲಿ ನಗೆಪಾಟಲಾಗುತ್ತೇನೆ ಎಂದುಕೊಳ್ಳುತ್ತಾ ಹೀಗೆ ಹೇಳುತ್ತಾನೆ.

ದ್ರಿಪುರಾರಿ ಗುಡಿ ತೂರ್ಪುದೆಸ ನೇರುನೇಲಂ
ಗಪಿಲೇಶ್ವರಂ ಬಂದುಂದಪಸಿ ಯೊಕ್ಕರುಂಡು
ಆ ಲಿಂಗಮುನಕು ನಿತ್ಯಮು ನಾಜುವುಟ್ಲ
ಪಾಲ ಮಜ್ಜನ ಮಾರ್ಪಂ

(ಗೂ.ವೆಂ.ಸು.(ಸಂ), ಬ.ಪು., ದ್ವಿಆ., ಸಾಲು. ೬೩೧-೬೩೪)

(ತ್ರಿಪುರಾರಿಯ ಗುಡಿಯ ಪೂರ್ವ ದಿಕ್ಕಿನಲ್ಲಿ ಕಪಿಲೇಶ್ವರನೆಂಬ ತಾಪಿಸಿಯೊಬ್ಬನು ನಿತ್ಯ ಲಿಂಗಕ್ಕೆ ಖಂಡುಗವಾರು ಹಾಲು ಮಜ್ಜನ ಗೈಯ್ಯುವಾಗ)

"ಭೂ ವಿನುತ ಕಪಿಲೇಶ್ವರಂ ತ
ದ್ದೇವದೇವಂಗೊರ್ಬ ತಾಪಸಿ

ಸಾವಿರಱುನೂಱ್ ಖಂಡುಗ ಕ್ಷೀರಾಭಿಷೇಕವನು
ಓವಿ ಮಾಡಲು ಬೀದಿಬೀದಿಗೆ
ತೀವಿ ಕಾಲುವೆಗಟ್ಟಿ ಹರಿಯೆ ಗ
ಜಾವಳಿಯ ಪದಘಟ್ಟಣದಿ ಜೌಗೆದ್ದ ಕೆಸಜೊಳಗೆ"

(ಎಸ್. ವಿದ್ಯಾಶಂಕರ, ಬ.ಪು.ಸಂ.೯, ಪ.೫)

ತ್ರೀಪುರಾಂತಕ ದೇವಾಲಯದ ಪೂರ್ವದಿಕ್ಕಿನಲ್ಲಿರುವ ಕಪಿಲೇಶ್ವರ ಲಿಂಗಕ್ಕೆ ತಾಪಸಿಯೊಬ್ಬನು ಪ್ರತಿದಿನವು ಖಂಡುಗವಾರು ಹಾಲಿನ ಅಭಿಷೇಕ ಮಾಡುತ್ತಿರುತ್ತಾನೆ. ಅವನು ಮಾಡಿದ ಅಭಿಷೇಕದ ಹಾಲು ಪುರಬೀದಿಗಳಲ್ಲಿ ನೀರಿನಂತೆ ಹರಿದು ಆನೆ ಮೊದಲಾದವುಗಳು ಅಲ್ಲಿ ಓಡಾಡಿ ಕೆಸರುಗದ್ದೆಯಂತೆಯಾಗಿದೆ. ಈ ಬೀದಿಗಳಲ್ಲಿ ಮೊಸರು ಮಾರುವ ಓರ್ವ ಗೊಲ್ಲತಿಯು ಕೆಸರಿನಲ್ಲಿ ಕಾಲು ಜಾರಿ ಬೀಳುವಾಗ ಅವಳು ಹೊತ್ತುಕೊಂಡಿದ್ದ ಮೊಸರಿನ ಗಡಿಗೆಯು ಬೀಳುತ್ತಿತ್ತು. ಆಗ ನಾನು ಅದನ್ನು ಕೆಳಗೆ ಬೀಳದಂತೆ ಹಿಡಿದುಕೊಂಡೆ ಎಂದು ಬಸವಣ್ಣ ಸಭೆಗೆ ವಿವರಿಸುತ್ತಾನೆ. ಇದರ ಸತ್ಯಾಸತ್ತತೆಯನ್ನು ಪರೀಕ್ಷೆ ಮಾಡಬೇಕೆಂದು ಆ ಗೊಲ್ಲತಿಯನ್ನು ಕರೆಸಿದಾಗ ಅವಳು ನಡೆದ ಘಟನೆಯೆಲ್ಲವನ್ನೂ ಬಸವಣ್ಣ ಹೇಳಿದಂತೆ ಹೇಳುತ್ತಾಳೆ. ಆಗ ಬಿಜ್ಜಳ ಬಸವಣ್ಣನ ಈ ಅಪ್ರತಿಮ ಮಹಿಮೆಯನ್ನು ಮೆಚ್ಚಿಕೊಳ್ಳುತ್ತಾನೆ.

ಈ ಪವಾಡ ಕಥೆಯಲ್ಲಿ ತೆಲುಗು ಮತ್ತು ಕನ್ನಡ 'ಬಸವಪುರಾಣ'ಗಳಲ್ಲಿ ಹೆಚ್ಚಿನ ವ್ಯತ್ಯಾಸಗಳೇನು ಕಂಡು ಬರುವುದಿಲ್ಲ. ಆದರೂ ಕೆಲ ಸಣ್ಣ ಅಂಶಗಳನ್ನು ಇಲ್ಲಿ ಗಮನಿಸಬಹುದು. ಉದಾಹರಣೆಗೆ– ತೆಲುಗಿನಲ್ಲಿ ಕಪಿಲೇಶ್ವರನೆಂಬ ತಾಪಸಿ ಲಿಂಗಕ್ಕೆ ಖಂಡುಗವಾರು ಕ್ಷೀರಾಭಿಷೇಕ ಮಾಡುತ್ತಾನೆ ಎಂದಿದೆ. ಕನ್ನಡದಲ್ಲಿ ತಾಪಸಿಯ ಹೆಸರು ಲಿಂಗಕ್ಕೆ ನಾಮರೂಪವಾಗಿ ಬಂದಿದೆ. ಹಾಗೆಯೇ ತೆಲುಗಿನಲ್ಲಿ "ಖಂಡುಗವಾರು" ಹಾಲು ಎಂದಿದ್ದರೆ ಕನ್ನಡದಲ್ಲಿ ೧೬,೦೦೦ ಖಂಡುಗ ಎಂಬ ಸಂಖ್ಯೆಯನ್ನು ನೀಡಲಾಗಿದೆ. ನಂತರ ತೆಲುಗಿನಲ್ಲಿ ಗೊಲ್ಲತಿಯ ಹೆಸರು 'ಕಾಳವ್ವೆ' ಎಂದಿದ್ದರೆ ಕನ್ನಡದಲ್ಲಿ 'ಕಾಟಕ' ಎಂಬ ಗೊಲ್ಲತಿ ಎಂದು ಹೇಳಲಾಗಿದೆ. ಈ ಪವಾಡದ ಮೂಲಕ ಬಸವಣ್ಣನನ್ನು ಸರ್ವಾಂತರ್ಯಾಮಿ, ಸಂಕಷ್ಟಗಳು ಎದುರಾದಾಗ ದೂರದೃಷ್ಟಿಯುಳ್ಳ ಅವನನ್ನು ನೆನೆದರೆ ಸಾಕು ಕಷ್ಟಗಳನ್ನು ಪರಿಹರಿಸುತ್ತಾನೆ ಎಂಬುದನ್ನು ಲೋಕಕ್ಕೆ ತಿಳಿಸುವ ಉದ್ದೇಶವಿದೆ.

**೫. ಜಂಗಮೇಶಿ ಶಿವನಿಗೆ ಮೂರನೇ ಕಣ್ಣನ್ನು ತೋರಿಸದ ಪವಾಡ :**

ಬಸವಣ್ಣನು ಪ್ರಸಾದ ವಿನಿಯೋಗ ಮಾಡುತ್ತಾ ಬೇಡಿ ಬಂದವರ ಬೇಡಿಕೆಯನ್ನು ಈಡೇರಿಸುತ್ತಾ ಇರುವಾಗ ಪರಮೇಶ್ವರನಾದ ಶಿವನು ಜಂಗಮ ವೇಶವನ್ನು ಧರಿಸಿಕೊಂಡು "ನನಗೂ ಎಲ್ಲರಂತೆ ಬೇಡಲು ಆಸೆಯಾಗಿದೆ ಎನುತ" ಬಸವಣ್ಣನಲ್ಲಿಗೆ ಬಂದು

"ಚಕ್ಕನ ಸಂಗಮೇಶ್ವರುಂಡ ಯೇತೆಂಚಿ
ಗ್ರಕ್ಕುನ ಮೂಂಡವ ಕನ್ನಡ್ಗಂ ದಡವ"

(ಗೂ.ವೆಂ.ಸು.(ಸಂ), ಬ.ಪು., ದ್ವಿ.ಆ., ಸಾಲು. ೫೦೫–೫೦೬)

(ಚಕ್ಕನೆ ಸಂಗಮೇಶ್ವರನು ಗಕ್ಕನೆ ಮೂರನೆಯ ಕಣ್ಣನ್ನು ಬೇಡಿದಾಗ)

"ಪೂರ್ವರೂಪಮನುಳಿದು ಜಂಗಮ ವೇಷಮಂತಲೆದು
ರಸಿಕತನದೊಳು ಬಂದು ದಿಕ್ಕನೆ
ನೊಸಲಕಣ್ಣಂ ಬೇಡಲೊಡನಂ"

(ಎಸ್. ವಿದ್ಯಾಶಂಕರ, ಬ.ಪು., ಸಂಧಿ-೮, ಪದ್ಯ-೩೦)

ಭೀಮಕವಿ ಇಲ್ಲಿ ಪರಮೇಶ್ವರನ ವಿನೋದವನ್ನು ತೋರಿಸುವ ಪ್ರಯತ್ನ ಮಾಡಿದ್ದಾನೆ. ಬಸವಣ್ಣನ ಪ್ರಸಾದ ವಿನಿಯೋಗದ ಮಹತ್ವವನ್ನು ಮತ್ತಷ್ಟು ಹೆಚ್ಚಿಸಲು ಕವಿ ನೇರವಾಗಿ ಶಿವನನ್ನೇ ಈ ಸನ್ನಿವೇಶದಲ್ಲಿ ತಂದಿದ್ದಾನೆ. ಹೀಗೆ ಬಸವಣ್ಣನಲ್ಲಿಗೆ ಬಂದು ಮೂರನೇ ಕಣ್ಣನ್ನು ಬೇಡಿದ ಶಿವನ ಮಹಿಮೆಯನ್ನು ಸೂಕ್ಷ್ಮವಾಗಿ ಅರಿತ ಬಸವಣ್ಣ "ನಿನ್ನಯ ಮಾಯೆಯನ್ನು ನಾನರಿಯನೇ" ಎನ್ನುತ್ತಾ ಕನ್ನಡಿಯನ್ನು ಅವನ ಮುಂದಿರಿಸಿ ನೋಡು ನಿನಗೆ ಮೂರನೇ ಕಣ್ಣು ಸಹಜವಾಗಿಯೇ ಬಂದಿದೆ. ಮತ್ತೆ ಬೇಡುವುದು ಉಚಿತವೇ? ಎಂದು ಕೇಳಿದಾಗ ನಾಚಿ ನೀರಾದ ಶಿವನು ಅಲ್ಲಿಂದ ಮೆಲ್ಲನೆ ಹೋಗಲು ಪ್ರಯತ್ನಿಸುತ್ತಾನೆ. ಇದನ್ನರಿತ ಬಸವಣ್ಣ ಓಡದಿರು, ಓಡದಿರು ಸಂಗಮನಾಥ ನಾನು ನಿನ್ನಲ್ಲಿ ಏನನ್ನೂ ಬೇಡುವುದಿಲ್ಲ. ದಾಸಿಮಯ್ಯನಂತೆ ತವನಿಧಿ, ಕರಿಕಾಲನಂತೆ ಕನಕವೃಷ್ಟಿಯನ್ನು ಕೇಳುವುದಿಲ್ಲ, ಸ್ವರ್ಗದ ಸೌಖ್ಯಗಳನ್ನು ಬೇಡುವುದಿಲ್ಲ ಎಂದು ಪರಿಪರಿಯಾಗಿ ಬೇಡಿದರೂ ಶಿವನು ನಿಲ್ಲದೆ ಅಲ್ಲಿಂದ ಮಾಯವಾಗುತ್ತಾನೆ. ಈ ಪವಾಡ ಸನ್ನಿವೇಶವು ಎರಡೂ ಕಾವ್ಯಗಳಲ್ಲಿ ಹೆಚ್ಚು ವ್ಯತ್ಯಾಸಗಳಿಲ್ಲದೆ ಬಂದಿದೆ. ಇದರ ಜೊತೆಗೆ ಶರಣರು ತಾವು ನಿರ್ವಹಿಸಿದ ಕಾಯಕಗಳ ಪಟ್ಟಿಯನ್ನು ಬಸವಣ್ಣ ಹೇಳುತ್ತಾನೆ. ಈ ಕಾಯಕಗಳ ಪಟ್ಟಿಯು ಎರಡೂ ಕಾವ್ಯಗಳಲ್ಲಿ ಏಕರೂಪವನ್ನು ಹೊಂದಿವೆ.

**೬. ಶಿವನಾಗಮಯ್ಯನ ಕಾರಾಂಗುಲಿನಿಂದ ಹಾಲು ಕರೆದ ಪವಾಡ :**

ಗುಡ್ಡವ್ವೆ ಎಂಬ ಬಡ ಹೊಲತಿಗೆ ತೊನ್ನಿನ ರೋಗವುಂಟಾಗಿರುತ್ತದೆ. ಇದನ್ನು ಕಂಡ ದ್ವಿಜರು ಅವಳನ್ನು ಕುಷ್ಠರೋಗದಿಂದ ಬಳಲುತ್ತಿರುವ ಹೆಂಗಸು ನೀನು ವಿಪ್ರರಿರುವಂತಹ ಈ ಅಗ್ರಹಾರದೊಳಗೆ ಇರಬೇಡ. ನಿನ್ನಿಂದ ನಮಗೆಲ್ಲ ಈ ಕಾಯಿಲೆ ಅಂಟುತ್ತದೆ ಎಂದು ನಿಂದಿಸುವರು. ಇದರಿಂದ ಮನನೊಂದ ಗುಡ್ಡವ್ವೆ ಊರು ತೊರೆಯಲು ನಿರ್ಧರಿಸಿ ಈ ರೋಗದಿಂದ ಮುಕ್ತಿ ಹೊಂದುವರೆಗೂ ಇಲ್ಲಿ ಕಾಲಿಡುವುದಿಲ್ಲ ಎಂದು ಹೇಳಿ ಹೊರಡುತ್ತಾಳೆ. ಪಾದಗಳು ಕದಲದಾದವು. ಆಗ ಆಕೆ ಮೊಣಕಾಲುಗಳೂರಿ ನಡೆದಳು. ಮೊಣಕಾಲು ಮೊಣಕೈಗಳು ಗಾಯಗಳಾಗಿ ರಕ್ತ ಸುರಿಯಲು ಮಲಗಿಕೊಂಡು ಉರುಳುತ್ತಾ ಹೋದಳು. ಮೈಯೆಲ್ಲಾ ಗಾಯಗಳಾದವು. ಸೌರಾಷ್ಟ್ರದವರೆಗೂ ಹೋದ ಗುಡ್ಡವ್ವೆಗೆ ಶಿವ ಪ್ರತ್ಯಕ್ಷನಾಗಿ ಅವಳ ಭಕ್ತಿಗೆ ಮೆಚ್ಚಿ ತೊನ್ನಿನ ರೋಗವನ್ನು ನಿವಾರಣೆ ಮಾಡುತ್ತಾನೆ. ಮರಳಿ ಅಗ್ರಹಾರಕ್ಕೆ ಬಂದಾಗ ಅಲ್ಲಿನ ವಿಪ್ರರೆಲ್ಲ ತೊನ್ನಿನ ರೋಗದಿಂದ ಬಳಲುತ್ತಿರುತ್ತಾರೆ. ಇದರಿಂದ ಬೇಸರಗೊಂಡ ಬಿಜ್ಜಳ ಸಭೆ ಕರೆದು ಶಿವಭಕ್ತರಿಗೂ ವಿಪ್ರರಿಗೂ ಮತ್ತು ದುರ್ಜಾತಿಯರಿಗೂ ಇರುವ ಭೇದವನ್ನು ಕುರಿತು ಬಸವಣ್ಣನಿಗೆ ಕೇಳುತ್ತಾನೆ. ಆಗ ಬಿಜ್ಜಳ ದುರ್ಜಾತಿ ಹೊಲೆಯರ ಮತ್ತು ಕೆಳಜಾತಿಗಳ ಪರವಾಗಿ ಹೇಳಿದ ಮಾತುಗಳು ತುಂಬಾ ಅರ್ಥಪೂರ್ಣವಾದವುಗಳು. ಎಂಥಾ ದುರ್ಜಾತಿಯಲ್ಲಿ

ಹುಟ್ಟಿದರೇನು ಅವರು ಎಂದಿಗೂ ಶಿವಭಕ್ತರೆ. ಚರಿತ್ರೆಯಲ್ಲಿ ಪ್ರಸಿದ್ಧರೆನಿಸಿಕೊಂಡಿರುವ ಹಾಗೂ ಈ ಭೂಮಿಯಲ್ಲಿನ ಅಗ್ರಜನ್ಮರಿಗೆಲ್ಲ ಗುರುವಾಗಿರುವ ವ್ಯಾಸನು ಹುಟ್ಟಿದ್ದು ಒಬ್ಬ ಮೀನುಗಾರನಿಗಲ್ಲವೆ?, ಕುಲಜರಲ್ಲೇ ಅತ್ಯಂತ ಶ್ರೇಷ್ಠನಾದವನಾದ ವಶಿಷ್ಠನು ಹುಟ್ಟಿದ್ದು ಸೂಳೆ ಊರ್ವಶಿಗೆಯಲ್ಲವೆ? ಮಾತಂಗನೆನ್ನುವ ಬ್ರಹ್ಮರ್ಷಿಯೊಬ್ಬ ಜನಿಸಿದ್ದು ಮಾತಂಗಿಗಲ್ಲವೆ? ಶುನಕ, ಗಾರ್ದಭ, ಮುಚ್ಚ, ಶುಕ, ದರ್ದುರಾದಿ ಮುನೀಂದ್ರಾದಿ ಜಾತಿಗಳೆಲ್ಲ ಶಿವಭಕ್ತಿಯಿಂದ ತಾನೆ ಶಿಷ್ಯವಾದರು? ಎಂದು ಕೆಳಜಾತಿಯವರ ಕುರಿತು ಬಿಜ್ಜಳನಿಗೆ ಬಸವಣ್ಣ ಹೇಳಿದಾಗ, ಇದನ್ನೊಪ್ಪದೆ ಮತ್ತು ತಾತ್ಸಾರ ಭಾವದಿಂದ ಬಿಜ್ಜಳನು "ಕೆಲಸಕ್ಕೆ ಬಾರದ ಇಂತಹ ಮಾತುಗಳು ಹೇಳುವುದು ಅನಾವಶ್ಯಕ. ಭಕ್ತರನ್ನ ಚುವುಟಿದರೆ ಹಾಲು ಸುರಿಯುವುದು, ಬೇರೆಯವರನ್ನು ಚಿವುಟಿದರೆ ರಕ್ತ ಸುರಿಯುವುದೇನು? ಇಂತಹ ಮಾತುಗಳನ್ನು ಹಿಂದೆ ನಾವು ಕೇಳಿಲ್ಲವೆನ್ನುತ್ತಾನೆ"

ಈ ಮಾತುಗಳನ್ನು ಕೇಳಿದ ಬಸವಣ್ಣ ಕೋಪಾವೇಶದಿಂದ ದಿವ್ಯ ಮಂತ್ರೋಪದೇಶ ರಹಿತವಾಗಿರುವ ವ್ರತಭ್ರಷ್ಟರೊಡನೆ, ಶಾಪಾಗ್ನಿಯಲಿ ಬೆಂದಿರುವ ಕರ್ಮ ಚಂಡಾಲರೊಡನೆ, ಪ್ರಾಣಿಗಳನ್ನು ಹಿಡಿದು ಕೊಲ್ಲುವ ಕ್ರೂರಿಗಳೊಡನೆ, ಯಜ್ಞ, ಯಾಗಗಳಿಗೆ ಬಲಿ ನೀಡುವಂತಹ ಪಾಪಾತ್ಮರೊಡನೆ ನಿಂತು ಪ್ರತಿ ಉತ್ತರ ನೀಡಿದರೆ ದೋಷವುಂಟಾಗುತ್ತದೆ. ಆದ್ದರಿಂದ ನಾನು ನಿಮ್ಮೆಲ್ಲರೆದುರು ಶಿವನಾಗಮಯ್ಯನ ಕರದಲ್ಲಿ ಹಾಲು ಕರೆಯುವೆನೆಂದು

"ಶರಣ ನಾಗಯ್ಯನ ಕರಸ್ಥಳ
ಸರಸಿರುಹವಂ ತನ್ನ ಹಸ್ತಾಂ
ಬುರುಹಯುಗದಿಂ ಹಿಡಿದು ಮೆಲ್ಲನೆ ಒತ್ತುತ್ತಿರಲೊಡನೆ
ಅರರೆ ಚಿಮ್ಮಿಸುತಂಬರಂಬರೆ
ಹಿರಿದು ನೆಗೆದಾವರಿಸಿ ಪರ್ಬಿ
ತ್ತರಿದೆನಲು ಶಿವಭಕ್ತಿಯೆಂಬ ಕಾಮಧೇನುವನು"

(ಎಸ್. ವಿದ್ಯಾಶಂಕರ, ಬಪು., ಸಂಧಿ–೫೬, ಪದ್ಯ–೮೨)

ಇದನ್ನು ಕಂಡ ಸಭೆಯಲ್ಲಿದ್ದವರೆಲ್ಲ ವಿಸ್ಮಯಗೊಳ್ಳುತಾರೆ. ಹೀಗೆ ಬಸವಣ್ಣನ ಈ ಭಕ್ತಿ ದೆಸೆದೆಸೆಗೆ ಹಬ್ಬಿ ಅವನ ಘನ ಮಹಿಮೆ ಹಿರಿದಾಗುತ್ತದೆ. ಬಿಜ್ಜಳನಾದಿಯಾಗಿ ಎಲ್ಲರೂ ಬಂದು ಶಿವನಾಗಮಯ್ಯರಿಗೆ ವಂದಿಸುತ್ತಾ ಜಯ ಘೋಷಗಳನ್ನು ಮಾಡುತ್ತಾರೆ. ಈ ಪವಾಡ ಕಥೆಯಲ್ಲಿ ಜಾತಿ ಭೇದಗಳ ಕುರಿತು ಸುಧೀರ್ಘವಾದ ಚರ್ಚೆಯಿದೆ. ಶಿವಭಕ್ತನೆ ಶ್ರೇಷ್ಠನು ಎಂಬುದನ್ನು ಇಲ್ಲಿ ಹೇಳಲಾಗಿದೆ. ಜೊತೆಗೆ ಕೆಳಜಾತಿಗಳ ಶ್ರೇಷ್ಠತೆಯನ್ನು ಕುರಿತು ಬಸವಣ್ಣ ಹೇಳುವ ಮಾತುಗಳು ಅರ್ಥಪೂರ್ಣವಾದವುಗಳಾಗಿವೆ. ಇಲ್ಲಿ ಆ ಕಾಲದ ಜಾತಿವ್ಯವಸ್ಥೆಯ ಕರಾಳ ಮುಖದ ದರ್ಶನವನ್ನು ಕವಿಗಳು ತೋರಿಸಿದ್ದಾರೆ.

**೭. ಗಂಗಾಂಬಿಕೆಯ ಸೀರೆ ಅಕ್ಷಯವಾದ ಪವಾಡ :**

ಈ ಪವಾಡ ಕತೆಯು ಹರಿಹರನಲ್ಲಿ ಬಂದಿಲ್ಲ. ತೆಲುಗು ಮತ್ತು ಕನ್ನಡ ಬಸವಪುರಾಣಗಳಲ್ಲಿ ಒಂದೇ ರೀತಿಯಲ್ಲಿ ಚಿತ್ರಣಗೊಂಡಿದೆ. ಭೀಮಕವಿಯು ಪಟ್ಟಾವಳಿಯ ಸೀರೆಯುಟ್ಟಿದ್ದ ಗಂಗಾಂಬಿಕೆಯ

ಚೆಲುವು ಮತ್ತು ಆಕೆಯು ಸಭಾಮಂದಿರಕೆ ಬರುವ ಸಂದರ್ಭಗಳಲ್ಲಿ ಹೆಚ್ಚಿನ ವರ್ಣನೆಗಳನ್ನು ಮಾಡಿದ್ದಾನೆ. ಇದರಿಂದ ಈ ಸನ್ನಿವೇಶವು ಅದ್ಭುತ ಸ್ತ್ರೀವರ್ಣನೆಗಳಿಂದ ಕೂಡಿದ ರಸವತ್ತಾದ ಭಾಗವಾಗಿದೆ.

ಒಬ್ಬ ವೇಶ್ಯೆಯ ದಾಸಿಯು ಬಸವಣ್ಣನ ಮನೆಗೆ ಬಂದು ಗಂಗಾಂಬಿಕೆ ಉಟ್ಟಿದ್ದ ಸೀರೆಯನ್ನು ಕಂಡು ಆಶ್ಚರ್ಯ ಪಡುತ್ತಾಳೆ. ಈ ವಿಷಯವನ್ನು ತನ್ನೊಡತಿಗೆ ಹೇಳುತ್ತಾ ತಾನು ಇಂತಹ ಸೀರೆಯನ್ನು ಎಂದೂ, ಎಲ್ಲಿಯೂ ನೋಡಿಲ್ಲ ಇದನ್ನು ಪಡೆಯಲೇಬೇಕು ಎಂದು ಸೂಚಿಸುತ್ತಾಳೆ. ಇದರಿಂದ ಮೋಹಗೊಂಡ ವೇಶ್ಯೆಯು ಮಿಂಡನಿಗೆ ನಿನಗೆ ನನ್ನ ಮೇಲೆ ಒಲಮೆಯಿದ್ದರೆ ಗಂಗಾಂಬಿಕೆ ಉಟ್ಟಿರುವ ಸೀರೆಯನ್ನು ತಂದುಕೊಡು ಎಂದಾಗ ಆ ವಿಟನು ಬಸವಣ್ಣನಲ್ಲಿಗೆ ಬಂದು "ಬಸವ ನಿನ್ನ ಸತಿ ಗಂಗಾಂಬಿಕೆ ಉಟ್ಟ ಪಟ್ಟಾವಳಿಯ ಸೀರೆಯನ್ನು ಈಗಿಂದೀಗಲೇ ನನಗೆ ಕೊಡಿಸಬೇಕು" ಎನ್ನುವನು. ಬೇಡಿಬಂದ ಜಂಗಮರಿಗೆ, ಭಕ್ತರಿಗೆ ಇಲ್ಲವೆನ್ನದೆ ಕೊಡುತ್ತಿದ್ದ ಬಸವಣ್ಣ ಈ ಮಾತುಗಳಿಂದ ಕೊಂಚವೂ ಬೇಸರಿಸದೆ ತಕ್ಷಣ ಗಂಗಾಂಬಿಕೆಯನ್ನು ಸಭಾಮಂಟಪಕ್ಕೆ ಕರೆಸುತ್ತಾನೆ. ಅಲ್ಲಿಗೆ ಬಂದ ಮಡದಿಗೆ "ಹುಟ್ಟು ಸಾವುಗಳರಿಯದಿರುವ ಈ ಮಹಾತ್ಮ ನೀನುಟ್ಟ ಸೀರೆಯನ್ನು ಬೇಡುತ್ತಿದ್ದಾನೆ. ಆದ್ದರಿಂದ

"ಹುಟ್ಟುಗೆಯನಿದ್ದಂತೆ ಕೊಡು ಕೊಡು
ಹುಟ್ಟಿಗೆಯನಯ್ಯಂಗೆ ಕೊಟ್ಟಡೆ
ಹುಟ್ಟೆವಿನ್ನಾವೆಂಬವೊಲು ಲಜ್ಜಾಭಿಮಾನವನು
ಯುಟ್ಟುದಂ ಸುಗಿವುತ್ತಾಮಿರಲಾ
ಹುಟ್ಟಿಗೆಯದೊಂದುಡಿಯೊಳಗಲದೆ ಮಿಗೆ ಬೆಳೆವುತಿರಲು"

(ಎಸ್. ವಿದ್ಯಾಶಂಕರ, ಬಪು., ಸಂಧಿ-೧೦, ಪದ್ಯ-೩೩)

ಹೀಗೆ ಅಕ್ಷಯ ವಸ್ತ್ರದಂತೆ ಬೆಳೆಯುತ್ತಿರುವ ಸೀರೆಯನ್ನು ಗಮನಿಸಿದ ಆ ವಿಟನು ಬಸವಣ್ಣನನ್ನು ತಡೆದು, ತನಗೆ ಇಷ್ಟು ಸೀರೆ ಸಾಕೆನುತ್ತಾ ಮೂಟೆ ಕಟ್ಟಿ ತೆಗೆದುಕೊಂಡು ಹೋಗುತ್ತಾನೆ. ಈ ಪವಾಡ ಕತೆಯಿಂದ ಗಂಗಾಂಬಿಕೆಯ ಪಾವಿತ್ರ್ಯತೆಯನ್ನು ಜಗತ್ತಿಗೆ ತೋರಿಸುವುದು ಆ ಮೂಲಕ ಬಸವಣ್ಣನ ಘನತೆಯನ್ನು ಹೆಚ್ಚಿಸುವ ಕಾರ್ಯವನ್ನು ತೆಲುಗು ಮತ್ತು ಕನ್ನಡ ಪುರಾಣಗಳಲ್ಲಿ ಮಾಡಲಾಗಿದೆ.

ಇದೇ ಸಂದರ್ಭದಲ್ಲಿ ತನಗಿಂತಲೂ ಮೊದಲು ಈ ರೀತಿ ಬೇಡಿಬಂದವರಿಗೆ ದಾನಮಾಡಿದ ಹಿರಿಯ ಭಕ್ತರನ್ನು ಬಸವಣ್ಣ ನೆನಪಿಸಿಕೊಳ್ಳುವ ಪ್ರಸಂಗ ಎರಡೂ ಕಾವ್ಯಗಳಲ್ಲಿ ಏಕರೂಪವಾಗಿ ಬಂದಿದೆ. ಇಡುಗುಡಿ ನಯಾನರು ಎಂಬ ಶಿವಭಕ್ತ ಸತಿಯ ಸೀರೆಯನ್ನು ಕೊಟ್ಟದ್ದು, ಹನ್ನೆರಡು ವರ್ಷಗಳು ಸತತವಾಗಿ ನೇಯ್ದ ಹನ್ನೆರಡು ಮೊಳದ ಬಂಗಾರದ ಸೀರೆಯನ್ನು ತಾಪಸಿಯೊಬ್ಬನಿಗೆ ಕೇಳಿದ ತಕ್ಷಣ ಕೊಟ್ಟ ಜೇಡರ ದಾಸಿಮಯ್ಯನನ್ನು, ಪೆರ್ಮಾಡಿಯೆಂಬುವನು ತನ್ನ ಸಕಲ ಸಂಪತ್ತೆಲ್ಲವನ್ನು ಭಕ್ತರಿಗೆ ದಾನಮಾಡಿದ್ದು, ಮಾನಕಂಜರ ಎಂಬುವನು ತನ್ನ ಮಗಳ ಮದುವೆ ಸಮಯದಲ್ಲಿ ತಾಪಸಿಯೊಬ್ಬ ಕೇಳಿದ ಎಂದಾಕ್ಷಣ ಮಗಳ ಕೂದಲನ್ನೆ ಕತ್ತರಿಸಿ ಕೊಟ್ಟಿದ್ದನ್ನು ಬಸವಣ್ಣ ನೆನಪಿಸಿಕೊಳ್ಳತ್ತಾನೆ.

೮. ಲಿಪಿಯ ಪವಾಡ :

ಈ ಪವಾಡ ಕತೆಯು ಹರಿಹರನಲ್ಲಿಯೂ ಮತ್ತು ಪಾಲ್ಕುರಿಕೆ ಸೋಮನಾಥನಲ್ಲಿಯೂ ಬಂದಿಲ್ಲ. ಮೊದಲ ಬಾರಿಗೆ ಭೀಮಕವಿ ಈ ಪವಾಡವನ್ನು ಚಿತ್ರಿಸಿದ್ದಾನೆ. ಬಹುಶಃ ಈ ಪವಾಡ ವಿಷಯವಾಗಿ ಹರಿಹರನಿಗೆ, ಸೋಮನಾಥನಿಗೆ ತಿಳಿದಿರಲಿಕ್ಕಿಲ್ಲ. ಭೀಮಕವಿಯ ಕಾಲಕ್ಕೆ ಈ ಕತೆ ಜನರ ಬಾಯಲ್ಲಿ ಪ್ರಚಲಿತದಲ್ಲಿತ್ತು ಎನಿಸುತ್ತದೆ. ಹಾಗಾಗಿ ಭೀಮಕವಿ ತನ್ನ ಪುರಾಣದಲ್ಲಿ ಈ ಪವಾಡವನ್ನು ಚಿತ್ರಿಸಿದ್ದಾನೆ. ಅಥವಾ ಕಥಾರಂಭದಲ್ಲಿ ಹಲವು ವಿದ್ಯೆಗಳನ್ನು ಕಲಿತು, ಸಕಲವಿದ್ಯಾಪಾರಂಗತನೆಂದು ಹೇಳಿದ ಭೀಮಕವಿ ಈ ಸಂದರ್ಭದಲ್ಲಿ ಅದರ ಪ್ರತಿಪಾದನೆಗೆಂಬಂತೆ ಯಾರೂ ಅರಿಯದ ಲಿಪಿಯು ಬಸವಣ್ಣನಿಗೆ ತಿಳಿಯುತಿತ್ತು ಎಂದು ಹೇಳುವ ಮೂಲಕ ಬಸವಣ್ಣನ ವ್ಯಕ್ತಿತ್ವವನ್ನು ಮತ್ತಷ್ಟು ಹೆಚ್ಚಿಸುವ ಉದ್ದೇಶವೂ ಭೀಮಕವಿಗೆ ಬಂದಿರಬೇಕು. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಈ ಪವಾಡ ಕಥೆಯನ್ನು ಹೇಳಿದ್ದಾನೆ. ಈ ಪವಾಡದ ಮೂಲಕ ಭಂಡಾರಿಯಾಗಿ ಬಿಜ್ಜಳನ ಅರಮನೆಗೆ ಬಂದ ಬಸವಣ್ಣನ ಬುದ್ಧಿವಂತಿಕೆಯನ್ನು ಅವನ ಮಹಿಮೆಯನ್ನು ವಿಶೇಷವಾಗಿ ಪರಿಚಯಿಸುವ ಉದ್ದೇಶದಿಂದ ಇಲ್ಲಿ ಚಿತ್ರಿಸಲಾಗಿದೆ. ಅರಮನೆಯ ಎಲ್ಲಾ ವಿದ್ವಾಂಸರಿಗಿಂತಲೂ ಬಸವಣ್ಣನ ಪಾಂಡಿತ್ಯ ಮಿಗಿಲಾದದ್ದು ಎಂಬುದನ್ನು ತಿಳಿಸುವ ಉದ್ದೇಶವೂ ಈ ಪವಾಡದ ಹಿಂದಿದೆ. ಭೀಮಕವಿಯು ಈ ಪವಾಡಕತೆಯನ್ನು ಹೇಳುವುದು ಹೀಗೆ; ಸಕಲ ಮರ್ಯಾದೆಗಳಿಂದ ಪುರಬೀದಿಗಳಲ್ಲಿ ಭವ್ಯ ಮೆರವಣಿಗೆಗಳ ಮೂಲಕ ಅರಮನೆಗೆ ಆಗಮಿಸಿದ ಬಸವಣ್ಣ ಬಿಜ್ಜಳನಾದಿಯಾಗಿ ಸಭೆಯಲ್ಲಿರಲು ಆಕಾಶದಿಂದ ಹರಲಿಖಿತವೊಂದು ಅಲ್ಲಿಗೆ ಬೀಳುತ್ತದೆ. ಬಿಜ್ಜಳ ಇದನ್ನು ಆಸ್ಥಾನದ ಪಂಡಿತರೆಲ್ಲರಿಗೂ ತೋರಿಸುತ್ತಾನೆ. ಆ ಲಿಖಿತದಲ್ಲಿನ ಲಿಪಿಯನ್ನು ಯಾರಿಂದಲೂ ಓದಲು ಸಾಧ್ಯವಾಗುವುದಿಲ್ಲ. ತೆಲುಗುಲಿಪಿ, ನಾಗರಲಿಪಿ, ಗ್ರಂಥಲಿಪಿ, ಹಳಗನ್ನಡಲಿಪಿ, ದ್ರಾವಿಡಲಿಪಿ, ಪಾರ್ಸಿಲಿಪಿ, ಲಾಳಲಿಪಿ ಮೊದಲಾದ ಲಿಪಿಗಳನ್ನು ಓದಬಲ್ಲ ವಿದ್ವಾಂಸರನ್ನು ಕರೆಸಿ ತೋರಿಸಿದರೂ ಲಿಪಿಗಳನ್ನು ಓದಲಾಗಲಿಲ್ಲ. ಆಸ್ಥಾನ ಪಂಡಿತರೆಲ್ಲ ಇದನ್ನು ಗುಹಗಣ ಪರಜವನ ಮಾಲಿ ಮುಖ್ಯರ್ಗಲ್ಲದೆ ಈ ನರಮಾನವರಿಗೆ ಅದು ಅರಿಯದು ಎಂದು ಹೇಳುವರು. ಬಿಜ್ಜಳನು ಇದನ್ನು ಓದಿ ಅರ್ಥವನ್ನು ಹೇಳಿದವರಿಗೆ ನನ್ನ ಸಕಲ ನಿಯೋಗದ ಒಡೆತನವನ್ನು ಒಪ್ಪಿಸುತ್ತೇನೆ ಎಂದು ಹೇಳುವನು. ಆಗ ಬಸವಣ್ಣನು ಓಲೆಯನ್ನು ಪಡೆದು ನಮಸ್ಕರಿಸಿ ಸಂಪೂರ್ಣವಾಗಿ ಓದಿ ಬಿಜ್ಜಳನಿಗೆ ಮುಂದಿನಂತೆ ಹೇಳುತ್ತಾನೆ.

"ನನ್ನಿಯಂ ಪೇಳುವೆನರಸ ಕೇ
ಳಿನ್ನು ಚಾಳೋಕ್ಯಾನ್ವಯದವರು
ಮುನ್ನ ನಿಕ್ಷೇಪಿಸಿದುದೆಂಬತ್ತೆಂಟು ಕೋಟಿ ಧನ
ನಿನ್ನ ಸಿಂಹಾಸನದ ಕೆಳಗಿದೆ
ಯಿನ್ನು ಸಂಶಯವೇನಿಕಗಿಸು ನಾ
ನಿನ್ನ ಕಣ್ ಮನವೆಯ್ದೆ ತಣಿಯಲು ತೋಱಿದೆಪೆನೆನಲು"

(ಎಸ್. ವಿದ್ಯಾಶಂಕರ, ಬಪು., ಸಂಧಿ-೫, ಪದ್ಯ-೫೭)

ಎಂದು ಹೇಳಿದಾಗ ಬಿಜ್ಜಳ ಸಿಂಹಾಸನದ ಕೆಳಗೆ ಅಗೆಸಲು ಅಲ್ಲಿದ್ದ ಧನಕನಕವು, ಬಚ್ಚಿಟ್ಟ ನಿಧಿಯಂತೆ, ಕನಕಗರಿಯೇ ಮೂಡಿದಂತೆ ಕಂಡುಬಂತು. ಅದನ್ನು ಹೊರತೆಗೆದು ಬಸವಣ್ಣನ ಕರಸ್ಪರ್ಷದಿಂದ ಅಲ್ಲಿನ ಹಣವು ನೂರ್ಮಡಿಯಾಯಿತು. ಇದನ್ನು ಕಂಡ ಬಿಜ್ಜಳ ಬೆಕ್ಕಸ ಬೆರಗಾಗಿ ಬಸವಣ್ಣನನ್ನು ತಬ್ಬಿಕೊಂಡು ಕೊಂಡಾಡುತ್ತಾನೆ.

ಬಸವಣ್ಣನ ಈ ಅಪ್ರತಿಮ ಮಹಿಮೆಯನ್ನು ಗೌರವದಿಂದ ಹೊಗಳುತ್ತಾ, ನೀನು ಪುರುಷನಲ್ಲ ಯುಗಾದಿಮ. ಆ ಪುರುಷರಿಗೆ ಮೊದಲ ಪುರುಷನು, ಗುಣತ್ರಯದ ಪುರುಷ, ತ್ರಿಭುವನ ಸ್ಥಾಪನಾಚಾರ್ಯಕ್ಕೆ ಪುರುಷನು ನೀನು. ನಮ್ಮನ್ನು ಸಲುಹಬೇಕೆಂದು ಬಿಜ್ಜಳ ಬಸವಣ್ಣನಿಗೆ ಕೇಳುತ್ತಾನೆ. ಬಿಜ್ಜಳನ ಸಕಲ ನಿಯೋಗ ಮತ್ತು ಪುರಜನಗಳು ಬಸವಣ್ಣನನ್ನು ಕೀರ್ತಿಸುತ್ತಿರಲು ಬಿಜ್ಜಳ ಬಸವಣ್ಣನನ್ನು ಕರೆದು ಹಿರಿಯ ಗದ್ದುಗೆಯ ಮೇಲೆ ಕೂರಿಸಿ ಈ ಧರೆಗೆ, ಅಖಿಲ ಸಾಮ್ರಾಜ್ಯಕ್ಕೆ ನೀನೆ ಅರಸು, ಬಸವರಾಜ ನಿನ್ನನ್ನೆಲ್ಲಾ ದೆಸೆದೆಸೆಗೆ ನಂಬಿದೆನೆನುತ ನಮ್ಮನ್ನು ಉದ್ಧರಿಸು ಎಂದು ನಮಿಸುತ್ತಾನೆ.

ಹೀಗೆ ಈ ಪವಾಡ ಕತೆಯು ಭೀಮಕವಿಯಲ್ಲಿ ವರ್ಣಿತವಾಗಿದೆ. ಕನ್ನಡ 'ಬಸವಪುರಾಣ'ದ ನಂತರ ರಚನೆಗೊಂಡ ವೀರಶೈವ ಸಾಹಿತ್ಯದಲ್ಲಿ, ಅದರಲ್ಲೂ ಬಸವಣ್ಣನ ಪವಾಡ ಚಿತ್ರಣಗಳೊಳಗೊಂಡ 'ಶಿವತತ್ವ ಚಿಂತಾಮಣಿ', 'ಸಿಂಗಿರಾಜ ಪುರಾಣ' ಮುಂತಾದ ಕಾವ್ಯಗಳಲ್ಲಿ ಈ ಪವಾಡವು ಬೇರೆ ಬೇರೆ ಸ್ವರೂಪಗಳಲ್ಲಿ ವರ್ಣಿತಗೊಂಡಿದೆ.

**೯. ಚರಲಿಂಗ ಪ್ರಾಣಿತ್ವದ ಪವಾಡ(ಶಿವಯೋಗ ನಿದ್ರಾಮುದ್ರೆಯ ಪವಾಡ) :**

ಈ ಪವಾಡವು ಹರಿಹರನಲ್ಲಿ ಬಂದಿದೆ. ಪಾಲ್ಕುರಿಕೆ ಸೋಮನಾಥನ 'ಬಸವಪುರಾಣ'ದಲ್ಲಿ ಇಲ್ಲ. ಭೀಮಕವಿ ಹರಿಹರನ ರಗಳೆಯಿಂದ ಈ ಮಾಹಿತಿಯನ್ನು ಪಡೆದಿರಬೇಕು. ಅಥವಾ ಜನರಿಂದ ಕೇಳಿ ತಿಳಿದಿರಬೇಕು. ಈ ಪವಾಡವನ್ನು ಹರಿಹರ ನಿರೂಪಿಸಿದಂತೆಯೇ ತಾನು ಕೂಡ ನಿರೂಪಿಸಿದ್ದಾನೆ. ಈ ಪವಾಡವು ಭಿಮಕವಿಯಲ್ಲಿ ಹೀಗೆ ವರ್ಣಿತವಾಗಿದೆ. ಬಸವಣ್ಣನು ಹಲವು ಜಂಗಮರೊಡಗೂಡಿ ಲಿಂಗಾರ್ಚನೆ ಮಾಡುವುದರಲ್ಲಿ ತಲ್ಲೀನನಾಗಿ ಸೂರ್ಯಕಿರಣಗಳು ಅಸ್ತಮಿಸಿದಂತೆ ಶಿವನ ಭಕ್ತಿಯಲಿ ತಾನು ಅಸ್ತಮಿಸುವನು. ಹೀಗೆ ಶಿವ ಲೀಲೆಯಲಿ ತೊಡಗಿ ಶಿವನಿದ್ರಾಮುದ್ರೆಯಲಿ ತಲ್ಲೀನನಾಗಿರಲು ಚೆನ್ನಬಸವಣ್ಣನು ಬಸವಣ್ಣನ ಈ ಭಕ್ತಿಯ ಮಹೊನ್ನತಿಯನ್ನು ಹಲವು ವಿಧದಲ್ಲಿ ಕೊಂಡಾಡುವನು. ಈ ಸಮಯದಲ್ಲಿ ಜಂಗಮನೊಬ್ಬ ಬಸವಣ್ಣನನ್ನು ಕಾಣಲು ಬರುತ್ತಾನೆ. ದ್ವಾರಪಾಲಕರು ಬಸವಣ್ಣನು ಶಿವಯೋಗ ನಿದ್ರೆಯಲ್ಲಿ ತೊಡಗಿರುವನು ಎಂದು ಹೇಳಿದಾಗ ಆ ಜಂಗಮ ಹಿಂದಿರುಗುತ್ತಾನೆ. ಆಗ

"ಬಸವನಿರವಂ ದ್ವಾರಪಾಲರ
ದೆಸೆಯಾಳಜಿದು ಮರಳ್ದು ತಾಂ ಗಮ
ನಿಸಲೊಡನೆ ಬಸವಣ್ಣ ಜಂಗಮ ಜೀವ ತಾನಾಗಿ
ಬಸವರಾಜನ ಜೀವಮುಂ ಭರ

ವಸದೊಳಾ ಲಿಂಗೈಕ್ಯನೊಡನಂ

ತೊಸೆದು ಪೋಗಲು ಹೆದಱುತಂ ಪರಿಚರರು ಸಂದಣಿಸಿ"

(ಎಸ್. ವಿದ್ಯಾಶಂಕರ, ಬಪು., ಸಂಧಿ-೩೪, ಪದ್ಯ-೪೨)

ಹೀಗೆ ಹಿಂದಿರುಗಿದ ಜಂಗಮನ ಜೊತೆಯಲ್ಲಿಯೇ ಬಸವಣ್ಣನ ಜೀವವು ಹೋಗುತ್ತದೆ. ಸಂಜೆಯಾದರೂ ಬಸವಣ್ಣ ಶೀವಯೋಗ ನಿದ್ರಾಮುದ್ರೆಯಿಂದ ಎಚ್ಚರಗೊಳ್ಳದಿರಲು ಅಲ್ಲಿದ್ದವರೆಲ್ಲಾ ದಿಗಿಲುಗೊಳ್ಳುತ್ತಾರೆ. ಇದಾವ ಪ್ರಸ್ತುತವೋ, ಯಾವ ನಿಮಿತ್ತ ಕಾರ್ಯವೋ, ನೆಪವಾವುದೋ ಎನುತ ಇದರ ಸ್ಥಿತಿಯನ್ನರಿಯಲು ಹಿತೈಶಿಗಳನ್ನು, ಕರಣಿಕರನ್ನು, ದ್ವಾರಪಾಲಕರನ್ನು ಕರೆಸುತ್ತಾರೆ. ಬಸವಣ್ಣನ ಇಂದಿನ ಈಶಾರ್ಚನೆಯ ಮಹತ್ವವನ್ನು ತಿಳಿಯಲು ವಚನ ಭಂಡಾರದ ಕವಳಿಗೆಗಳನ್ನು ತಂದು ನೋಡಿ ಇವನ ಭಾಷೆಗಳೇನು ಎಂಬುವುಗಳನ್ನು ತಿಳಿಯಿರಿ. ಈ ರೀತಿಯ ವ್ರತಗಳ ಹಿಂದಿನ ಕ್ರಮವಾವುದು ಎಂಬುದನ್ನು ತಿಳಿಯಿರಿ ಎನ್ನುತ್ತಾ ಎಲ್ಲರೂ ಪರಿತಪಿಸುತ್ತಿದ್ದರು. ಆಗ ಚೆನ್ನಬಸವಣ್ಣನು ಅಲ್ಲಿಗೆ ಬಂದು ವಂದಿಸುತ್ತಾ ನೀವೆಲ್ಲಾ ಶಿವಯೋಗ ನಿದ್ರೆಯಲ್ಲಿ ಅತಿಸುಖಗಳಿಂದ ತೇಲಾಡುತ್ತಿರುವಾಗ ಜಂಗಮನೊಬ್ಬನು ಬಂದು ದ್ವಾರಪಾಲಕರಿಂದ ಬಸವಣ್ಣನ ಶಿವಧ್ಯಾನವನ್ನು ಕೇಳಿ ಹಿಂದಿರುಗುತ್ತಾನೆ. ಅವನ ಜೊತೆ ಬಸವಣ್ಣನ ಪ್ರಾಣವೂ ಹೋಗಿದೆ. ಆದ್ದರಿಂದ ಆ ಜಂಗಮನನ್ನು ಕರೆದುಕೊಂಡು ಬನ್ನಿ ಎಂದು ಹೇಳುತ್ತಾನೆ. ಈ ಲೋಕದ ಭಕ್ತರಿಗೆಲ್ಲ ಪ್ರಾಣಲಿಂಗ ಬಸವಣ್ಣ, ಪ್ರಾಣಲಿಂಗಕ್ಕೆ ತದ್ಗುರು, ಜಂಗಮ ಲಿಂಗವೇ ಮತ್ ಪ್ರಾಣಲಿಂಗಕ್ಕೆ ಸಂಗಮದೇವನೇ ಸಾಕ್ಷಿ ಎಂದು ಹೇಳಿದಾಗ ಪಡಿಗಾರರು, ಜಂಗಮನನ್ನು ಹುಡುಕಿ ತರುತ್ತಾರೆ. ಜಂಗಮ ಬಂದಾಗ ಅವನೊಡನೆ ಬಸವಣ್ಣನ ಪ್ರಾಣವೂ ಬರುತ್ತದೆ. ಈ ಪವಾಡದ ಮುಖ್ಯ ವಿಚಾರವೆಂದರೆ ಬಸವಣ್ಣನ ಉಸಿರೇ ಜಂಗಮರು ಅಥವಾ ಭಕ್ತರು ಎಂಬುದಾಗಿದೆ. ಇಲ್ಲಿ ಬಸವಣ್ಣನ ಜಂಗಮ ಪ್ರೇಮವನ್ನು ಚಿತ್ರಿಸಲಾಗಿದೆ.

**೧೦. ವಿಷವನ್ನು ಅಮೃತವನ್ನಾಗಿ ಮಾಡಿದ ಪವಾಡ :**

ಈ ಪವಾಡವು ತೆಲುಗು ಮತ್ತು ಕನ್ನಡದಲ್ಲಿ ಒಂದೇ ರೀತಿಯಾಗಿದೆ. ಪವಾಡದ ಆರಂಭದಲ್ಲಿ ಕಲ್ಯಾಣಪುರದ ಶರಣ ಶರಣೆಯರ ಹೆಸರುಗಳ ಪಟ್ಟಿಯನ್ನು ಎರಡೂ ಕಾವ್ಯಗಳಲ್ಲಿ ನೀಡಲಾಗಿದೆ. ಶಿವಬ್ರಾಹ್ಮಣರೆಲ್ಲರೂ ಒಗ್ಗೂಡಿ ಬಿಜ್ಜಳನಲ್ಲಿಗೆ ಬಂದು ಬಿಜ್ಜಳಮಹಾರಾಯ ಈ ವೀರಶೈವರು ಶಿವಬ್ರಾಹ್ಮಣರಾದ ನಮಗೆ ಯಾವುದೇ ಪ್ರಸಾದವನ್ನು ನೀಡದೆ ತಾವೇ ಅದರ ಫಲವನ್ನು ಅನುಭವಿಸುತ್ತಿದ್ದಾರೆ. ನಮಗೆ ಈ ಪ್ರಸಾದ ವಂಶಪಾರಂಪರ್ಯವಾಗಿ ಬಂದಿರುವಂತದ್ದು. ಆದ್ದರಿಂದ ನೀವು ಬಸವಣ್ಣನಿಗೆ ಹೇಳಿ ನಮಗೂ ಪ್ರಸಾದ ಸ್ವೀಕರಿಸುವಂತೆ ಅನುಗ್ರಹಿಸು ಇಲ್ಲವಾದಲ್ಲಿ ನಿಮ್ಮ ಅರಮನೆಯ ಬಾಗಿಲು ಬಳಿ ಅಗ್ನಿಕುಂಡ ತೋಡಿಸಿ ಎಲ್ಲರೂ ಅಗ್ನಿಗಾಹುತಿಯಾಗುವೆವು ಎಂದು ಆಗ್ರಹಿಸುತ್ತಾರೆ. ಆಗ ಬಿಜ್ಜಳ ಬಸವಣ್ಣನನ್ನು ಕರೆಯಿಸಿ ಶಿವಬ್ರಾಹ್ಮಣರ ಬೇಡಿಕೆಯನ್ನು ಮುಂದಿಟ್ಟು ಎಲ್ಲರೂ ಸಮನಾಗಿ ಪ್ರಸಾದವನ್ನು ಸ್ವೀಕರಿಸಿರಿ ಎಂದು ಹೇಳುವನು. ಇದಕ್ಕೊಪ್ಪದ ಬಸವಣ್ಣ ನಮ್ಮ

ಭಕ್ತರಿಗಲ್ಲದೆ ನರರಿಗೆ ಕೊಡುವುದಿಲ್ಲ ಎಂದು ವಾದಿಸುತ್ತಾನೆ. ವಾದ ಪ್ರತಿವಾದಗಳು ಬೆಳೆಯುತ್ತಿರಲು ಬಸವಣ್ಣ ಸಿಟ್ಟಿನಿಂದ ನಾವು ಶಿವನಿಗೆ ವಿಷವನ್ನೇ ಪದಾರ್ಥವನ್ನಾಗಿ ಕೊಡುತ್ತೇವೆ. ಅದನ್ನೇ ಸ್ವೀಕರಿಸುತ್ತೀರೋ ಎಂದು ಕೇಳಿದಾಗ ವೀರಶೈವರಾದ ನೀವು ಸ್ವೀಕರಿಸಿದರೆ ನಾವೂ ಸ್ವೀಕರಿಸುತ್ತೇವೆ ಎಂದು ಬ್ರಾಹ್ಮಣರು ಹೇಳುವರು. ಉಭಯ ವೈರಿಗಳ ಅನುಮತದಿಂದ ಬಿಜ್ಜಳ ಎಲ್ಲರನ್ನು ಕರೆದುಕೊಂಡು ದೇವಾಲಯದ ಬಯಲಿಗೆ ಸೇರುವನು. ಈ ಸಂದರ್ಭದಲ್ಲಿ ಭೀಮಕವಿಯು ಬೇಡರನ್ನು ಅವರ ವೇಷಭೂಷಣಗಳನ್ನು ಹೆಚ್ಚಿನ ವರ್ಣನೆಗಳಿಂದ ಚಿತ್ರಿಸಿದ್ದಾನೆ.

"ಒಡಲುಗೊಂಡ ತಮಂಧಪಟವೋ
ನಡೆವ ನೀಲಾದ್ರಿಗಳೋ ಕೈಕಾಲ್
ಪಡೆದ ಕಜ್ಜಳಗಿರಿಗಳೋ ಕರ್ಬೊನ್ನ ಭಿತ್ತಿಗಳೋ
ನುಡಿಗಲಿತ ಮಾತಂಗ ಸಂಗಮೊ
ಹೆಡೆ ಉಡುಗಿದ ಸಿತಾಹಿಗಳೊ ಎನ
ಲೆಡೆವಿಡದೆ ಸಂದಣಿಸಿ ಬೇಡರು ಬಂದರಾಯೆಡೆಗೆ"

(ಎಸ್. ವಿದ್ಯಾಶಂಕರ, ಬಪು., ಸಂಧಿ-೫೭, ಪದ್ಯ-೪೪)

ಅವರ ರೂಪವನ್ನು ಹೇಳುತ್ತಾ ಕೆದರಿದ ತಲೆಗಳು, ಮೆಳ್ಳ ಕಣ್ಣುಗಳು, ಒರಟು ಮುಖಗಳು, ಮುದಿರಿದ ಕಿವಿಗಳು, ಹರಕು ಗಡ್ಡ, ಕೆದರು ಮೀಸೆ, ಪಾಚಿ ಹಲ್ಲುಗಳು, ನಾರುವ ಬಾಯಿ, ಗಂಟು ಕೈಗಳು, ಬರಿಯ ಮೈ, ಡೊಂಕು ಕಾಲುಗಳಿಂದ ಬೇಡರು ಕಾಣುತ್ತಿದ್ದರೆಂದು ವರ್ಣಿಸಲಾಗಿದೆ.

ಈ ಅದ್ಭುತ ಸನ್ನಿವೇಶವನ್ನು ನೋಡಲು ಅಸಂಖ್ಯಾತ ಕಬ್ಬಿಲರು ಜಟಾಧಾರಿಗಳು, ರುದ್ರಾಕ್ಷಿಭೂಷಿತರು, ಮಾಲಾವಿಭೂಷಿತರು, ಅನೇಕ ಶರಣರು, ಶಿವಲಿಂಗಾರಾಧಕರು, ಪರಮ ಶೈವೋದ್ಧರಣಕರಣರು ಪರಸಮಯ ನಿರ್ಧೂಮಧಾಮರು, ಪರಸಮಯ ಕೋಳಾಹಳರು ಇವರ ಜೊತೆ ಆಕಾಶದಲ್ಲಿ ಉಮೆಯ ಸಮೇತನಾಗಿ ಶಶಿಮೌಳಿಯಾದ ಈಶ್ವರ, ವೀರಭದ್ರಾದಿ ಅಸಂಖ್ಯಾತ ಗಣರು ಲೀಲೆಯಿಂದಲೇ ಅಲ್ಲಿ ಸೇರಿದ್ದರು. ಆಗ ಬಸವಣ್ಣನು

"ಒಳಿಗೊಂಡ ಸಮಸ್ತ ಭಕ್ತಜ
ನಾಳಿಸಹಿತಂ ಬಸವಮಂತ್ರಿ ಶಿ
ವಾಲಯಕೆ ನಡೆತಂದು ಪರಮಾನಂದದಿಂದಂದು
ಕಾಲಕೂಟಂ ವತ್ಸನಾಭಿಯು
ಹಾಲಾಹಲಮುಂ ಸಿಂಗಿ ಮೊದಲಾ
ಭೀಳ ಗರಳಂಗಳನವೆಲ್ಲಂ ಕಲಿಸಿ ಅರೆಯಿಸಲು"

(ಎಸ್. ವಿದ್ಯಾಶಂಕರ, ಬಪು., ಸಂಧಿ-೫೭, ಪದ್ಯ-೫೫)

ಹೀಗೆ ನಾನಾ ತರಹದ ವಿಷ ಪದಾರ್ಥಗಳನ್ನು ತರಿಸಿ ಅರೆದು ಕಲಿಸುವಾಗ ಆಕಾಶದಲ್ಲಿ ಹಾರಾಡುವ ಜಂತುಗಳು, ಪಕ್ಷಿಗಳಾದಿಯಾಗಿ ಈ ವಿಷದ ವಾಸನೆಯಿಂದ ಸತ್ತು ನೆಲಕ್ಕೆ ಬೀಳುತ್ತಿದ್ದವು. ಇಂತಹ ಘನಘೋರ ವಿಷವನ್ನು ಕುಡಿದರೆ ಬದುಕುವುದು ಸಾಧ್ಯವೇ ಎಂದುಕೊಂಡರು ಬೇಡರು. ಕೊಪ್ಪರಿಗೆಗಳಲ್ಲಿ ತುಂಬಿದ ವಿಷವನ್ನು ಶಿವಭಕ್ತರಿಗೆಲ್ಲರಿಗೂ ಹಂಚುವಾಗ ಭೂಮಿಯು ಶಿವನ ಮೂರನೆ ಕಣ್ಣು ರೌದ್ರಾಗ್ನಿಯಂತೆ ಭುಗಿಲ್ಲನೆ ಕುದಿದು ಕೆಂಪು ಹೊಗೆಯನ್ನು ಚಿಮ್ಮಲು ವಿಷಾನಿಲ ಇಡೀ ಭೂಮಂಡಲಕ್ಕೆ ವ್ಯಾಪಿಸುತ್ತದೆ. ಇದರಿಂದ ಭೂಲೋಕವೆಲ್ಲ ಅಲ್ಲೋಲಕಲ್ಲೋಲವಾಯಿತು. ಧರೆಯ ಜೀವಿಗಳೆಲ್ಲವು ಬಿದ್ದು ಮೂರ್ಚೆ ಹೋದವು. ಉರಿಯುವ ಬಣವೆಯಲ್ಲಿ ಅರಳು ಸಿಡಿಯುವಂತೆ ಭೂಮಿಯ ಮೇಲೆ ಚಕ್ಕೆಗಳುದುರಿದವು. ಜಲಧಿಗಳು ಕಲಕಿದವು ಇದನ್ನು ಕಂಡ ಬ್ರಹ್ಮನೂ ನಡುಗಿದ. ಹರನು ತಲ್ಲಣಿಸಿದನು.

ಹೊನ್ನಗಿಂಡಿಗಳಲಿ ತುಂಬಿಕೊಂಡು ಬಸವಣ್ಣ ಎಲ್ಲ ಶಿವಶರಣರಿಗೆ ಹಂಚುತ್ತಾ "ಚೆಲ್ಲದೆ ಕುಡಿಯಿರಿ ಚಿಕ್ಕಯ್ಯದೇವ, ಗಾಬರಿಗೊಳಬೇಡಿ ಸಂಗಯ್ಯದೇವ ತರುವೆನು ಸೈರಿಸೆ ತ್ರಿಪುರಾರಿದೇವ, ಸಾಲದೆ ತರಲೇನು ಶಂಕರಚಾರ್ಯ ಕೊಂಕಿಸಬೇಡಯ್ಯ ಶಂಕರದೇವ, ಇನ್ನಷ್ಟು ತರಲೇನು ಲೆಂಕ ಮಂಚಯ್ಯ ಬಡಿಸಲೆ ನಿನಗಷ್ಟು ದೊಡ್ಡಲಿಂಗಯ್ಯ, ಕುಡಿಕೆಯ ತರಲೇನು ಗೊಲ್ಲವರಾಯ" ಎನುತ ಆನೆ ಕುದುರೆಗಳಿಗೆಲ್ಲ ಪ್ರೀತಿಯಿಂದ ಕುಡಿಸಿದನು. ತಾನೂ ಕುಡಿದು ವಿಷವನ್ನು ಅಮೃತವನ್ನಾಗಿ ಮಾಡಿದನು ಬಸವಣ್ಣ. ಇದನ್ನು ಕಂಡ ಶಿವಬ್ರಾಹ್ಮಣರು ಹೆದರಿ ಬಸವಣ್ಣನಿಗೆ ವಂದಿಸಿದರು. ಬಸವಣ್ಣ ವಿಷವನ್ನು ಕುಡಿದು ಅಸಾಮಾನ್ಯಲೀಲೆಯಿಂದ ದಿವ್ಯಾಂಗನಾದ ಎನ್ನುತ್ತಾ ಲೋಕವೆಲ್ಲವೂ ಆಶ್ಚರ್ಯಪಟ್ಟಿತು. ನಿಮ್ಮ ಸರಿಸಮವಾಗಿ ನಾವು ಬರಲು ಸಾಧ್ಯವೇ ನಮ್ಮನ್ನು ಸೋಲಿಸುವುದು ನಿಮಗೆ ಮೆಚ್ಚುಗೆಯೇ ಎಂದು ವಿನಮ್ರವಾಗಿ ಬೇಡುತ ಬೇಡರು ಕೈಮುಗಿದರು.

**೪.೨. ಇತರ ಶರಣರ ಪವಾಡಗಳು :**

ಕನ್ನಡ-ತೆಲುಗು 'ಬಸವಪುರಾಣ'ಗಳಲ್ಲಿ ಬಸವಣ್ಣನ ಚರಿತ್ರೆಯ ಜೊತೆ ಜೊತೆಗೆ ಬಸವಣ್ಣನಿಗಿಂತ ಪೂರ್ವದ ಮತ್ತು ಸಮಕಾಲೀನ ನೂರಾರು ಶರಣರ ಚರಿತ್ರೆಗಳು ಕೂಡಿಕೊಂಡು ಬೃಹತ್ ಪುರಾಣಗಳಾಗಿ ರೂಪಗೊಂಡಿವೆ. ಕವಿಗಳಿಗೆ ಬಸವಣ್ಣ ಎಷ್ಟು ಪ್ರಾಮುಖ್ಯವೋ ಉಳಿದ ಶರಣರೂ ಅಷ್ಟೇ ಪ್ರಾಮುಖ್ಯ. ಆದ್ದರಿಂದ ಎಲ್ಲಾ ಶರಣರ ಚರಿತ್ರೆಯನ್ನು, ಅವರು ತೋರಿದ ಅದ್ಭುತ ಸಾಧನೆಗಳನ್ನು ಚಿತ್ರಿಸಿದ್ದಾರೆ. ಇಲ್ಲಿ ತಮಿಳುನಾಡಿನ ಪುರಾತನ ಶರಣರು, ಕನ್ನಡ ತೆಲುಗು ಮತ್ತು ಇತರೆ ಸುತ್ತಲ ಪ್ರದೇಶಗಳ ನೂರಾರು ಶರಣರು ಬದುಕು ಇಲ್ಲಿ ಅನಾವರಣಗೊಂಡಿದೆ. ಅಂತಹ ಶರಣರಲ್ಲಿ ಕೆಲವರು ಅತ್ಯಂತ ಮಹಿಮಾಶಾಲಿಗಳು, ಪವಾಡ ಪುರುಷರೂ ಆಗಿದ್ದಾರೆ. ಬಸವಣ್ಣನಂತೆಯೇ ಒಳ್ಳೆಯ ಕಾರ್ಯ ಸಾಧನೆಗೆ ತಮ್ಮನ್ನು ಒಪ್ಪಿಸಿಕೊಂಡು ಅದರಲ್ಲಿ ಯಶಸ್ವಿಯಾಗುವವರೆಗೂ ಹೋರಾಟ ಮಾಡುತ್ತಾರೆ. ಪವಾಡಗಳನ್ನು ಸೃಷ್ಟಿ ಮಾಡುವ ಮೂಲಕ ಅದ್ಭುತ ಸಾಧನೆಗಳನ್ನು ಮಾಡಿ ತಮ್ಮ ಕೀರ್ತಿ ಅಜರಾಮರವಾಗಿರುವಂತೆ ಮಾಡಿದ್ದಾರೆ. ಇಂತಹ ಕೆಲವು ಪ್ರಮುಖ ಶರಣರು ಮಾಡಿದ ಪವಾಡಗಳನ್ನು, ಅದರಿಂದ ಸಮಾಜಕ್ಕೆ ನೀಡಿದ ಸಂದೇಶವನ್ನು ಮುಂದೆ ಚರ್ಚಿಸಲಾಗಿದೆ.

೧. ಹಾವಿನಹಾಳ ಕಲ್ಲಯ್ಯ :

ಹಾವಿನಾಳ ಎಂಬ ಊರಿನಲ್ಲಿರುವ ಕಲ್ಲಯ್ಯನೆಂಬ ಶಿವಭಕ್ತನು ಶಿವನ ರೂಪವೇ ಹೊರತು ನರಮಾನವನಲ್ಲ ಎಂಬ ಖ್ಯಾತಿಯನ್ನು ಪಡೆದಿದ್ದನು. ಈ ಹಾವಿನಹಾಳ ಊರಿನಲ್ಲಿದ್ದ ಒಂದು ಸರ್ಪವು ಆ ಊರಿಗೆ ಬಂದವರನ್ನೆಲ್ಲ ಕಚ್ಚಿ ಕೊಲ್ಲುತ್ತಿತ್ತು. ಒಂದು ದಿನ ಕಲ್ಲಯ್ಯನಿಗೂ ಈ ಹಾವು ಕಚ್ಚಿ ತಾನೇ ಸತ್ತುಹೋಯಿತು.

ದಯಾಪರನಾದ ಕಲ್ಲಯ್ಯ ಸತ್ತ ಹಾವಿಗೆ ಪ್ರಾಣವನ್ನು ಕೊಟ್ಟು ಅದಕ್ಕೆ ವಂದಿಸಿ ಕಳುಹಿಸುವನು. ಇದನ್ನು ಕಂಡ ಜನರು ಕಲ್ಲಯ್ಯನ ಈ ಮಹಿಮೆಯನ್ನು ಕೊಂಡಾಡುತ್ತಾರೆ.

ಒಂದು ದಿನ ಕಲ್ಲಿದೇವರ ದಾಸಿಯೊಬ್ಬಳು ಅಪ್ಪವಣೆಗೆ ಹೋಗುವ ಸಂದರ್ಭದಲ್ಲಿ ಸದ್‌ಬ್ರಾಹ್ಮಣನೊಬ್ಬನ ಕೈ ಇವಳಿಗೆ ಸೋಕುತ್ತದೆ. ಕೋಪಗೊಂಡ ಆ ದಾಸಿ ಕೊಡವನ್ನು ಬಿಸಾಡಿ ಬೇರೊಂದು ಕೊಡದಲ್ಲಿ ನೀರನ್ನು ಹೊಯ್ದಳು. ಇದನ್ನು ಸಹಿಸದ ವಿಪ್ರರೆಲ್ಲರೂ ಕೂಡಿ ಕಲ್ಲಯ್ಯನ ಬಳಿ ಬಂದು "ಎಲ್ಲಾ ಕಡೆಯಲ್ಲೂ ಬೇರೆಯವರು ಮುಟ್ಟಿದರೆ ಬ್ರಾಹ್ಮಣರಿಗೆ ಮೈಲಿಗೆಯಲ್ಲದೆ ಬ್ರಾಹ್ಮಣರು ಮುಟ್ಟಿದರೆ ಬೇರೆಯವರಿಗೆ ಮೈಲಿಗೆಯೇ? ಎಂಥಹ ಧಿಮಾಕು ಈ ತೊತ್ತಿನವಳಿಗೆ ಶೂದ್ರರು ಮುಟ್ಟಿದರೆ ಬ್ರಾಹ್ಮಣರಿಗೆ "ತಾ ಸಚೇಲ ಸ್ನಾನ" ಮಾಡಬೇಕೆಂದು ನಿಯಮವಿದೆ. ಆದರೆ ಈ ಅಧಮ ವಂಶದವರಿಗೆ ಬ್ರಾಹ್ಮಣರನ್ನು ಮುಟ್ಟಬಾರದೆಂಬ ನಿಯಮವಿದೆಯೇ? ಇದು ಯಾವ ನೀತಿ, ಯಾವ ಧರ್ಮ ಪುರಾಣದಲ್ಲಿ ಈ ನಿಯಮಗಳಿವೆ. ಇದೆಂತಹ ಭಕ್ತಿ, ಅವಳನ್ನು ಅಲ್ಲಿಯೇ ಕೊಲ್ಲಬೇಕೆಂಬಷ್ಟು ಸಿಟ್ಟು ಬಂದಿತ್ತಾದರೂ ಅದು ತಕ್ಕುದಲ್ಲವೆಂದು ನಿಮ್ಮ ಬಳಿ ಬಂದಿರುವೆವು. ಅವಳಿಗೆ ತಕ್ಕ ಶಿಕ್ಷೆಯಾಗಬೇಕೆಂದು ಕಲ್ಲಯ್ಯನಲ್ಲಿ ವಿಪ್ರರು ಭಿನ್ನವಿಸಿಕೊಂಡರು. ಹೊಲೆಯರನ್ನು ಕೀಳಾಗಿ ಕಂಡದ್ದಲ್ಲದೆ ತಮ್ಮನ್ನು ಶ್ರೇಷ್ಠವೆಂದು ಬಿಂಬಿಸಿಕೊಂಡ ಈ ವಿಪ್ರರ ಮೇಲೆ ಕೋಪಗೊಂಡ ಕಲ್ಲಯ್ಯ

"ಮಲಹರನ ಭಕ್ತರ ಮನೆಯ ಜಾ
ಯಿಲಕೆ ನಿಮ್ಮಂ ಮುಟ್ಟಲಾಗದು
ಬಳಿಕ ಶರಣರ ದಾಸಿ ನಿಮ್ಮಂ ಮುಟ್ಟಲೆಂತಹುದು"

(ಎಸ್. ವಿದ್ಯಾಶಂಕರ(ಸಂ), ಬ.ಪು. ಸಂ.೫೪, ಪ.೩೮)

ಎಂದು ಖಾರವಾಗಿಯೇ ಪ್ರಶ್ನಿಸುತ್ತಾನೆ. ದಾಸಿಯ ವರ್ತನೆಯಿಂದ ಮೊದಲೇ ಬೇಸರಿಸಿಕೊಂಡಿದ್ದ ವಿಪ್ರರು ನಾಯಿಗಿಂತ ಕೀಳು ನಿಮ್ಮ ಜನ್ಮ ಎಂಬ ಕಲ್ಲಯ್ಯನ ಮಾತನ್ನು ಕೇಳಿ ಮತ್ತಷ್ಟು ಕೋಪಗೊಳ್ಳುತ್ತಾರೆ. ನಮ್ಮನ್ನು ನಾಯಿಗೆ ಹೋಲಿಸುತ್ತೀಯಲ್ಲವೇ ನೀನು ನಾಯಿಂದ ಒಂದೆರಡು ವೇದ ಮಂತ್ರಗಳನ್ನು ಹೇಳಿಸಬಲ್ಲೆಯಾ? ಎಂದು ಕೇಳುವರು. ಒಡನೆ ಕಲ್ಲಿದೇವಯ್ಯ ವೇದ ಪಿತಾಮಹನೆಂಬ ನಾಯಿಯನ್ನು ಕರೆಸಿ "ಯಾವ ವೇದದೊಳಾದರೂ ಒಂದನ್ನೆತ್ತಿ ತಾವನನು

ಕ್ಷಿಸು ಈ ವಿಪ್ರರೆದರು" ಎನಲು ಆ ನಾಯಿಯು ಪದ್ಮಾಸನದಲ್ಲಿ ಕುಳಿತು ನಾಲ್ಕು ವೇದಗಳಲ್ಲಿಯೂ ಒಂದೊಂದು ಠಾವನ್ನೆತ್ತಿ ಓದಿತು. ವಿಪ್ರರೆಲ್ಲರೂ ಕಿವಿಯಾರ ಕೇಳಿ, ನೋಡಿದ ಮೇಲೆ ಕಲ್ಲಿದೇವನ ಈ ಮಹಿಮೆಗೆ ವಂದಿಸಿದರು.

ಈ ಕಲ್ಲಯ್ಯನ ಪವಾಡದ ಮೂಲಕ ಹೊಲೆಯರನ್ನು ಕೀಳಾಗಿ ಕಾಣುವ ಉನ್ನತ ಜಾತಿಯನ್ನು ಹೊಲೆಯರಿಗಿಂತಲೂ ಹೀನ ಕುಲದವರೆಂದು ಹೇಳುವುದಕ್ಕೆ ಚಿತ್ರಿಸಿದಂತಿದೆ. ಈ ಮೂಲಕ ಬ್ರಾಹ್ಮಣರು ತಮ್ಮ ಮಡಿವಂತಿಕೆಯನ್ನು ಬಿಟ್ಟು ಸಾಮಾನ್ಯರಂತೆ ಕಾಣಬೇಕೆಂಬ ಸಂದೇಶವನ್ನು ಇಲ್ಲಿ ತಿಳಿಸಲಾಗಿದೆ.

**೨. ಬಬ್ಬಿ ಬಾಚಯ್ಯ :**

ಗೊಬ್ಬೂರು ಎಂಬಲ್ಲಿ ಬಬ್ಬಿ ಬಾಚಯ್ಯನೆಂಬ ಶಿವಭಕ್ತನಿದ್ದನು. ಇವನು ನಿತ್ಯವೂ ಸಿದ್ಧಪ್ರಸಾದವನ್ನು ಸೇವಿಸುವ ವ್ರತವನ್ನು ಕೈಕೊಂಡಿರುತ್ತಾನೆ. ತನ್ನೂರ ಸುತ್ತಮುತ್ತಲು ನಡೆಯುವ ಹಬ್ಬ ಹರಿದಿನಗಳಿಗೆ, ಪರ್ವಗಳಿಗೆ ಹೋಗಿ, ಅಲ್ಲಿನ ಭಕ್ತರಿಗೆ ನಮಸ್ಕರಿಸಿ ಅವರುಂಡು ಬಿಟ್ಟ ಪ್ರಸಾದವನ್ನು ಬಂಡಿಯಲ್ಲಿ ಹೇರಿಕೊಂಡು ಬಂದು ತಿನ್ನುತ್ತಿದ್ದನು. ಇದನ್ನು ಗೊಬ್ಬೂರಿನ ಬ್ರಾಹ್ಮಣರು ಖಂಡಿಸುತ್ತಾ ಅವನಿಗೆ ಈ ಕಾರ್ಯವನ್ನು ಕೊನೆಗಾಣಿಸಬೇಕೆಂದು ಸಂಕಲ್ಪ ಮಾಡುತ್ತಾರೆ. ಬಾಚಯ್ಯ ಬಂಡಿಯಲ್ಲಿ ಭಕ್ತರ ಪ್ರಸಾದವನ್ನು ತುಂಬಿಕೊಂಡು ಪುರ ಪ್ರವೇಶಿಸುವಾಗ, ವಿಪ್ರರೆಲ್ಲ ಬಂದು "ನಿಲ್ಲು ಕುಲಹೀನರ ಅಧಮರ ಎಂಜಲನ್ನು, ಗುಡಿಸಿ ತಂದು ಈ ಊರಿನ ಮಡಿಯನ್ನು ಮಾಡಬೇಡ ಹೊರಡು ನೀನು ನಮ್ಮೂರಿಗೆ ಬರಬೇಡೆಂದು ತಡೆದರು. ಬಾಚಯ್ಯನಿಗೂ ವಿಪ್ರರಿಗೂ ವಾದ ವಿವಾದಗಳು ನಡೆದು ವಿಕೋಪಕ್ಕೆ ತಿರುಗಿದವು. ವಿಪ್ರರ ಹೀನ ಮಾತುಗಳಿಂದ ಬೇಸರಿಸಿಕೊಂಡು, ಕೋಪಗೊಂಡ ಬಾಚಯ್ಯ ಸಿದ್ಧಪ್ರಸಾದಕ್ಕೆ ಹೊದಿಸಿದ ಮೇಲು ಹೊದಿಕೆಯನ್ನು ತೆಗೆಯುತ್ತಿದ್ದಂತೆಯೇ ಹೊಗೆಯಾಡುತ್ತಿದ್ದ ಪ್ರಸಾದವು ಮಿಂಚಿನಂತೆ ಮಿಂಚುತ್ತಿತ್ತು, ಕೆಂಡಗಳಂತೆ ಉರಿಯುತ್ತಿತ್ತು. ಇದನ್ನು ಎತ್ತಿ ಬಾಚಯ್ಯ ಸುತ್ತಲೂ ಚೆಲ್ಲಿದನು. ಆಗ ಪ್ರಸಾದವು

ಛಿಟಿ ಛಿಟೀ ಛಿಟಿ ಭುಗಿಲು ಭುಗಿ ಭುಗಿ
ಛಿಟಲು ಭುಗಿಲೆನೆ ನೆಗೆದು ವಿಸ್ಫುಟ
ನಿಟಿಲತಟನಯನನ ವಿಟಿಲ ತಟನಯ ಶಿಖಿಯಿಂದ
ಪುಟಪುರಂಗಳು ಬೇವವೋಲು
ತ್ಕಟವೆನಿಸಿ ಗೊಬ್ಬೂರೊಳಗಣಿತ
ಕುಟಿಲವಿಪ್ರರ ಗೃಹಯಚಯಮನಾಹುತಿಗೊಳುತ್ತಿರಲು

(ಎಸ್. ವಿದ್ಯಾಶಂಕರ (ಸಂ), ಬ.ಪು.ಸಂ.೫೫,ಪ೩೨)

ಹೀಗೆ ಚೆಲ್ಲಿದ ಪ್ರಸಾದವು ಕೆಂಡಗಳಾಗಿ ವಿಪ್ರರ ಮನೆಗಳು ಸುಟ್ಟುಹೋದವು. ವಿಪ್ರರೆಲ್ಲ ದಿಕ್ಕೆಟ್ಟು ಓಡುತ್ತಾ ಬದುಕುಳಿಯುವುದಕ್ಕೆ, ಹೊಳೆ ಬಾವಿಗಳನ್ನು ಹೊಕ್ಕರು, ಕೆಲವರು ಶಿವಾಲಯಗಳಲ್ಲಿ

ಶಿವಭಕ್ತರ ಮನೆಗಳಲ್ಲಿ ಸೇರಿಕೊಂಡರು, ಕೆಲವರು ಈ ಭಯಂಕರತೆಯಿಂದ ತಪ್ಪಿಸಿಕೊಳ್ಳಲು ಭಸಿತ ರುದ್ರಾಕ್ಷಿಗಳನ್ನು ಧರಿಸಿದರು. ಕೊನೆಗೆ ತಮ್ಮ ತಪ್ಪಿನ ಅರಿವಾಗಿ ಬಾಚಯ್ಯನಲ್ಲಿ ಕ್ಷಮೆ ಬೇಡಲು ಆತನು ಕರುಣಿಸಿ ಎಲ್ಲಾ ಅನಾಹುತವನ್ನು ತಡೆದು ಮೊದಲಿನಂತೆ ಮಾಡಿದನು.

ಈ ಪವಾಡ ಕತೆಯಲ್ಲಿ ಕಥೆಯ ವಸ್ತುವಿಷಯದಲ್ಲಿ ಎರಡೂ ಪುರಾಣಗಳಲ್ಲಿ ಯಾವುದೇ ಬದಲಾವಣೆಗಳಾಗಿಲ್ಲವಾದರೂ ಕಥೆಯ ಒಳಗೆ ಬರುವ ವಿಪ್ರರು ಮತ್ತು ಅವರ ಹೆಸರುಗಳು ಕನ್ನಡ 'ಬಸವಪುರಾಣ'ದಲ್ಲಿ ಬೇರೆಯಾಗಿವೆ. ತೆಲುಗಿನ ಪುರಾಣದಲ್ಲಿ ಬಾಚಯ್ಯನ ಮಹಿಮೆಯಿಂದ ವಿಪ್ರರಿಗಾದ ಅನಾಹುತವನ್ನು ಹೇಳುವಾಗ ಸೋಮನಾಥ ಹೇಳುವುದು ಶ್ರೀಧರ ಭಟ್ಟನ ಮನೆಗೆ ಅಗ್ನಿಸೇರಿತು, ಮಾಧಪ್ಪನ ಮನೆ ಬೆಂಕಿಪಾಲಾಯಿತು, ಕುರುಡು ಗೋವಿಂದನ ಮನೆ ಕಮರಿತು, ದೊಡ್ಡಭಾಸ್ಕರನದು ಸುಟ್ಟಿತು, ಕೊಮ್ಮದ ಘಟಿಕಾಶಿಯ ಕೊಂಪೆ ಉರಿಯಿತು, ಭಮಭಟ್ಟನ ಮನೆ ಭುಗ್ಗನುರಿಯಿತು, ವಾಮನಪ್ಪ, ಸೋಮಯಾಜಿಯ ಮನೆಗಳು ಉರಿದವು, ತ್ರಿವೇದಿಯ ಮನೆ ದಾರಿ ಸೇರಿತ್ತು, ಆದಿತ್ಯ ಕೂಚಿಯ ಮನೆ ಬಿದ್ದಿತು, ಮಚ್ಚ ತಾಡನ ಮನೆ ಮಣ್ಣು ಪಾಲಾಯಿತು, ಬಚ್ಚಲಿ ಕೇಶನ ಗುಡಿಸಲು ಬಿತ್ತು, ಮಾಸಕಮ್ಮೆಯ ಮನೆ ಮಸಿಯಾಯಿತು, ಸನ್ಯಾಸಿ ವಾಮನ ಮಠವು ಮಂಟಪಗಳೆಲ್ಲ ಭಸ್ಮವಾದವು ಎಂದು ಹೇಳುವನು. ಇದೇ ಸಂದರ್ಭದಲ್ಲಿ ಭೀಮಕವಿ ಹೆಸರಿಸುವ ಹೆಸರುಗಳು ಹೀಗಿವೆ. ತೊಗೆಯ ಚೆನ್ನಪ್ಪ, ಮಂಡಗೆಯ ವಸುದೇವ, ವೇದಾಂತಿಗಳ ಕೃಷ್ಣಪ್ಪ, ಪೌರಾಣಿಕರ ಬಲಭದ್ರ, ಹೆಗಲ ವಿಠ್ಠಣ್ಣ, ಋಗ್ವೇದಿಗಳ ಸಿಂಗರಿ, ಸೂರ್ಯಘಟಿಸಾಸಿಗಳ ಜಕ್ಕಣ್ಣ ಮಲ್ಲಿಭಟರು, ನಾರಾಣೋಜರು, ಬೊಲ್ಲಿಭಟ್ಟರು, ಕೇಶವ ಶ್ರೀವಲ್ಲಭ, ಗೋಪಾಲಭಟ್ಟ, ಮೆಳ್ಳೆಗಣ್ಣಲ್ಲಾಳನಾಥ, ಡೊಳ್ಳು ಹೊಟ್ಟೆಯ ಕೂಚಿಗಳು ಹೀಗೆ ಆ ಬ್ರಾಹ್ಮಣರ ಅನ್ವರ್ಥ ನಾಮಗಳನ್ನು ಸೇರಿಸಿಕೊಂಡು ಕನ್ನಡ ಪರಿಸರದ ವ್ಯಕ್ತಿಗಳ ಹೆಸರುಗಳನ್ನು ಭೀಮಕವಿ ಆಯ್ಕೆಮಾಡಿಕೊಂಡು ತನ್ನ ಪುರಾಣದಲ್ಲಿ ಸೇರಿಸಿರುವುದು ಕಂಡುಬರುತ್ತದೆ. ಈ ಪವಾಡ ಕಥೆಯ ಮೂಲಕ ಇಬ್ಬರೂ ಕವಿಗಳು ಶಿವಭಕ್ತನನ್ನು ಆ ಭಕ್ತನ ಪ್ರಸಾದವನ್ನು ತುಚ್ಛವಾಗಿ ಕಾಣಬಾರದು, ಶಿವಭಕ್ತನ ಪ್ರಸಾದ ಅಮೃತಕ್ಕಿಂತ ಮಿಗಿಲಾದುದು ಎಂಬುದನ್ನು ತಿಳಿಸುವ ಸಲುವಾಗಿ ಈ ಕಥೆಯನ್ನು ನಿರೂಪಿಸಲಾಗಿದೆ.

**೩. ಮಾದಾರ ದೂಡಯ್ಯ :**

ಹೊಲೆಯ ಜಾತಿಗಳನ್ನು ಕೀಳಾಗಿ ಕಾಣುತ್ತಿದ್ದ ಬಿಜ್ಜಳ ಮತ್ತು ಬ್ರಾಹ್ಮಣರಿಗೆ, ಬಸವಣ್ಣ ಹೊಲೆಯ ಜಾತಿಯ ಶರಣರ ಮಹಿಮೆಗಳನ್ನು ತಿಳಿಸುವ ಸಂದರ್ಭದಲ್ಲಿ ಮಾದಾರ ದೊಡಯ್ಯನ ಕಥೆಯನ್ನು ಹೇಳುವನು. ಮಾದಾರ ದೂಡಯ್ಯ ಕೀಳು ಜಾತಿಗೆ ಸೇರಿದ ಒಬ್ಬ ಶಿವಭಕ್ತ. ಇವನು ತೋರಿದ ಪವಾಡ ಮಹಿಮೆಗಳನ್ನು ಬಸವಣ್ಣ ಹೀಗೆ ಹೇಳುತ್ತಾನೆ. ಕುಷ್ಠರೋಗದಿಂದ ಬಳಲುತ್ತಿದ್ದ ಒಬ್ಬ ಬ್ರಾಹ್ಮಣ ತನ್ನ ಹಸುವೊಂದನ್ನು ಹುಡುಕುತ್ತಾ ರಾತ್ರಿಯಲ್ಲಿ ಹೋಗುತ್ತಿರುವಾಗ ಆಕಸ್ಮಿಕವಾಗಿ ದೂಡಯ್ಯನ ಬಚ್ಚಲ ನೀರಿನಲ್ಲಿ ಕಾಲಿಡುತ್ತಾನೆ. ಬಚ್ಚಲು ನೀರಿನಿಂದ ಕೊಳೆಯಾದ ಕಾಲುಗಳನ್ನು ತೊಳೆಯುತ್ತಿದ್ದಂತೆ ಆ ಕಾಲುಗಳು ಕುಷ್ಟರೋಗದಿಂದ ಮುಕ್ತಿ ಹೊಂದಿ ಮುನ್ನಿನಂತೆ ಶೋಭಿಸುತ್ತವೆ.

ಅತ್ಯಂತ ಸಂತೋಷದಿಂದ ಆ ಬ್ರಾಹ್ಮಣ

ಬಳಿಕ ಪೂರ್ವಚ್ಛಾಯೆಯಿಂದು
ಜ್ವಳಿಸುತಿರಲಾ ವಿಪ್ರನಚ್ಚರಿ
ಮೊಳೆಯೆ ಮನದೊಳು ಹರುಷನಾಗುತ್ತಾಗ ಪರಿತಂದು
ನಲಿದು ದೂಳಯ್ಯಗಳ ಮಜ್ಜನ
ಜಲದ ಕೊಳ್ಗೆಸಜಿರಲ್ಲಿ ಬಿದ್ದು ಪೊ
ರಳಿ ಪೊರಳಿಯಾಡಲ್ಕೆ ತನು ದಿವ್ಯಾಂಗವಾಗಿರಲು

(ಎಸ್. ವಿದ್ಯಾಶಂಕರ(ಸಂ), ಬ.ಪು., ಸಂ–೫೫ ಪ–೫೩)

ಸೋಮನಾಥನು ತನ್ನ ಪುರಾಣದಲ್ಲಿ ಈ ಸಂದರ್ಭ ಯಥಾವತ್ತಾಗಿಯೇ ಇದೆ. (ಸ.ಆ.ಸಾ.–೫೨೩–೫೨೮) ದೂಳಯ್ಯನ ಬಚ್ಚಲ ನೀರಿನಲ್ಲಿ ತನ್ನ ಸರ್ವಾಂಗಗಳು ನೆನೆಯುವಂತೆ ಉರುಳಾಡಿ ಕುಷ್ಟರೋಗದಿಂದ ಮುಕ್ತಿ ಪಡೆಯುತ್ತಾನೆ. ನಂತರ ದೂಳಯ್ಯನ ಪಾದಗಳಿಗೆರಗಿ ಈ ರೋಗದಿಂದ ಮುಕ್ತಿ ಮಾಡಿದ ನಿಮಗೆ, ನಿಮ್ಮ ಈಶ ಭಕ್ತಿಗೆ ಶರಣು ಎಂದು ಮೊಕ್ಕುತ್ತಾನೆ. ಈ ವಿಷಯವನ್ನು ಪುರದ ಜನರೆಲ್ಲರಿಗೂ ಸಾರಿಸಾರಿ ಹೇಳುತ್ತಾ, ಕುಷ್ಠರೋಗದಿಂದ ತನ್ನನ್ನು ಮುಕ್ತಿಗೊಳಿಸಿದ ದೂಳಯ್ಯನನ್ನು ಕೀರ್ತಿಸುತ್ತಾನೆ. ನಂತರ ಸುಮಾರು ಏಳುನೂರು ಕುಷ್ಠರೋಗಿಗಳು ಮಾದಾರ ದೂಳಯ್ಯನ ಬಚ್ಚಲು ಉದಕವನ್ನು ಸ್ಪರ್ಷಿಸಿ ರೋಗಗಳಿಂದ ಮುಕ್ತಿ ಹೊಂದುತ್ತಾರೆ. ಶಿವಭಕ್ತರ ಬಚ್ಚಲ ನೀರೂ ಅತ್ಯಂತ ಶ್ರೇಷ್ಠ ಎಂಬ ಅಂಶವನ್ನು ಈ ಕಥೆಯ ಮೂಲಕ ತೋರಿಸಲಾಗಿದೆ.

**೪. ಕೆಂಬಾವಿ ಬೋಗಯ್ಯ :**

ಕೆಂಬಾವಿ ಎಂಬ ಅಗ್ರಹಾರದಲ್ಲಿದ್ದ ಕೆಂಬಾವಿ ಬೋಗಯ್ಯ ವೀರಶೈವ ಧರ್ಮದ ಅತ್ಯಂತ ನಿಷ್ಠಾವಂತ ಭಕ್ತನಾಗಿದ್ದ. ನಿತ್ಯವು ಜಂಗಮರಿಗೆ ದಾಸೋಹ ನೀಡುತ್ತಾ ಶಿವನನ್ನು ಅರ್ಚಿಸುತ್ತಾ ಇದ್ದನು. ಇಂತಹ ಮಹಿಮಾನ್ವಿತ ಪುರುಷನನ್ನು ಲೋಕಕ್ಕೆ ಮೆರೆಸಲು ಪರಮೇಶ್ವರನು ಕೀಳು ಕುಲಜರಂತೆ ಕರುವಿನ ಶವವನ್ನು ಹೊತ್ತು ಬರುತ್ತಾನೆ. ತುಂಬಾ ಹಸಿವಾದಂತೆ ನಟಿಸಿದ ಪರಮೇಶ್ವರನು ನಾನು ನಿತ್ಯವು ಮಾಂಸವನ್ನು ಆರೋಗಿಸುವ ನೇಮವನ್ನು ಮಾಡುತ್ತಿರುವೆ. ನಿನ್ನೆ ಈ ಕರುವನ್ನು ದೇವರ ದಾಸಿಮಯ್ಯನ ಬಳಿ ತೆಗೆದುಕೊಂಡು ಹೋಗಿ ಪಾಕವ ಮಾಡಿ ಕೊಡೆಂದು ಕೇಳಿದಾಗ ಅವನು ದುಗ್ಗಳೆಯನ್ನು ಕೇಳಿ ಬರುವೆ ಎನ್ನುತ ತಡಮಾಡಿದ. ತುಂಬಾ ಹಸಿವಾಗಿದೆ ನೀನಾದರೂ ಅಡುಗೆ ಮಾಡಿ ಬಡಿಸುವೆಯಾ ಎಂದು ಕೇಳುತ್ತಾನೆ. ಸಂತೋಷದಿಂದ ಒಪ್ಪಿ ಕರುವಿನ ಮಾಂಸದಡಿಗೆ ಮಾಡಿ ಬಡಿಸುತ್ತಾನೆ. ಇದರಿಂದ ಕೋಪಗೊಂಡ ಅಗ್ರಹಾರದ ಬ್ರಾಹ್ಮಣರು ಬೋಗಯ್ಯನನ್ನು ಕಲ್ಲು, ಬಡಿಗೆಗಳಿಂದ ಹೊಡೆಯುತ್ತ ಅವನ ಗುಡಿಸಲನ್ನು ಕಿತ್ತೆಸೆದು, ನೀನು ಈ ಊರಲ್ಲಿರುವುದು ಉಚಿತವಲ್ಲ ಮೊದಲು ಇಲ್ಲಿಂದ ತೊಲಗು ಎನ್ನುವರು. ಕೋಪಗೊಂಡ ಬೋಗಯ್ಯ ಬ್ರಾಹ್ಮಣರನ್ನು ಶಪಿಸುತ್ತಾ ಶಿವದೂಷಕರಾದ ನಿಮಗೆ ನರಕಬಾದೆ ತಪ್ಪಿದ್ದಲ್ಲ. ನಿಮ್ಮಂತ

ಹೀನ ಮುಖಗಳನ್ನು ನೋಡುವುದು ಮಾತಾಡುವುದು ಸಾಧ್ಯವಿಲ್ಲ. ನಾನು ಹೊರಡುವೆನೆಂದು ಹೇಳಿ ಅಗ್ರಹಾರದಿಂದ ಹೊರಡುವನು.

"ಊರ ಮುಂದಕೆ ಹೋಗಲೊಡನಾ
ಊರಲದುಭುತವನೇನನೆಂದಪೆ
ಊರ ಶೈವರ ಮನೆಗಳೊಳಗಣ ಶೈವಲಿಂಗಚಯ
ಊರ ಶಿವಭವನಂಗಳಾ ಸ್ಥಾ
ಪ್ಯೋರು ಲಿಂಗಗಳು ಸ್ವಯಂಭೂ
ಚಾರು ಲಿಂಗವು ತಮ್ಮ ಜಿನಪೀಠಂಗಳಿಂದಗಲ್ದು"

(ಎಸ್. ವಿದ್ಯಾಶಂಕರ(ಸಂ), ಬ.ಪು., ಸಂ–೫೬ ಪ–೪೨)

ಸೋಮನಾಥನಲ್ಲಿ ಈ ಸನಿವೇಶವು (ಸ.ಆ.ಸಾ. ೭೪೮–೭೫೫) ಮೇಲಿನಂತೆಯೇ ಇದೆ.

ಹೀಗೆ ಅಗ್ರಹಾರದಲ್ಲಿರುವ ಲಿಂಗಗಳೆಲ್ಲವೂ ಬೋಗಯ್ಯನ ಹಿಂದೆ ನಡೆದವು. ಪುರದಲ್ಲಿರುವ ಲಿಂಗಗಳೆಲ್ಲವೂ ಬರಿದಾದವು. ಊರಿನ ಸೌಭಾಗ್ಯ ಹೋಯಿತು. ಸಸ್ಯಗಳು ಒಣಗಿ, ವೃಕ್ಷಗಳು ಬಾಗಿ ಧರೆಗುರುಳಿದವು. ಅಗ್ರಹಾರದ ತುಂಬಾ ಅಂಧಕಾರವು ಕವಿಯಿತು. ಕೆರೆ, ಬಾವಿಗಳು ಬತ್ತಿಹೋದವು, ವನ, ಪುಷ್ಪ–ಫಲಗಳು ಕಮರಿ ಹೋದವು. ಹೆಜ್ಜೆಯಿಟ್ಟರೆ ಭೂಮಿ ಸುಡುತ್ತಿತ್ತು. ಗಾಳಿಯ ಧೂಳನೆಬ್ಬಿಸಿ ಇಡೀ ಪುರವನ್ನು ಮುಚ್ಚಿಕೊಳ್ಳುವಂತೆ ಮಾಡಿತು. ದಿಕ್ಕು ತೋಚದ ಅಗ್ರಹಾರದ ಬ್ರಾಹ್ಮಣರೆಲ್ಲ ಇದಕ್ಕೆಲ್ಲ ಕಾರಣ ನಾವು ಬೋಗಯ್ಯನನ್ನು ಹಿಂಸಿಸಿ ಪುರದಿಂದ ಹೊರ ಹಾಕಿದ್ದು ಎಂಬುದು ತಿಳಿದುಕೊಂಡರು. ಬೋಗಯ್ಯ ಇರುವಲ್ಲಿಗೆ ಹೋಗಿ ಅವನಿಗೆ ಸಾಷ್ಟಾಂಗವೆರಗಿ ಶರಣ ಬೋಗಯ್ಯ ನಮ್ಮನ್ನು ಕ್ಷಮಿಸಿ ಈ ಪುರಕ್ಕೆ ಬಾ. ಇನ್ನು ನಮಗೆಲ್ಲ ನೀನೇ ದಿಕ್ಕು ಎಂದು ಪರಿಪರಿಯಿಂದ ಬೇಡುವರು. ದಯಾಮಯನಾದ ಬೋಗಯ್ಯ ಆಕ್ಷಣವೇ ಮರಳಿ ಕೆಂಬಾವಿಗೆ ಬರುತ್ತಾನೆ. ಅವನೊಂದಿಗೆ ಲಿಂಗಗಳೂ ಬರುತ್ತವೆ. ಮುನ್ನಿನಂತೆ ಕೆಂಬಾವಿ ಸಕಲ ಸುಖಗಳೊಂದಿಗೆ ಕಂಗೊಳಿಸುತ್ತದೆ. ಈ ರೀತಿಯಾಗಿ ಶಿವಭಕ್ತನಾದ ಬೋಗಯ್ಯನ ಕಥೆಯ ಮೂಲಕ ಶಿವಭಕ್ತರಿಗೆ ಮಾಡಿದ ಅನ್ಯಾಯವನ್ನು ಅದಕ್ಕೆ ಪ್ರತಿಯಾಗಿ ಆಗುವ ಅನಾಹುತಗಳನ್ನು ಇಲ್ಲಿ ಚಿತ್ರಿಸಲಾಗಿದೆ. ಬೋಗಯ್ಯನು ಬ್ರಾಹ್ಮಣರಿಗೆ ಬುದ್ಧಿಕಲಿಸುವ ಸಲುವಾಗಿ ಮಾಡಿದ ಈ ಪವಾಡ ಮಹಿಮೆಯ ಕತೆ 'ಬಸವಪುರಾಣ'ಗಳಲ್ಲಿ ಚಿತ್ರಣಗೊಂಡಿದೆ.

'ಬಸವಪುರಾಣ'ಗಳಲ್ಲಿ, ಪುರಾಣದ ಕಥಾನಾಯಕನ ಪಾತ್ರಕ್ಕೆ ಎಷ್ಟು ಪ್ರಾಮುಖ್ಯತೆಯನ್ನು ನೀಡಲಾಗಿದೆಯೋ ಅಷ್ಟೇ ಪ್ರಾಮುಖ್ಯತೆಯನ್ನು ಬಸವಣ್ಣನ ಜೊತೆಗೆ ಜೀವಿಸುತ್ತಿದ್ದ ಶರಣರ ಪಾತ್ರಗಳಿಗೆ ಕವಿಗಳು ಒತ್ತು ನೀಡಿದ್ದಾರೆ. ಹಾಗಾಗಿ ಎಲ್ಲಾ ಶರಣರ ಚರಿತ್ರೆಯನ್ನು ಅವರು ತೋರಿದ ಪವಾಡ, ಮಹಿಮೆ, ಅದ್ಭುತಗಳನ್ನು ಇಲ್ಲಿ ಅನಾವರಣಗೊಳಿಸಲಾಗಿದೆ. ಸಾಮಾಜಿಕ ಸಮಸ್ಯೆಗಳಿಗೆ ಸಕಾಲವಾಗಿ ಸ್ಪಂದಿಸುತ್ತಿದ್ದ ಬಸವಣ್ಣನಂತೆ ಇತರ ಶರಣರೂ ಕೂಡ ಸ್ಪಂದಿಸುತ್ತಿದ್ದರು

ಎಂಬುದು ಈ ಪುರಾಣಗಳಲ್ಲಿ ಶರಣರ ಜೀವನ ಕಥೆಗಳನ್ನು ಓದಿದಾಗ ಅನಿಸುತ್ತದೆ. ಬಸವಣ್ಣನ ಮತ್ತು ಸಮಕಾಲೀನ ಮತ್ತು ಬಸವಣ್ಣನಿಗಿಂತ ಪೂರ್ವದ ಶರಣರು ಸಂದರ್ಭಕ್ಕನುಗುಣವಾಗಿ ತಮ್ಮ ದೈವೀ ಶಕ್ತಿಯಿಂದ ಶಿವನನ್ನು ಒಲಿಸಿಕೊಂಡು ಶಿವನ ಸ್ವರೂಪದೊಂದಿಗೆ ತಮ್ಮ ಜೀವನದಲ್ಲಾಗುತ್ತಿದ್ದ ಸಮಸ್ಯೆಗಳಿಗೆ ತಾವೇ ಪರಿಹಾರಗಳನ್ನು ಕಂಡುಕೊಳ್ಳುತ್ತಿದ್ದರು. ತಮಗೆ ಹಾಗೂ ತಮ್ಮ ಶಿವಭಕ್ತರಿಗೆ ಕುಂದುಂಟಾದಾಗ ಪವಾಡಗಳನ್ನು ಮಾಡುವುದರ ಮೂಲಕ ಧರ್ಮವನ್ನು ಕಾಪಾಡುತ್ತಿದ್ದರು.

ಹೀಗೆ ಬಸವಣ್ಣ ಮತ್ತು ಅವನ ಸಮಕಾಲೀನ ಶರಣರ ಪವಾಡಗಳು ಈ ಎರಡೂ ಪುರಾಣಗಳಲ್ಲಿ ಚಿತ್ರಣಗೊಂಡಿದೆ. ಈ ಪವಾಡಗಳ ಹಿಂದಿನ ಉದ್ದೇಶಗಳು ಆರಂಭದಲ್ಲಿ ಹೇಳಿದಂತೆ ಹಲವು ನೆಲೆಗಳಲ್ಲಿ ಚಿತ್ರಣಗೊಂಡಿರುವುದು ಕಂಡುಬರುತ್ತದೆ.

## ಅಧ್ಯಾಯ – ೫

# ಕನ್ನಡ–ತೆಲುಗು 'ಬಸವಪುರಾಣ'ಗಳಲ್ಲಿನ ಸಾಂಸ್ಕೃತಿಕ ಸಂಗತಿಗಳು

## ಅಧ್ಯಾಯ – ಐದು

# ಕನ್ನಡ–ತೆಲುಗು 'ಬಸವಪುರಾಣ'ಗಳಲ್ಲಿನ ಸಾಂಸ್ಕೃತಿಕ ಸಂಗತಿಗಳು

ಒಂದು ಸಮಾಜದ ಸಮುದಾಯಗಳ ಒಟ್ಟಾರೆ ಸಾಮಾಜಿಕ ಬದುಕಿನ ಸಂಗತಿಗಳನ್ನೇ ಸಂಸ್ಕೃತಿ ಎನ್ನುವರು. ಈ ಸಂಸ್ಕೃತಿಯ ಅಂಶಗಳು ಮಾನವನ ಹುಟ್ಟಿನೊಂದಿಗೆ ಅವನ ಜೊತೆಯಲ್ಲಿಯೇ ಹುಟ್ಟಿಕೆಂಡಿವೆ. ಇವುಗಳನ್ನು ಪರಂಪರಾಗತವಾಗಿ ಉಳಿಸಿ–ಬೆಳಸಿಕೊಂಡು ಬಂದಿದ್ದಾನೆ. ತನಗೆ ಹಿತವೆನಿಸುವ ಸಂಪ್ರದಾಯ, ಆಚರಣೆ, ನಂಬಿಕೆಗಳನ್ನು ಇಂದಿಗೂ ಮನುಷ್ಯ ತನ್ನದೇ ನೆಲೆಯಲ್ಲಿ ಗುರುತಿಸಿಕೊಂಡು ಅವುಗಳನ್ನು ನಂಬಿಕೊಂಡು ಬಂದಿದ್ದಾನೆ. ಇಂತಹ ಸಾಂಸ್ಕೃತಿಕ ಸಂಗತಿಗಳು ಮಾನವನ ವಿಕಾಸದ ಸಂದರ್ಭಗಳಲ್ಲಿ ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಬೇರೆ ಬೇರೆ ಸ್ವರೂಪಗಳನ್ನು ಪಡೆದುಕೊಂಡು ಬಂದಿವೆ. ಮಾನವ ಬದುಕಿನ ಸಾಂಸ್ಕೃತಿಕ ಸಂಗತಿಗಳು ಸಮುದಾಯದಿಂದ ಸಮುದಾಯಕ್ಕೆ, ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನತೆಗಳಿರುವುದನ್ನು ಹಲವು ಸಮುದಾಯಗಳ ಅಧ್ಯಯನಗಳಿಂದ ಈಗಾಗಲೇ ಗುರುತಿಸಲಾಗಿದೆ. ಒಂದು ಕಾಲದ ಸಾಂಸ್ಕೃತಿಕ ಬದುಕನ್ನು ಒಟ್ಟಾರೆಯಾಗಿ ತಿಳಿಯಬೇಕೆಂದರೆ ಆ ಕಾಲದ ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ ಪರಿಸ್ಥಿತಿಗಳ ಸಮಗ್ರ ಅರಿವು ನಮಗಿರಬೇಕು. ಈ ಎಲ್ಲಾ ಅಂಶಗಳ ಹಿನ್ನಲೆಯಲ್ಲಿ ಒಂದು ಕಾಲದ, ಒಂದು ಸಮುದಾಯದ ಸಮಗ್ರ ಜೀವನ ವಿಧಾನವನ್ನು ತಿಳಿಯಬಹುದು. ಗತಿಸಿಹೋದ ಕಾಲದ ಬದುಕನ್ನು ತಿಳಿಯಲು ನಮಗೆ ಹಲವು ಆಕರಗಳು ಇಂದು ಲಭ್ಯವಿವೆ. ಶಾಸನಾಧಾರಗಳಿಂದ ವಿವಿಧ ಕಾಲಘಟ್ಟದ ಸಾಂಸ್ಕೃತಿಕ ಬದುಕನ್ನು ಈಗಾಗಲೇ ವಿದ್ವಾಂಸರು ಕಟ್ಟಿಕೊಟ್ಟಿದ್ದಾರೆ. ಹಾಗೆಯೇ ಪ್ರಾಚೀನ ಕಾಲದ ಸಾಹಿತ್ಯ ಕೃತಿಗಳಿಂದ ಅಂದಿನ ಜೀವನ ಚಿತ್ರಣಗಳು ನಮಗಿಂದು ದೊರೆಯುತ್ತವೆ. ಕ್ರಿ.ಪೂ.ದಿಂದ ಹಿಡಿದು ಇಂದಿನವರೆಗೂ ಕಾಲಾಂತರದಲ್ಲಿ ಕಳೆದು ಹೋದ ಜನ ಸಂಸ್ಕೃತಿಯ ಚರಿತ್ರೆಯನ್ನು ತಿಳಿಯಲು ನಮಗೆ ಸಾಹಿತ್ಯ ಆಕರಗಳು ಹೆಚ್ಚಿನ ನೆರವನ್ನು ನೀಡುತ್ತವೆ.

ಕರ್ನಾಟಕ, ಕನ್ನಡ ಜನ ಸಂಸ್ಕೃತಿಯ ಮಾಹಿತಿಯನ್ನು ಒದಗಿಸುವ ಸಾಹಿತ್ಯದ ಮೊದಲ ಆಕರ ಗ್ರಂಥ ಕವಿರಾಜಮಾರ್ಗ. ಇದರಲ್ಲಿ ಕನ್ನಡ ನಾಡಿನ ವಿಸ್ತಾರ, ಕನ್ನಡಿಗರ ಜ್ಞಾನ, ಆ ಕಾಲದ ಸಾಹಿತ್ಯ ಸಂಸ್ಕೃತಿಯನ್ನು ಇದು ತಿಳಿಸುತ್ತದೆ. ಆ ನಂತರದಲ್ಲಿ ಪಂಪನ ಕಾವ್ಯಗಳು ಹತ್ತನೇ ಶತಮಾನದ ಭವ್ಯ ಪರಂಪರೆಯನ್ನು ತಿಳಿಸಿಕೊಡುತ್ತವೆ. ಹೀಗೆ ಆಯಾ ಕಾಲದಲ್ಲಿ ರಚನೆಯಾದ ಕಾವ್ಯ, ಮಹಾಕಾವ್ಯ, ಪುರಾಣಾದಿಗಳಿಂದ ಅಂದಿನ ಸಾಮಾಜಿಕ ಸಾಂಸ್ಕೃತಿಕ ಬದುಕಿನ ಸಂಗತಿಗಳು ನಮಗೆ ಸಿಗುತ್ತವೆ. ಅವುಗಳ ಅಧ್ಯಯನದಿಂದ ಅಂದಿನ ಬದುಕಿನ ವಿವಿಧ ಆಯಾಮಗಳ ಪರಿಚಯವಾಗುವುದರ ಜೊತೆಗೆ ಇಂದಿನ ನಮ್ಮ ಸಾಂಸ್ಕೃತಿಕ ಬದುಕಿಗೂ ಅಂದಿನ ಬದುಕಿಗೂ ಇರುವ ವ್ಯತ್ಯಾಸ, ಸಾಮ್ಯತೆಗಳ ಅರಿವು ನಮಗಾಗುತ್ತದೆ.

ಈ ಎಲ್ಲಾ ಅಂಶಗಳ ಹಿನ್ನಲೆಯಲ್ಲಿ ಕನ್ನಡ ತೆಲುಗು 'ಬಸವಪುರಾಣ'ಗಳ ತೌಲನಿಕ ಅಧ್ಯಯನದಲ್ಲಿ ಎರಡೂ ಪುರಾಣಗಳ ರಚನಾ ಕಾಲದ ಸಾಂಸ್ಕೃತಿಕ ಬದುಕಿನ ಸ್ವರೂಪವನ್ನು ತಿಳಿಯುವುದು ಇಲ್ಲಿನ ಮುಖ್ಯ ಉದ್ದೇಶವಾಗಿದೆ. ಸುಮಾರು ಹನ್ನೆರಡನೆಯ ಶತಮಾನದ ಕೊನೆ, ಅಥವಾ ಹದಿಮೂರನೇ ಶತಮಾನದ ಆರಂಭದಲ್ಲಿ ತೆಲುಗು 'ಬಸವಪುರಾಣಮು' ರಚನೆಗೊಂಡಿದೆ. ಇದಾದ ಒಂದು ಶತಮಾನದ ಆಸುಪಾಸಿನಲ್ಲಿ ಭೀಮಕವಿಯ ಕನ್ನಡ 'ಬಸವಪುರಾಣ' ಕೃತಿಯು ರಚನೆಗೊಂಡಿದೆ. ೧೩-೧೪ನೇ ಶತಮಾನದ ಸಂದರ್ಭದಲ್ಲಿ ಈ ಎರಡು ಭಾಷೆಯ ಪ್ರದೇಶಗಳು ಈಗಿನಂತೆ ಸೀಮಿತ ಗಡಿರೇಖೆಗಳನ್ನು ಹೊಂದಿದ್ದಿಲ್ಲ. ಹಾಗಾಗಿ ಎರಡೂ ಭಾಷೆಯ ಪ್ರದೇಶಗಳು ಸಾಂಸ್ಕೃತಿಕವಾಗಿ ಒಂದೇ ಆಗಿದ್ದವು ಎಂಬುದು ಗಮನಾರ್ಹ ಸಂಗತಿ. ಈ ಹಿನ್ನಲೆಯಲ್ಲಿ ಇಲ್ಲಿನ ಸಾಂಸ್ಕೃತಿಕ ಬದುಕಿನ ಅನಾವರಣವನ್ನು ಇಲ್ಲಿ ಮಾಡಲಾಗಿದೆ. ಸೋಮನಾಥನು ಮೊದಲು ಪುರಾಣ ರಚನೆ ಮಾಡಿರುವುದು. ಅದನ್ನು ಭೀಮಕವಿ ಕನ್ನಡಕ್ಕೆ ಭಾಷಾಂತರಿಸಿದ್ದು ಎಂಬುದು ಈಗಾಗಲೇ ತಿಳಿದಿರುವ ಸಂಗತಿ. ಹಾಗಾಗಿ ಭೀಮಕವಿಯ ಅನುವಾದದಲ್ಲಿ ಬಹುತೇಕ ಅಂದಿನ ಜನತೆಯ ಬದುಕಿನ ವಿವರಗಳು ಮೂಲನುಸಾರಿಯಾಗಿಯೇ ಇರುವುದನ್ನು ಗಮನಿಸಬಹುದು. ಕೆಲವು ಸಂದರ್ಭಗಳಲ್ಲಿ ಮಾತ್ರ ಭೀಮಕವಿ ಭಿನ್ನವಾದ ಆಲೋಚನೆ, ಕಥಾ ನಿರೂಪಣೆಯ ವಿಧಾನದಲ್ಲಿ, ಬಳಸುವ ಪದ ಜಾಲಗಳಲ್ಲಿ ವಿಶಿಷ್ಟವೆನಿಸುತ್ತಾನೆ. ಹಾಗಾಗಿ ಈ ಇಬ್ಬರ ಪುರಾಣಗಳಲ್ಲಿ ಕಂಡುಬರುವ ಕವಿಗಳ ಕಾಲದ ಸಂದರ್ಭ ಹಾಗೂ ಅವರ ಕಥೆಯಲ್ಲಿ ಬರುವ ಶರಣರ ಜೀವಿಸಿದ್ದ ಕಾಲದ ಸಂದರ್ಭಗಳ ಸಾಂಸ್ಕೃತಿಕ ಬದುಕಿನ ಸಂಗತಿಗಳನ್ನು ಮುಂದೆ ತಿಳಿಸಲಾಗಿದೆ.

ಅಧ್ಯಯನ ದೃಷ್ಟಿಯಿಂದ ಹಾಗೂ ಈ ಎರಡು ಪುರಾಣಗಳಲ್ಲಿ ಕಾಣಬರುವ ವಿವಿಧ ಅಂಶಗಳ ಹಿನ್ನಲೆಯಲ್ಲಿ ಮುಖ್ಯವಾಗಿ ಈ ಕೆಳಗಿನ ಸಂಗತಿಗಳನ್ನು ಕುರಿತು ಇಲ್ಲಿ ಅಧ್ಯಯನ ಮಾಡಲಾಗಿದೆ. ಅವುಗಳೆಂದರೆ

೧. ಸಾಮಾಜಿಕ ಸಂಗತಿಗಳು

೨. ಧಾರ್ಮಿಕ ಸಂಗತಿಗಳು

೩. ಆರ್ಥಿಕ ಸಂಗತಿಗಳು

೪. ರಾಜಕೀಯ ಸಂಗತಿಗಳು

೫. ವಿನೋದಾವಳಿಗಳು

ಈ ಮೇಲಿನ ಪ್ರಮುಖ ಅಂಶಗಳನ್ನು ಒಂದೊಂದಾಗಿ ಮುಂದೆ ವಿವರಿಸಿದೆ.

**೫.೧. ಸಾಮಾಜಿಕ ಸಂಗತಿಗಳು :**

ಸಾಂಸ್ಕೃತಿಕ ಅಧ್ಯಯನಗಳ ಪರಿಧಿಯಲ್ಲಿ ಬರುವ ಅನೇಕ ಅಂಶಗಳಲ್ಲಿ ಪ್ರಮುಖವಾದುದು ಮನುಷ್ಯನ ಸಾಮಾಜಿಕ ಬದುಕು. ಸಮಾಜದ ನಾಗರಿಕರ ಜೀವನ, ಅವರ ನಡೆನುಡಿ, ಸಂಪ್ರದಾಯ, ಆಚರಣೆಗಳು ಮಾನವನ ಉಗಮದ ಆದಿಯಿಂದ ಇಂದಿಗೂ ಜೀವಂತವಾಗಿರುವಂತಹವು. ಹೀಗೆ ಕಾಲಾಂತರದಿಂದ ಉಳಿದು ಬೆಳೆದು ಬಂದಿರುವ ಹಾಗೂ ಮುಂದುವರೆದುಕೊಂಡು ಬರುತ್ತಿರುವ ಸಮಾಜದ ಹಲವು ಮುಖಗಳ ದರ್ಶನವನ್ನು ನಾವು ಅಧ್ಯಯನಗಳ ಸಹಾಯದಿಂದ ತಿಳಿಯಲು ಸಹಕಾರಿಯಾಗಿದೆ. ಹಾಗಾಗಿ ಬಸವಪುರಾಣಗಳ ರಚನಾ ಕಾಲದ ಸಾಮಾಜಿಕ ಸಂಗತಿಗಳನ್ನು ಹೇಗಿದ್ದವು ಎಂಬುದರ ಜೊತೆಗೆ ಸಮಕಾಲೀನ ಸಂದರ್ಭಕ್ಕೆ ಹೇಗೆ ಪ್ರಸ್ತುತವಾಗಿವೆ ಅಥವಾ ಆಗಬೇಕಿದೆ ಎಂಬ ಅಂಶಗಳನ್ನು ಇಲ್ಲಿ ಗುರುತಿಸಲಾಗಿದೆ.

**ಅ. ವರ್ಣವ್ಯವಸ್ಥೆ :**

ಸಾಮಾನ್ಯವಾಗಿ ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿರುವ ವರ್ಗಗಳು ಹನ್ನೆರಡನೆಯ ಶತಮಾನದಲ್ಲಿಯೂ ಇದ್ದವು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಇವು ಸಮಾಜದಲ್ಲಿರುವ ಪ್ರಮುಖ ವರ್ಗಗಳು. ಇಲ್ಲಿ ಮೇಲ್ಜಾತಿ ಎಂದರೆ ಬ್ರಾಹ್ಮಣ ವರ್ಗ. ವೇದೋಪನಿಷತ್ತುಗಳನ್ನು ಬಲ್ಲವರು. ಇವರು ಕೆಳಜಾತಿಯವರನ್ನು ತುಂಬಾ ಹೀನಾಯವಾಗಿ ನೋಡುತ್ತಿದ್ದರೆಂಬುದಕ್ಕೆ 'ಬಸವಪುರಾಣ'ಗಳಲ್ಲಿ ಹಲವು ನಿದರ್ಶನಗಳು ದೊರೆಯುತ್ತವೆ. ಸಾಮಾನ್ಯವಾಗಿ ಇಂದಿಗೂ ಶೂದ್ರರನ್ನು ಕೀಳಾಗಿ ಕಾಣುತ್ತಿರುವ ಸಮಾಜ ಹನ್ನೆರಡನೆಯ ಶತಮಾನದ ಬಸವಣ್ಣನ ಕಾಲದ ಪರಿಸರದಲ್ಲೂ ವ್ಯಾಪಕವಾಗಿತ್ತು ಎಂಬುದಕ್ಕೆ 'ಬಸವಪುರಾಣ'ದಲ್ಲಿ ಉದಾಹರಣೆಗಳಿವೆ. ಇಂತಹ ವಿಚಾರಗಳನ್ನು ಕವಿಗಳು ಕಟ್ಟಿಕೊಟ್ಟಿರುವುದು ಅಂದಿನ ಶೂದ್ರರ ಬದುಕಿನ ಸ್ವರೂಪವನ್ನು ತಿಳಿಸುವುದೂ ಇಲ್ಲಿನ ಪ್ರಮುಖ ಉದ್ದೇಶವಾಗಿದೆ.

ವರ್ಣವ್ಯವಸ್ಥೆಯು ಸಾಮಾಜಿಕವಾಗಿ ಒಂದು ಪಿಡುಗಿನಂತೆ ಪರಿಣಮಿಸಿದೆ. ಈ ಸಾಮಾಜಿಕ ವ್ಯವಸ್ಥೆಯಲ್ಲಿ ಧರ್ಮ, ಜಾತಿ, ಮೇಲು, ಕೀಳೆಂಬ ಭಾವನೆ ಚರಿತ್ರೆಯುದ್ಧಕ್ಕೂ ನಡೆದುಕೊಂಡೇ ಬಂದಿದೆ. ಇಂತಹ ವ್ಯವಸ್ಥೆಯು ೧೨ನೆಯ ಶತಮಾನ ಮತ್ತು ನಂತರದ ಸೋಮನಾಥ ಮತ್ತು ಭೀಮಕವಿಯರ ಕಾಲದಲ್ಲೂ ಇತ್ತು ಎಂಬುದಕ್ಕೆ ವೀರಶೈವ ಕಾವ್ಯಗಳಲ್ಲಿ ಹಲವು ನಿದರ್ಶನಗಳು ದೊರೆಯುತ್ತವೆ. 'ಬಸವಪುರಾಣ'ದಲ್ಲಿ ಶೂದ್ರ ವರ್ಗದ ಹೊಲೆಯರನ್ನು ಮತ್ತು ಮಾದಿಗರನ್ನು

ಅತ್ಯಂತ ಕೀಳಾಗಿ ಬ್ರಾಹ್ಮಣರು ಮತ್ತು ಮೇಲ್ವರ್ಗದ ಇತರೆ ಜಾತಿಯವರು ಕಾಣುತ್ತಿದ್ದರು. ಎಂಬುದಕ್ಕೆ ಶಿವನಾಗಮಯ್ಯನ ಕಥೆಯಲ್ಲಿ ಬರುವ ಅಂಶಗಳು ವರ್ಣ ವ್ಯವಸ್ಥೆಯ ಪರಮಾವಧಿಯನ್ನು ನಿರೂಪಿಸುತ್ತವೆ. ಬಿಜ್ಜಳನಲ್ಲಿದ್ದ ಕೆಲ ವಿಪ್ರರು ಬಸವಣ್ಣನ ವಿರುದ್ಧ ರಾಜನಿಗೆ ದೂರು ಹೇಳುತ್ತಾ "ರಾಜನೇ ಕೇಳು ವಿಪ್ರಾಚಾರವನ್ನು ಬದಿಗಿಟ್ಟು ಹೀನ ಕುಲದವರೊಂದಿಗೆ ಸೇರಿ ಕುಲಗೆಟ್ಟು, ಹೀನ ಕುಲದವರನ್ನು ಹಿರಿಯ ಭಕ್ತರೆಂದು ಕೊಂಡಾಡುತ್ತಾ, ಅವರ ಕಾಲುಗಳಿಗೆ ನಮಸ್ಕರಿಸುತ್ತಾ ಅವರುಂಡು ಬಿಟ್ಟ ಎಂಜಲನ್ನು ತಿನ್ನುತ್ತಾನೆ. ಈ ಬಸವಣ್ಣ ಇಡೀ ಕಲ್ಯಾಣಪುರವನ್ನೇ ಹೊಲೆಗೆಲಿಸಿ ಬಿಟ್ಟಿದ್ದಾನೆ. ಇವನು ಹೀಗೆ ಮಾಡುತ್ತಿದ್ದರೆ ವರ್ಣಾಶ್ರಮಗಳು, ಇಲ್ಲಿಯ ನೀತಿಗಳು, ಧರ್ಮಪ್ರವೃತ್ತಿಗಳು ಯಜ್ಞಾದಿ ಕರ್ಮಗಳೆಲ್ಲವೂ ಹೆಸರಿಲ್ಲದಂತೆ ನಾಶವಾಗುವುವು" ಎಂದು ದೂರುತ್ತಾರೆ.(ಪಾ.ಸೋ., ಸ.ಆ.ಸಾ.೧೧-೩೦, ಭೀ-ಸಂ.೫೪,ಪ.೪,೫,೬). ಈ ಮಾತುಗಳನ್ನು ಕೇಳಿದ ಬಿಜ್ಜಳ ಬಸವಣ್ಣನನ್ನು ಕರೆಸುತ್ತಾನೆ. ಬಸವಣ್ಣ ಶಿವನಾಗಮಯ್ಯನನ್ನು ದಂಡಿಗೆಯ ಮೇಲೆ ಕುಳ್ಳಿರಿಸಿಕೊಂಡು ಬರುವುದನ್ನು ನೋಡಿದ ವಿಪ್ರರು, ನೋಡು ಆ ಹೊಲೆಯನ್ನು ಹೊತ್ತುಕೊಂಡು ಬರುತ್ತಿದ್ದಾನೆ. ಅವನು ಈ ರಾಜಸಭೆಗೆ ಬಂದುಬಿಟ್ಟರೆ ಈ ಸಭೆಯು ಕೂಡ ಕುಲಗೆಟ್ಟು ಹೋಗುತ್ತದೆಂದು ಹೇಳುತ್ತಾರೆ.

ಬಿಜ್ಜಳನು ಇಡೀ ಓಲಗವನ್ನು ಅರಮನೆಯ ಹೊರಗೆ ಏರ್ಪಡಿಸುತ್ತಾನೆ. ಇದನ್ನು ಗಮನಿಸಿದರೆ ಹೊಲೆಯರನ್ನು, ಹೀನ ಕುಲದವರನ್ನು ಎಷ್ಟು ಕೀಳಾಗಿ ಕಾಣುತ್ತಿದ್ದರು ಎಂಬುದು ತಿಳಿಯುತ್ತದೆ. ಈ ವರ್ಣ ವ್ಯವಸ್ಥೆ ಇಂದಿಗೂ ನಮ್ಮ ಸಮಾಜದಲ್ಲಿ ಕಂಡುಬರುತ್ತಿರುವುದು ವಿಪರ್ಯಾಸವೇ ಆಗಿದೆ. ಹೊಲೆಯ ಅರಮನೆಯೊಳಗೆ ಬಂದರೆ ರಾಜಸಭೆಯೇ ಕುಲಗೆಟ್ಟು ಹೋಗುತ್ತದೆಂಬ ಅವರ ಯೋಚನೆ ಎಷ್ಟು ನಿಕೃಷ್ಟವಾದುದು. ಮೇಲ್ಜಾತಿಯವರ ಇಂತಹ ದುರಾಲೋಚನೆಗಳು ಹಿಂದಿನ ಕಾಲದಲ್ಲಿ ಶೂದ್ರರನ್ನು ನಡೆಸಿಕೊಂಡಿರುವ ರೀತಿಯನ್ನು ಹೇಳುತ್ತವೆ. ಇಂತಹ ವಿವೇಕವಿಲ್ಲದ ಮನಸ್ಸುಗಳ ಜೊತೆ ಅಂದಿನ ಹೊಲೆಯರು ಹೇಗೆ ಬದುಕುತ್ತಿದ್ದರು ಎಂಬುದೇ ಊಹಿಸಲೂ ಆಗದಂತಹ ಸಂಗತಿ. ಹೀಗೆ ಅರಮನೆಯ ಹೊರಗೆ ಆರಂಭವಾದ ಓಲಗದಲ್ಲಿ ಬಿಜ್ಜಳ ಬಸವಣ್ಣನನ್ನು "ಏನು ಬಸವಣ್ಣ ನೀನು ಹೊಲೆಯರ ಜೊತೆ ಸೇರಿ ಇಡೀ ಕಲ್ಯಾಣ ಪಟ್ಟಣವನ್ನು ಹೀಗೆ ಹಾಳು ಮಾಡುವುದು ಉಚಿತವೇ, ಈಶ್ವರನ ಭಕ್ತಿಯು ನಿನ್ನ ತಲೆಗೇರಿತೆ? ಹೀಗೆ ಮಾಡುವುದರಿಂದ ಮಳೆ ಬೆಳೆಗಳಾಗುವವೇ ಈ ಭೂಮಿಯಲ್ಲಿ" (ಪಾ.ಸೋ. ಸ.ಆ.ಸಾ.೪೫-೫೪, ಭೀ-ಸಂ.೫೪,ಪ.೧೨,೧೩) ಎಂದು ಪ್ರಶ್ನಿಸುತ್ತಾನೆ. ಆಗ ಬಸವಣ್ಣನು ಶಿವಭಕ್ತರ ಕುಲದ ಬಗ್ಗೆ ವಿಧವಿಧವಾಗಿ ಹೇಳುತ್ತಾ

"ಆ ಕುಲಂಗಳ ಮಾತವೇತಕೆ
ಲೋಕನಾಥಪ್ರೋಕ್ತವಾದ
ಪ್ರಾಕಟದ ಜಾತಿಗಳಲಾ ಅಷ್ಟಾದಶಂಗಳವಂ
ಏಕೆ ಹೇಳಲು ಮತ್ತೆ ಮಿಕ್ಕಿನ

ಲೋಕದೊಳು ಪದಿನೆಂಟು ವರ್ಣಾ
ನಿಕರೆಲ್ಲಂ ಭಕ್ತಲೋಕವೆ ಕುಲವವಾದಿಟಕೆ"

(ಎಸ್. ವಿದ್ಯಾಶಂಕರ, ಬ.ಪು.,ಸಂ.೫೪. ಪ.೨೦)

ಭೀಮಕವಿಯ ಈ ಮಾತುಗಳಲ್ಲಿ ಆ ಕಾಲದಲ್ಲಿ ಹದಿನೆಂಟು ಜಾತಿಗಳಿದ್ದವೆಂಬುದು ಸ್ಪಷ್ಟವಾಗುತ್ತದೆ. ಸೋಮನಾಥನೂ ಹದಿನೆಂಟು ಜಾತಿಗಳ ವಿಚಾರವನ್ನು ಹೇಳುತ್ತಾ

ಪ್ರಷ್ಯಕ್ತಮಗುನಟ್ಟಿ ಜಾತುಲು ಗಾವೆ
ಯಷ್ಟುದಶಂಬುಲು ನವಿ ಯೋಲ ಚೆಪ್ಪ
ಮುಕ್ಕಿಲಿ ಪದುನೆನಿಮಿದಿ ವರ್ಣ ಮುಲಕು
ನಿಕ್ಕ ಮಾರಯ್ಯ ಭಕ್ತಿ ನಿಚಯಂಬು ಕುಲಮು

(ಗೂ.ವೆಂ.ಸು(ಸಂ), ಬ.ಪು., ಸ.೬.೯೧-೯೪)

"ಸ್ಮೃತ್ಯಕ್ತವಾದ ಜಾತಿಗಳಲ್ಲವೇನ ದಷ್ಟಾದಸಂಗಳು ತಾವೇಕಿನ್ನು ಹೆಚ್ಚಿನ ಹದಿನೆಂಟು ವರ್ಣನೆಗಳೆಲ್ಲ ಮಾರಯ್ಯ ನಾ ಭಕ್ತನಿಚಯದ ಕುಲವು"ಎಂದು ಇಬ್ಬರೂ ಕವಿಗಳು ಬಸವಣ್ಣನ ಮೂಲಕ ಎಲ್ಲಾ ಕುಲಗಳು, ಜಾತಿಗಳೆಲ್ಲವೂ ಭಕ್ತಲೋಕವೇ ಎಂದು ಹೇಳಿಸುತ್ತಾರೆ. ಭಕ್ತಲೋಕವೇ ಎಂಬುದರ ಮೂಲಕ ಬಸವಣ್ಣ ಎಲ್ಲರನ್ನು ಒಂದೇ ಎಂಬ ಭಾವನೆಯಿಂದ ನೋಡುತ್ತಿದ್ದ ಹಾಗೂ ಎಲ್ಲರೂ ಮನುಷ್ಯರೇ ಎಂಬುದನ್ನು ಬಿಜ್ಜಳಾದಿಯಾಗಿ ಅಲ್ಲಿ ಸೇರಿದ್ದ ಜನರಿಗೆ ತಿಳಿಸುತ್ತಾನೆ. ಆ ಕಾಲದಲ್ಲಿ ಶೂದ್ರರನ್ನು ಹೊಲೆಯ(ಭೀ.೫೪-೫೮), ಹೊಲಗೆಲಸಿ(ಭೀ.೫೧-೧೨) ಎಂದು ಬೈಯುತ್ತಿರುವುದನ್ನು ಗಮನಿಸಬಹುದು. ಇದು ಹೊಲೆಯರು ಮೇಲ್ಜಾತಿಯವರಿಂದ ಪಟ್ಟಪಾಡು. ಆದರೆ ಬಸವಣ್ಣನಾದಿಯಾಗಿ ಎಲ್ಲ ಶಿವಶರಣರು ಶೂದ್ರರನ್ನು ಹಿರಿಯ ಭಕ್ತರು(ಭೀ.೫೪-೪) ವೀರ ಮಹೇಶ್ವರರು(ಭೀ.೫೪-೮೪) ಎಂದು ಗೌರವ ಭಾವನೆಯಿಂದ ಕರೆಯುತ್ತಿದ್ದರೆಂಬುದಕ್ಕೆ ಕೆಲವು ನಿದರ್ಶನಗಳು ಈ ಪುರಾಣಗಳಲ್ಲಿ ದೊರೆಯುತ್ತವೆ.

ಹೀಗೆ ಎರಡೂ 'ಬಸವಪುರಾಣ'ಗಳಲ್ಲಿ ಆ ಕಾಲದ ವರ್ಣವ್ಯವಸ್ಥೆಯ ದಮನೀಯ ಸ್ಥಿತಿಯನ್ನು ತಿಳಿಸುತ್ತವೆ. ಈ ಪುರಾಣಗಳಲ್ಲಿ ಬರುವ ಅನೇಕ ಶರಣರು ಹೀನ ಕುಲದಿಂದ ಬಂದವರು. ಅವರೆಲ್ಲರು ಶಿವಭಕ್ತರಾಗಿ ಶಿವನ ಸೇವಕರಾಗಿ ಎಲ್ಲರನ್ನೂ ಶಿವಭಕ್ತರೆಂದು ಜಾತಿ ಭೇದಗಳನ್ನು ದೂರವಿರಿಸಿದ್ದರು. ಇಂತಹ ಶರಣರ ಮಧ್ಯದಲ್ಲಿ ಬಿಜ್ಜಳನ ಮಂದಬುದ್ಧಿಯನ್ನು ಬಳಸಿಕೊಂಡ ಅವನ ಆಸ್ಥಾನದ ವಿಪ್ರಕುಲದವರು ಶೂದ್ರರನ್ನು ಹೀನಾಯವಾಗಿ ನಡೆಸಿಕೊಳ್ಳುತ್ತಿದ್ದರೆಂಬುದು ಶರಣರ ಕಥೆಗಳಿಂದ ತಿಳಿಯುತ್ತದೆ.

**ಆ. ಸಂಪ್ರದಾಯಗಳು :**

ಪಾರಂಪರಿಕವಾಗಿ ಇಂದಿಗೂ ಉಳಿದುಕೊಂಡು ಬಂದ ನಮ್ಮ ಜೀವನ ಪರಂಪರೆಯ ಸಂಪ್ರದಾಯಗಳು ಹಲವು ವಿಶಿಷ್ಟ ತೆರನಾದವು. ಸಂಪ್ರದಾಯಗಳು ಸಂಸ್ಕೃತಿಯ ಒಂದು ಭಾಗ.

ಸಮಾಜದ ಪ್ರತಿಯೊಂದು ಸಮುದಾಯವು ತನ್ನದೇ ಆದ ಕೆಲವು ರೂಢಿಗತ ಸಂಪ್ರದಾಯಗಳನ್ನು ಬೆಳೆಸಿಕೊಂಡು ಬಂದಿವೆ. ಇಂತಹ ಸಂಪ್ರದಾಯಗಳನ್ನು ಆಯಾ ಸಮುದಾಯದವರು ಚಾಚೂ ತಪ್ಪದೆ ಆಚರಿಸಿಕೊಂಡು ಬರುತ್ತಿದ್ದಾರೆ.

**ವಿವಾಹ ವ್ಯವಸ್ಥೆ :**

ಬಸವಣ್ಣ ತನ್ನ ಮಾವ ಬಲದೇವನ ಮಗಳು ಗಂಗಾಂಬಿಕೆಯನ್ನು ಮದುವೆಯಾಗುವ ಸಂದರ್ಭವನ್ನು ಗಮನಿಸಿದರೆ ಆ ಕಾಲದ ವಿವಾಹ ಪದ್ಧತಿಯ ಇಡೀ ಚಿತ್ರಣ ನಮಗೆ ದೊರೆಯುತ್ತದೆ. ಬಲದೇವ ಬಂದು ಬಸವಣ್ಣನಿಗೆ ತನ್ನ ಮಗಳನ್ನು ಮದುವೆಯಾಗು ಎಂದು ಕೇಳುವುದು, ಬಸವಣ್ಣ ಒಪ್ಪಿಗೆಯನ್ನು ನೀಡುವುದು ಈಗಿನಂತೆಯೇ ಅಂದು ಕೂಡ ಮದುವೆಯ ಪೂರ್ವಸಿದ್ಧತೆ ನಗರ ಶೃಂಗಾರ(ಭೀ.೪–೨,೩), ಮಹಂತರಿಗೆ, ಶರಣರಿಗೆ, ಭಕ್ತರಿಗೆ, ಅಮಾತ್ಯರಿಗೆ ವೀಳ್ಯವನ್ನು ಕೊಟ್ಟು ವಿವಾಹಕ್ಕೆ ಆಹ್ವಾನಿಸುವುದು (ಭೀ.೪–೩,೫, ಪಾ.ಸೋ.ಪ್ರ.ಆ.ಸಾ.೧೦೫೧–೫೫) ಮದುವೆಯ ಶುಭಕಾರ್ಯದಲ್ಲಿ ಸಂಗೀತ, ಕೋಲಾಟ, ಕೇಳಿಕೆ ಮೊದಲಾದ ಆಟಗಳು ನೃತ್ಯಗಳನ್ನು ಏರ್ಪಡಿಸುತ್ತಿದ್ದರು (ಪಾ.ಸೋ.ಪ್ರ.ಆ.ಸಾ.೧೦೫೭–೧೦೭೦, ಭೀ.ಸಂ.೪ ಪ.೭,೮,೯) ವಧುವರರ ಶೃಂಗಾರವನ್ನು ಮಾಡುವುದು, ಗಂಗಾಂಬಿಕೆಯನ್ನು ಪುಣ್ಯಕಾಂತೆಯರು ವರ್ಣಿಸುವುದು (ಭೀ.೪–೧೪), ಮುತ್ತೈದೆಯರು ಆಭರಣಗಳನ್ನು ತೊಡೆಸುವುದು(ಭೀ.೪–೩) ಪುಣ್ಯವನಿತೆಯರು ಹೂಗಳನ್ನು ಮುಡಸುವುದು.(ಭೀ.೪–೩೪), ಮುತ್ತೈದೆಯರು, ಪುಣ್ಯಕಾಂತೆಯರು ಹೆಚ್ಚಾಗಿ ವಧುವನ್ನು ಸಿಂಗರಿಸುತ್ತಿದ್ದರು ಎನ್ನುವಲ್ಲಿ ವಿಧವೆಯರನ್ನು ಶುಭಕಾರ್ಯದಲ್ಲಿ ಸೇರಿಸುತ್ತಿರಲಿಲ್ಲವೆಂಬ ಅಂಶ ಗೊತ್ತಾಗುತ್ತದೆ. ಹಾಗೆಯೇ ಇಂದಿನಂತೆಯೇ ಅಂದುಕೂಡ ಬಾಸಿಂಗವನ್ನು ಇಡುತ್ತಿದ್ದರು ಎಂಬುದಕ್ಕೆ ಹೊಸ ಬಾಸಿಂಗವನ್ನಿಕ್ಕಿದರು(ಭೀ.೪–೪೦) ಎಂದು ಹೇಳಲಾಗಿದೆ. ವಿವಾಹಕ್ಕೆ ಮಹೂರ್ತವನ್ನು ಇಡುತ್ತಿದ್ದರು ಎಂಬುದಕ್ಕೆ ಶಿವಬಲಂ ಬಗ್ಗಲಿಂಚಿನ ಮುಹೂರ್ತಮು (ಶಿವಬಲವಗ್ಗಳಿಸಿದ ಮುಹೂರ್ತದಲ್ಲಿ) (ಪಾ.ಸೋ.ಆ.೧–ಸಾ.೧೧೦೨) ಎಂದು ತೆಲುಗಿನಲ್ಲಿ ಹೇಳಿದರೆ ಕನ್ನಡದಲ್ಲಿ ಬಲಮುಹೂರ್ತದಲ್ಲಿ(ಭೀ.೪–೪೩) ಎಂದು ಹೇಳಲಾಗಿದೆ. ಇದು ಶುಭಮುಹೂರ್ತ ಎಂಬುದನ್ನು ಸೂಚಿಸುತ್ತದೆ. ಹೀಗೆ ಒಟ್ಟಾರೆ ಆ ಕಾಲದ ಮದುವೆಯ ಪರಿಕಲ್ಪನೆಯನ್ನು ನಾವು ಈ ಪುರಾಣಗಳ ಆಧಾರದಿಂದ ಗುರುತಿಸಬಹುದು.(ವಿವಾಹ ವರ್ಣನೆಗಳ ಹೆಚ್ಚಿನ ವಿವರಕ್ಕೆ ಆರನೆಯ ಅಧ್ಯಾಯ ಕಾವ್ಯ ಸೌಂದರ್ಯದ ವಿವಾಹ ವರ್ಣನೆ ಭಾಗವನ್ನು ನೋಡಬಹುದಾಗಿದೆ)

**ನಾಮಕರಣ :**

ಮಾದಾಂಬೆ ಮತ್ತು ಮಾದಿರಾಜಯ್ಯರಿಗೆ ನಂದಿನಾಥ ನೇಮದಿಂದ ಪುತ್ರಪ್ರಾಪ್ತಿ ಭಾಗ್ಯ ದೊರೆಯುತ್ತದೆ. ನಂದಿನಾಥನಲ್ಲಿ ಮಾದಾಂಬೆ ಭಕ್ತಿಯಿಂದ ಕೈ ಮುಗಿಯುತ್ತಾ "ನಿನ್ನಂತಹ ಸದ್ಭಕ್ತ ಪುತ್ರನನ್ನು ಖ್ಯಾತಿಯಿಂದೊಬ್ಬನನ್ನು ಕರುಣಿಸಲು ಪ್ರೀತಿಯಿಂ ನಿನ್ನೆಸರನಿಡುವೆ" ಎಂದು ಕೇಳಿಕೊಳ್ಳುವುದನ್ನು ಗಮನಿಸಿದರೆ ಇಂದಿಗೂ ಈ ಪದ್ಧತಿ ನಮ್ಮ ಸಾಮಾಜಿಕ ಬದುಕಿನಲ್ಲಿರುವುದು

ಕಂಡುಬರುತ್ತದೆ. ಮಕ್ಕಳಾಗದ ಎಷ್ಟೋ ಮಹಿಳೆಯರು ಸಂತಾನ ಭಾಗ್ಯಕ್ಕಾಗಿ ಈ ರೀತಿಯ ಹರಕೆಗಳನ್ನು ಕಟ್ಟುತ್ತಾರೆ. ಮಕ್ಕಳಿಗೆ ದೇವರ ಹೆಸರುಗಳನ್ನಿಡುವ ಪದ್ಧತಿ ಆ ಕಾಲದಲ್ಲಿಯೂ ಇತ್ತು ಎಂಬುದಕ್ಕೆ ಇದು ನಿದರ್ಶನ. ಮೂರು ವರ್ಷವಾದರೂ ಮಗನು ಜನನವಾಗದ್ದುದಕ್ಕೆ ಕಂಗಲಾಗಿ ನಂದಿನಾಥನಲ್ಲಿ ತನ್ನ ಕಷ್ಟವೆಲ್ಲವನ್ನೂ ಹೇಳಿಕೊಳ್ಳುತ್ತಾ ನಿದ್ದೆಗೆ ಜಾರುತ್ತಾಳೆ ಮಾದಾಂಬೆ. ಆಗ ಪರಮೇಶ್ವರನು ಜಂಗಮವೇಶಧರಿಸಿ ಕನಸಿನಲಿ ಬಂದು ಇವನು ಆದಿವೃಷಭನ ಶಿಲಾದನ ಮಗನು. ಆದ್ದರಿಂದ ಹುಟ್ಟುತ್ತಿದ್ದಂತೆಯೇ ನೀನು 'ಬಸವಾ' ಎಂಬ ಹೆಸರಿಡು ಎಂದು ಹೇಳಿ ಮಾಯವಾಗುತ್ತಾನೆ. ನಂತರ ಬಸವಣ್ಣನ ಜನನವಾಗುತ್ತದೆ. ದಂಪತಿಗಳು ಪ್ರೀತಿಯಿಂದ ಮಗನನ್ನು ಬೆಳೆಸುತ್ತಾರೆ. ಸಕಲ ಭಕ್ತರನ್ನು ಕರೆಸಿ ಅವರಿಗೆ ವಿಭೂತಿ ವೀಳೆಯಗಳನ್ನು ನೀಡಿ, ಹರಿ ಚರಣೋದಕದಿಂದ ಮಗನಿಗೆ ಸ್ನಾನವನ್ನು ಮಾಡಿಸುತ್ತಾರೆ. ಹಣೆಗೆ ವಿಭೂತಿಯನ್ನಿಟ್ಟು ಕುಮಾರನನ್ನು ಸಿಂಗರಿಸಿ ನಾಮಕರಣಕ್ಕೆ ಸಿದ್ಧತೆ ಮಾಡುತ್ತಾರೆ.

"ದೆಸೆದೆಸೆಗಳು ಬಹಳ ವಾದ್ಯ
ಪ್ರಸರವದು ಭೋರೆಂದುಲಿವುತಿರೆ
ಅಸಮ ಮಹಿಮಾಗಣ್ಯಪುಣ್ಯೋದಯನನಾ ಸುತನ
ಬಸವನಾಮವನಿಟ್ಟು ಪೊಸ ಸಂ
ತಸದಿ ಸತಿಯುಂ ಪತಿಯು ಬೇಳ್ಪರಿ
ಗೊಸಗೆಗಳನೊಸೆದಿತ್ತು ಸುಖದಿಂದರೆ ಕುಮಾರನು"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೩,ಪ.೩೩)

ಹೀಗೆ ಅತ್ಯಂತ ಸಡಗರ, ಸಂಭ್ರಮದಿಂದ ಈ ನಾಮಕರಣ ಶಾಸ್ತ್ರವು ನಡೆಯುತ್ತದೆ.

**ಕನಸುಗಳು :**

ಕನಸುಗಳು ಕೆಲವೊಮ್ಮೆ ನಿಜವಾಗುತ್ತವೆ ಎಂಬ ನಂಬಿಕೆ ಇಂದಿಗೂ ಅನೇಕ ಜನರಲ್ಲಿದೆ. ಇದನ್ನು ಪುಷ್ಟಿಗೊಳಿಸುವಂತೆ ಹಿಂದಿನ ಕಾಲದಲ್ಲಿಯೂ ಈ ನಂಬಿಕೆ ಇತ್ತು ಎಂಬುದಕ್ಕೆ ಬಸವ ಪುರಾಣಗಳಲ್ಲಿ ಉದಾಹರಣೆಗಳು ಸಿಗುತ್ತವೆ.

ಭೀಮಕವಿಯು ಬಸವಣ್ಣನ ಚರಿತ್ರೆಯನ್ನು ರಚಿಸುವ ಆಸೆಯನ್ನು ಇಟ್ಟುಕೊಂಡು ಬಡಮತಿಯಾದ ತನ್ನಿಂದ ಹೇಗೆ ಸಾಧ್ಯ ಎಂದು ಚಿಂತಿಸುತ್ತಾ ಮಲಗಿರಲು ಪಾಲ್ಕುರಿಕೆ ಸೋಮನಾಥ ಮತ್ತು ತಂದೆ ಶಿವದೇವನು ಕನಸಿನಲಿ ಬಂದು 'ಮುನ್ನುಸುರ್ದುದನೆ ಕನ್ನಡಿಸು' ಎಂದು 'ಬಸವಪುರಾಣ' ರಚನೆಯ ಮಾರ್ಗವನ್ನು ತಿಳಿಸುತ್ತಾರೆ. ಅದರಂತೆ ತಾನು ಆಯಾಸವಿಲ್ಲದೆಯೆ 'ಬಸವಪುರಾಣ'ವನ್ನು ರಚಿಸಿದ್ದೇನೆ ಎಂದು ಭೀಮಕವಿ ತನ್ನ ಕನಸು ಮತ್ತು ಅದು ಸಾಕಾರಗೊಂಡ ಹಿನ್ನಲೆಯನ್ನು ಹೇಳುತ್ತಾನೆ.

ಮಾದಂಬೆಯು ಮೂರು ವರ್ಷವಾದರೂ ಮಗುವಿಗೆ ಜನ್ಮನೀಡದಿದ್ದಾಗ ದೇವರ ಮೊರೆಹೋಗಿ ವಿನಂತಿಸಿಕೊಂಡು ನಿದ್ದೆಗೆ ಜಾರುತ್ತಾಳೆ. ಆಗ ಪರಮೇಶ್ವರನು ಜಂಗಮ ವೇಶಧಾರಿಯಾಗಿ ಬಂದು ಬಸವಣ್ಣನ ಹಿನ್ನೆಲೆಯನ್ನು ಹೇಳಿ ಹುಟ್ಟುತ್ತಿದ್ದಂತೆಯೇ 'ಬಸವಾ' ಎಂಬ ಹೆಸರಿಡು ಎಂದು ಹೇಳುತ್ತಾನೆ, ನಂತರ ಕನಸಿನಲ್ಲಾದ ಘಟನೆಯನ್ನು ಮಾದಾಂಬೆ ತನ್ನ ಸಖಿಯರಿಗೆ ತಿಳಿಸುತ್ತಾಳೆ. ಅಂತೆಯೇ ಮಗು ಜನನವಾದಾಗ 'ಬಸವ' ಎಂದೇ ಹೆಸರಿಡುತ್ತಾಳೆ.

ಭಕ್ತಿಯ ಪರವಶದಿಂದ ತನ್ನೆರಡೂ ಕಣ್ಣಗಳನ್ನು ಶಿವನಿಗರ್ಪಿಸಿ ಕಣ್ಣಪ್ಪ ಎಂದು ಹೆಸರುಗಳಿಸಿದ ಬೇಡರ ಕಣ್ಣಪ್ಪನಿಗೂ ಒಮ್ಮೆ ಕನಸು ಬೀಳುತ್ತದೆ. ಬೇಟೆಯಾಡಲು ಹೋಗಿ ವಿಶ್ರಾಂತಿಗೆ ಒಂದು ಮರದಡಿ ಮಲಗಿದಾಗ ಕನಸಿನಲಿ ಶಿವನು ತಪಸ್ವಿವೇಶದಿಂದ ಬಂದು 'ಮುಂದೆ ಪ್ರಯಾಣ ಬೆಳೆಸುವಾಗ ಒಂದು ಲಿಂಗವನ್ನು ಕಾಣುವೆ ಅದುವೆ ನಿನ್ನಯ ಪ್ರಾಣಲಿಂಗ' ಎಂದು ಉಪದೇಶಿಸಿ ಮಾಯವಾಗುವನು. ಆಗ ನಿದ್ರೆಯಿಂದ ತಿಳಿದೆದ್ದು ಸುತ್ತಲೂ ನೋಡುವನು. ಅಲ್ಲಿಗೆ ಬರುವ ಮುಂಚೆ ಇರದಿದ್ದ ಒಂದು ದಾರಿ ಆಗ ಕಾಣುತ್ತಿತ್ತು. ಆ ದಾರಿ ಹಿಡಿದು ಮುಂದೆ ಹೋದಾಗ ಅಲ್ಲೊಂದು ಘನಲಿಂಗವಿರುವುದನ್ನು ಕಂಡನು. ಕನಸಿನಲ್ಲಿ ಕಂಡುದು ನಿಜವಾಯಿತೆಂದು ಸಂತೋಷಿಸುವನು. ಈ ಎಲ್ಲಾ ಕನಸಿನ ಕಥೆಗಳು ಎರಡೂ ಪುರಾಣಗಳಲ್ಲಿ ಚಿತ್ರಣಗೊಂಡಿವೆ.

**ಗಿರಿಜನ ಸಂಸ್ಕೃತಿ :**

ಹನ್ನೆರಡನೆಯ ಶತಮಾನದ ಶಿವಶರಣರಲ್ಲಿ ಅನೇಕರು ಬೇರೆ ಬೇರೆ ಜಾತಿ, ಬುಡಕಟ್ಟಿಗೆ ಸೇರಿದವರು ಇದ್ದರು. ಬುಡಕಟ್ಟು ಸಂಸ್ಕೃತಿಗೆ ಸೇರಿದ ಶರಣರಲ್ಲಿ ಪ್ರಮುಖರಾದವರು ಬೇಡರ ಕಣ್ಣಪ್ಪ, ತೆಲುಗು ಬೊಮ್ಮಯ್ಯ ಗೋಡಗೂಚಿ, ಗುಡ್ಡವ್ವೆ ಮುಂತಾದವರು ಈ ಬುಡಕಟ್ಟು ಶರಣರ ಬದುಕಿನ ವಿವರಗಳನ್ನು ಅಂದರೆ ಅವರ ವೇಶಭೂಷಣ, ಆಚಾರಗಳು, ಆಹಾರ ಪದ್ಧತಿ ಅವರ ಜೀವನ ಮುಂತಾದ ಅಂಶಗಳನ್ನು ತೆಲುಗು ಮತ್ತು ಕನ್ನಡ 'ಬಸವಪುರಾಣ'ಗಳಲ್ಲಿ ಚಿತ್ರಿಸಲಾಗಿದೆ. ಜೊತೆಗೆ ಗೋಪಾಲಕರಾದ ಗೊಲ್ಲ ಬುಡಕಟ್ಟಿನ ಸನ್ನಿವೇಶಗಳು ಬರುತ್ತವೆ.

ಬೇಡನಾದ ಕಣ್ಣಪ್ಪ ಮತ್ತು ಇತರೆ ಸಹಚರರ ವೇಶಭೂಷಣವನ್ನು ಕುರಿತು ಪಾಲ್ಕುರಿಕೆ ಸೋಮನಾಥ ಹೇಳುವುದಿಲ್ಲ. ಭೀಮಕವಿಯು ಇವರ ಬಾಹ್ಯ ಸೌಂದರ್ಯದ ಚಿತ್ರಣವನ್ನು ಕೊಡುತ್ತಾ

"ಹೊಳೆವ ಹೀಲಿಯ ದಂಡೆ ಮಂಡೆಯೊ
ಳೊಲೆವ ಚವರಂ ಬೆನ್ನಿನೊಳು ಪಸು
ರ್ದಳಿರ ಕುಪ್ಪಸದೊಡಿಗೆ ಗುಂಜಾಭರಣವೆಡಗೈಯ
ಬಿಲು ಬಲದ ಕೈಯಂಬು ಟೊಂಕದೊ
ಳಲಗೆಸೆಯ ಒಡತಣ ಪುಳಿಂದರು

ಬಳಸಿ ಬೇಂಟೆಯನೆಯ್ದಿ ಬನದೊಳು ತೋಹಿನಲ್ಲಿರ್ದು"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೧೭,ಪ.೨)

ಹೀಗೆ ಬೇಟೆಗಾರನಾದ ಕಣ್ಣಪ್ಪನ ವರ್ಣನೆಯನ್ನು ಮಾಡಲಾಗಿದೆ. ಅದೇ ರೀತಿಯಾಗಿ ಪಾಲ್ಕುರಿಕೆ ಸೋಮನಾಥ ತನ್ನ ಕಾಲದ ಗೋಪಾಲಕನಾದ ಗೊಲ್ಲನನ್ನು ಮಾದಿರಾಜಯ್ಯನ ಕಥೆಯಲ್ಲಿ ತಿಳಿಸುತ್ತಾನೆ. ಮಾದಿರಾಜಯ್ಯನ ಭಕ್ತಿಯನ್ನು ಪರೀಕ್ಷಿಸಲು ಶಿವನು ಗೊಲ್ಲನ ವೇಶಧರಿಸಿ ಬರುವಾಗ ಅವನ ವೇಶವನ್ನು ಹೇಳುವುದು ಹೀಗೆ.

ಗುಟಿಲ ವೇಷಂಬುನ ಗೊಲ್ಲ ವಿಭಾತಿ
ಬಱಪು ವ್ರೇಳ್ಳುನು ಮೊದ್ದು ಪಾದಮುಲೊ
ಗುಜ್ಜು ಚಱು ತೊಡಲುನು ದೊಪ್ಪ ಚೆವುಲುನು ಬರಡು
ಪ್ರಕ್ಕಲು, ಬೀರನರಮುಲುನು ಜಿದಕ
ಮುಕ್ಕುನು, ಮುಡಿಬೊಮಲೊ ಮೊಗಿದೋನಿಕಡುಪುಂ
ಬೊಕ್ಕಿಳ್ಳುವೋಯಿನ ಚೆಕ್ಕಿಳ್ಳು ವಲುಂದ
ಬೊಕ್ಕಿ ಜೂಮ್ಮನು, ಬಿದ್ದನಿಕ್ಕಿನ ಮೆಡಯುಂ
ಬಲ್ಲಮೀಸಮಲು, ನೇರ್ಪಡು ಕಾಯಕನ್ನು
ಬಿಲ್ಲಿಗಡ್ಡಂಬುನು, ನಲ್ಲನಿಮೇನುಂ
ಬ್ರಾಂಕುವಟ್ಟಿನ ಪಂಡ್ಲು, ಬ್ರದ್ದ ಚೇತುಲುನು
ವೀರಿಕ ಕಾಳ್ಲಾನು, ನಡ್ಡಿವೀಂಪುನು ದನರ
ಮುಲಗತ್ತಿಯಿಚ್ಚುಂ ಗೋಕುಲುಂಜೂಂಡುಂಗೊಡಪು
ಮೊಲತೆತ್ತಿ ನಿಡಿ ದೊಡ್ಡಮುಲಕಚ್ಚ ಗಟ್ಟಿ

(ಗೂ.ವೆಂ.ಸು(ಸಂ), ಬ.ಪು., ತೃ.ಆ.,ಸಾಲು-೧೪೦೦-೧೪೧೨)

(ಗೊಲ್ಲನಂತೆ ಕುಟಿಲ ವೇಷವನ್ನು ಧರಿಸಿ ಮುರುಕು ಬೆರಳು, ಒಡೆದ ಕಾಲುಗಳು, ಮುರುಟು ಕಿವಿಗಳು, ಚಪ್ಪಟೆ ಮೂಗು, ಗಂಟು ಹುಬ್ಬು, ಬತ್ತಿದ ಹೊಟ್ಟೆ, ಅಡಗಿದ ಹೊಕ್ಕಳು, ಉಬ್ಬಿದ ಕೆನ್ನೆ, ಸುಕ್ಕುಗಟ್ಟಿದ ಕೊರಳು, ಕಂದು ಮೀಸೆಗಳು, ಗಡ್ಡೆ ಕಣ್ಣು, ಹರಕು ಗಡ್ಡ, ಕಪ್ಪುದೇಹ, ಉಬ್ಬು ಹಲ್ಲುಗಳು, ಮೊಟು ಕೈಗಳು, ಡೊಂಕು ಕಾಲುಗಳು, ಗೂನು ಬೆನ್ನು, ಸೊಂಟದಲ್ಲಿ ದೊಡ್ಡ ಕಚ್ಚೆಯನ್ನು ಕಟ್ಟಿ)

ಇಷ್ಟು ವಿಕಾರವಿರುವ ಗೊಲ್ಲನ ತಲೆಯ ಕೂದಲು ಗಾಳಿಗೆ ತೂರಾಡುತ್ತಿದ್ದವು. ಮೇಕೆ ಮರಿಗಳನ್ನು ಕೈಯಲ್ಲಿ ಹಿಡಿದು ನಾಯಿಗಳ ಕರೆಯುತ, ಮೇಕೆಗಳಿಗೆ ಜಾಲಿಕಾಯಿಗಳನ್ನು ತರಿಯುತ್ತಿದ್ದನು. ಈ ಗೊಲ್ಲನ ಸನ್ನಿವೇಶವನ್ನು ಅವನ ಸಹಜ ಚಿತ್ರಣವನ್ನು ಅತ್ಯಂತ ನೈಜವಾಗಿ ಮತ್ತು ಸುಂದರವಾಗಿ ಇಬ್ಬರೂ ಕವಿಗಳು ಕಟ್ಟಿಕೊಟ್ಟಿದ್ದಾರೆ.

**ಆಹಾರ ಪದ್ಧತಿ :**

ಆ ಕಾಲದ ಪ್ರಮುಖ ಆಹಾರ ಅಂಬಲಿ(ಗಂಜಿ) ಎಂಬುದು ಈ ಪುರಾಣದಿಂದ ತಿಳಿಯುತ್ತದೆ. ಅಂಬಲಿಯ ಪ್ರಸ್ತಾಪ ಅನೇಕ ಕಡೆಗಳಲ್ಲಿ ಬಂದಿದೆ. ಬೆಜ್ಜಮಹಾದೇವಿ ಕಥೆಯಲ್ಲಿ ಊಟಮಾಡದೆ ಮುನಿಸಿಕೊಂಡವನಂತೆ ನಟಿಸುತ್ತಿದ್ದ ಶಿವನಿಗೆ ಮಹಾದೇವಿ 'ಕಾಮಿಂಪಂಗಾಂ ಗರಿಕಾಳವ್ವಯಿಂಟ ಮಾಮಿಡ ಪಂಡುಲು ಮಱುಂಗುನ ನಮಲಿ ಪೋಯಿ ಚೆನ್ನಯಯಿಂಟಿಂಬುಲಿಯಂಬ ಕಳಮುಂ ಜೇಯುಂ' (ಹಸಿವಾಗದೆಯೇ ಕರಿಕಾಳವ್ವೆಯ ಮನೆಯ ಮಾವಿನ ಹಣ್ಣುಗಳನ್ನು ತಿಂದು ನಂತರ ಚೆನ್ನಯ್ಯನ ಮನೆಯ ಹುಳಿಯಂಬಳಿಕವನ್ನು ಹೀರಿ) (ತೃ.ಆ.ಸಾ.೬೭೧-೬೭೩) ಬಂದಿರುವೆ ಎಂದು ಹೇಳುತ್ತಾಳೆ. ಭೀಮಕವಿಯು 'ಹುಳಿಯಂಬಕಳವಂ' (ಭೀ.೧೪.೨೬) ಎಂದು ಹೇಳಿದ್ದಾನೆ.

ಅಲ್ಲಮಪ್ರಭುವಿಗೆ ಪಂಚ ಭಕ್ಷಾನ್ನಗಳನ್ನು ಎಲ್ಲಾ ಪದಾರ್ಥಗಳನ್ನು ಬಸವಣ್ಣನಿಗೆ ಬಡಿಸಿದನೆಂದು (ದ್ವಿಆ.ಸಾ.೩೬೧) ಸೋಮನಾಥ ಹೇಳಿದರೆ ಭೀಮಕವಿಯು ಪಂಚಪಕ್ವಾನ್ನ, ದೇವಾನ್ನ, ದಿವ್ಯಾನ್ನಂಗಳಂ (ಭೀ.೭.೧೪)ನ್ನು ನೀಡಿದರು ಎಂದು ಹೇಳುತ್ತಾನೆ.

'ಕೋಳೂರು ಕೊಡಗೂಸು' ಕಥೆಯಲ್ಲಿ ಆ ಕಾಲದ ಆಹಾರಗಳ ಪಟ್ಟಿಯನ್ನು ಇಬ್ಬರೂ ಕವಿಗಳು ನೀಡಿದ್ದಾರೆ. ಅವು ಹಾಲು, ತುಪ್ಪ, ಕಲ್ಲುಸಕ್ಕರೆ, ಪಾಯಾಸ, ಹೆಸರಹುಗ್ಗಿ, ಚಿಗುಳಿ, ಚಕ್ಕುಲಿ, ಹಾಲವುಗ, ಮಂಡಗೆ, ತರುಗುವಿಡ್ಡಲಿಗೆ, ಲಡ್ಡು ಹಲವು ಫಲಗಳು(ಹಣ್ಣುಗಳು) ಹೀಗೆ ವಿವಿಧ ಆಹಾರಗಳನ್ನು ಕೊಡಗೂಸು ಕಥೆಯಲ್ಲಿ ಹೇಳುತ್ತಾರೆ. ಈ ಎಲ್ಲಾ ಪದಾರ್ಥಗಳು ಅಂದು ಸಿಗುತ್ತಿದ್ದವು ಎಂಬುದು ತಿಳಿಯುತ್ತದೆ.

ಬೇಡರ ಕಣ್ಣಪ್ಪನ ಕಥೆಯಲ್ಲಿ ಆ ಕಾಲದಲ್ಲಿ ತಿನ್ನಲು ಬಳಸುತ್ತಿದ್ದ ಹಣ್ಣುಗಳು ಮತ್ತು ಇತರೆ ಆಹಾರ ಪದಾರ್ಥಗಳನ್ನು ಭೀಮಕವಿ ತಿಳಿಸುತ್ತಾನೆ.

> "ತಣ್ಣನಿರು ಮೆಲುವಡೆ ಬೆಳಲ ತನಿ
> ವಣ್ಣು ಮಾವಿನಹಣ್ಣು ನೇಜಿಲ
> ಹಣ್ಣು ಕಳವೆಯ ಹಣ್ಗಳೆಲಚೆಯ ಹಣ್ಣು ತುಂಬುರದ
> ಹಣ್ಣು ನೇಬಿಯ ಹಣ್ಗಳತ್ತಿಯ
> ಹಣ್ಣು ಹುಣಸೆಯ ಹಣ್ಣು ಜೇನೆಯ
> ಹಣ್ಣು ಯಿಪ್ಪೆಯ ಹಣ್ಣದಱ ಹೂ ಮಧುರ ಮಧುವುಂಟು"
> ಮಿಕ್ಕ ಹೆಮ್ಮರೆವಾಲುಮಂ ಹೊಡೆ
> ಯಿಕ್ಕಿದುಯ್ಯಲು ವಾಯ್ದೆಯಿದ ಬಿದಿ
> ರಕ್ಕಿಯೋಗರ ವೊಲಿದಡುಡುವಿನ ತುಪ್ಪವುಂಟಲ್ಲಿ
> ಹಕ್ಕಿಗಳ ಪಲಲಂಗಳುಂಟೇ

ಸಕ್ಕೆ ಮೃಗಮಾಂಸಂಗಳುಂಟೇ
ತಕ್ಕೆ ಹಸಿದಿರಲೆಮ್ಮ ಠಾವಿಗೆ ಬಂದು ಸುಖದೊಳಿರು"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೧೭,ಪ.೧೬,೧೭)

ಗಿರಿಜನರ ಆಹಾರ ಪದ್ಧತಿಯ ಸಂಪೂರ್ಣ ಮಾಹಿತಿಯನ್ನು ಭೀಮಕವಿ ಇಲ್ಲಿ ತಿಳಿಸುತ್ತಾನೆ. ಹಾಗೆಯೇ ಕೆಂಬಾವಿ ಭೋಗಯ್ಯನ ಕಥೆಯಲ್ಲಿ ಸತ್ತ ಕರುವಿನ ಮಾಂಸದ ಅಡಿಗೆಯನ್ನು ಮಾಡಿದ ವಿವರ ಬರುತ್ತದೆ. (ಭೀ.೫೬.೩೫-೩೬)

'ಬಸವಪುರಾಣ'ಗಳ ಬಹುತೇಕ ಕಡೆಗಳಲ್ಲಿ 'ಹುಗ್ಗಿಯ' ಪ್ರಸ್ತಾಪವಿದೆ. ಸಿಹಿ ಖಾದ್ಯವಾದ ಹುಗ್ಗಿಯು ಆ ಕಾಲದ ಜನರು ಪ್ರಮುಖ ಆಹಾರವಾಗಿರಬೇಕು. ಇದನ್ನು ದೇವರಿಗೆ ನೈವೇದ್ಯ ಮಾಡಲೂ ಸಹ ಬಳಸುತ್ತಿದ್ದರು ಎಂಬುದಕ್ಕೆ ಹಲವು ನಿದರ್ಶನಗಳು ಸಿಗುತ್ತವೆ. ಎಳ್ಳು, ಬೆಲ್ಲ, ಅಕ್ಕಿಯನ್ನು ಕಲಿಸಿ ಹುಗ್ಗಿಯನ್ನು ಮಾಡುತ್ತಿದ್ದರು. ಇದು ಶಿವನಿಗೆ ಪ್ರಿಯವಾದ ಆಹಾರವಾದ್ದರಿಂದ ಅರ್ಪಿಸುತ್ತಿದ್ದರು. ಸಂಕ್ರಾಂತಿ, ರಥಸಪ್ತಮಿಯಂತಹ ವಿಶೇಷ ಹಬ್ಬಗಳಂದು ಈ ಅಡುಗೆ ಸಾಮಾನ್ಯವಾಗಿತ್ತು. ಸಂಕ್ರಾಂತಿ ಚಳಿಗಾಲದಲ್ಲಿ ಬರುವುದರಿಂದ ಆ ಸಮಯದಲ್ಲಿ ಹೆಚ್ಚು ಹುಗ್ಗಿಯನ್ನು ಸೇವಿಸುತ್ತಾರೆ. ಎಳ್ಳು ಶರೀರಕ್ಕೆ ಉಷ್ಣತೆಯನ್ನು ಕಲ್ಪಿಸುತ್ತದೆ.

**ಯಾತ್ರೆ-ಜಾತ್ರೆ :**

'ಬಸವಪುರಾಣ' ರಚನಾ ಕಾಲಕ್ಕೆ ಹಬ್ಬಗಳು ಜಾತ್ರೆಗಳು ನಡೆಯುತ್ತಿದ್ದವು ಎಂಬುದಕ್ಕೆ ಈ ಪುರಾಣಗಳಲ್ಲಿ ಆಧಾರಗಳು ದೊರೆಯುತ್ತವೆ. ಇಂದಿನಂತೆಯೇ ಹಬ್ಬಗಳಿಗೆ ವಿಶೇಷ ಪ್ರಾಶಸ್ತ್ಯವನ್ನು ನೀಡುತ್ತಿದ್ದರು. ಎಂಥವರಿಗೂ ಜಾತ್ರೆಗಳೆಂದರೆ ತುಂಬಾ ಪ್ರೀತಿ. ಆ ಕಾಲದಲ್ಲಿ ಜಾತ್ರೆಗಳಿಗೆ ಎತ್ತಿನಗಾಡಿಗಳ ಮೇಲೆ ಹೋಗುತ್ತಿದ್ದರು ಎಂಬುದನ್ನು ಸೋಮನಾಥ ಹೇಳುತ್ತಾನೆ.

ಕೊಡಗೂಸು ಎಷ್ಟೇ ಬೇಡಿಕೊಂಡರು ಹಾಲು ಕುಡಿಯದೇ ಇದ್ದ ಶಿವನಿಗೆ ಷೋಡಶಪರ್ವವನ್ನು ನೋಡಲು ಜೊತೆಯಲ್ಲಿ ಹೋಗೋಣ. ಹಾಗೆಯೇ ವೀರಭದ್ರನ ಜಾತ್ರೆಗೆ ನಿನ್ನನ್ನು ಬಂಡಿಯಲ್ಲಿ ಕಳುಹಿಸುವೆ ಹಾಲು ಕುಡಿಯೋ ಎಂದು (ಪಾ.ಸೋ.,ಬ.ಪು.ತೃ.ಆ.ಸಾಲು-೮೫೭-೮೬೦) ಎಂದು ಭಿನ್ನೈಸುತ್ತಾಳೆ. ಇದೇ ಸಂದರ್ಭವನ್ನು ಭೀಮಕವಿಯು ಹೇಳುತ್ತಾ 'ಗುರುಮಠದೊಲೆಮ್ಮಯ್ಯಗಳ ಪರ್ಬಕ್ಕೆ ನಾಳಿರ್ದು ಕರೆಯಬಹೆ"(ಭೀ.೧೩-೧೨) ನಿನ್ನನ್ನು, ಅಲ್ಲಿ 'ವೀರಭದ್ರನ ಹಲಗೆ ಮೆರೆವುದು'(ಭೀ.೧೩-೧೪) ಅಲ್ಲಿನ ವೀರಭಕ್ತರ ಜೊತೆಯಲ್ಲಿ ವೀರವನ್ನು ತೋರಿಸುವೆಯೆಂತೆ ಹಾಲನ್ನು ಕುಡಿಯಯ್ಯಾ ಎಂದು ಕೊಡಗೂಸು ಬೇಡಿಕೊಳ್ಳುತ್ತಾಳೆ.

**ಔಷಧ ಪದ್ಧತಿ :**

'ಬಸವಪುರಾಣ'ಗಳ ರಚನಾ ಕಾಲದಲ್ಲಿ ಇಂದಿನಂತೆ ಕಾಯಿಲೆಗಳಿಗೆ ಔಷಧಿಗಳಿರಲಿಲ್ಲ. ಆಗ ಪ್ರತಿಯೊಂದು ಕಾಯಿಲೆಗೂ ಪ್ರಕೃತಿಯಲ್ಲಿ ಸಿಗುವ ಗಿಡಮೂಲಿಕೆಗಳಿಂದ ಔಷಧಿಗಳನ್ನು ತಯಾರಿಸಿ

ಕುಡಿಸುತ್ತಿದ್ದರು. ಒಂದೊಂದು ರೋಗಕ್ಕೂ ಒಂದೊಂದು ತೆರನಾದ ಔಷಧಿಗಳನ್ನು ಸಿದ್ಧಪಡಿಸುತ್ತಿದ್ದರು. ಅವರು ಬಳಸುತ್ತಿದ್ದ ಪ್ರಧಾನ ವಸ್ತುಗಳೆಂದರೆ ಮರದ ಬೇರು, ಕಾಂಡದ ಚಕ್ಕೆ, ಎಲೆಗಳು, ಹೂವುಗಳು, ಹಣ್ಣುಗಳು, ಮರದ ಬುಡದಲ್ಲಿರುವ ಮಣ್ಣು, ಗೆಡ್ಡೆ ಪದಾರ್ಥಗಳು ಹಾಗೂ ವಿವಿಧ ಎಲೆಗಳಲ್ಲಿ ಉಸುರುವ ಹಾಲು ಮುಂತಾದವು. ಈ ವಸ್ತುಗಳಿಂದ ರೋಗಕ್ಕೆ ತಕ್ಕಂತೆ ಔಷಧಿಗಳನ್ನು ತಯಾರಿಸುತ್ತಿದ್ದರು.

'ನಾಟ್ಯಮಿತ್ತಂಡಿ'ಯ ಕಥೆಯಲ್ಲಿ ನಾಟಿ ಔಷಧಿಯ ವಿವರವಿದೆ. ಒಮ್ಮೆ ನಾಟ್ಯಮಿತ್ತಂಡಿಯು ಏಕಾಮ್ರನಾಥನ ಗುಡಿಗೆ ಪೂಜೆ ಮಾಡಲೆಂದು ಬರುತ್ತಾನೆ. ಅಲ್ಲಿ ಶಿವನು 'ತಾಂಡವ ಮೂರ್ತಿ'ಯ ಭಂಗಿಯಲ್ಲಿರುವುದನ್ನು ಕಂಡು ಗಾಬರಿಯಾಗುತ್ತಾನೆ. ಅಲ್ಲಿದ್ದ ಶಿವಬ್ರಾಹ್ಮಣ ಪೂಜಾರಿಯನ್ನು, ಈಶ್ವರನ ನಡುವೇಕೋ ಬಾಗಿದೆಯಲ್ಲಾ, ಕಾಲುಗಳು ಅಂಕುಡೊಂಕಾಗಿವೆ, ಮುಡಿ ಬಿಚ್ಚಿಕೊಂಡಿದೆ ಎಂದು ಕೇಳುತ್ತಾನೆ. ಆಗ ಪೂಜಾರಿಯು ಅವನ ಮುಗ್ಧತ್ವ ಕಂಡು ಇವನನ್ನು ಮರಳುಮಾಡಿ ಹಣ ಸಂಪಾದಿಸಬೇಕೆಂದುಕೊಳ್ಳುತ್ತಾನೆ. ಅಂತೆಯೇ ಶಿವನಿಗೆ 'ವಾಯುದೋಷವಿದೆ ಅದಕ್ಕೆ ಶಾಂತಿ ಮಾಡಿಸಬೇಕೆಂದು' ಹೇಳುತ್ತಾನೆ. ವಾಯುದೋಷಕ್ಕೆ ಔಷಧಿಯನ್ನು ನಾನು ಬಲ್ಲೆ ಎಂದು ಹೇಳಿದ್ದರಿಂದ ನಾಟ್ಯಮಿತ್ತಂಡಿ ತನ್ನೆಲ್ಲಾ ಧನವನ್ನು, ಮನೆಯ ಪದಾರ್ಥಗಳನ್ನು ತಂದು ಪೂಜಾರಿಯ ಮನೆ ಮುಂದೆ ಇಡುತ್ತಾನೆ. ಇವಿಷ್ಟನ್ನು ತೆಗೆದುಕೊಂಡು ಮಾರಾರಿಯ ಈ ವಾಯುದೋಷವನ್ನು ನಿವಾರಿಸಿದರೆ ನಾನು ನನ್ನ ಹೆಂಡತಿ ಮಕ್ಕಳೊಂದಿಗೆ ದಾಸರಾಗಿ ನಿಮ್ಮ ಸೇವೆಯನ್ನು ಮಾಡುತ್ತೇವೆಂದು ಹೇಳುತ್ತಾನೆ. ಆಗ ವಾಯುತೈಲವೆಂಬ ಔಷಧಿಯನ್ನು ತಯಾರಿಸುವೆನೆಂದು ಎಳೆಯ ಉನ್ಮತ್ತಿ ಎಲೆಗಳು, ಅವುಡಲದ ಎಲೆಗಳು, ಹಣ್ಣಾದ ಎಕ್ಕೆಯ ಎಲೆಗಳನ್ನು ಜೊತೆಗೆ ಕೆಲವು ಮದ್ದುಗಳನ್ನು ಸೇರಿಸಿ ಮಾಯಾಹರನ ಮೈಗೆ ಹಚ್ಚುವರು. ನಂತರ ಮರಳ-ಪೊಟ್ಟಣವನ್ನು ಕಾಸಿ, ಅಂಗೈಯಲ್ಲಿ ಅದರ ಬಿಸಿಯನ್ನು ಪರೀಕ್ಷಿಸಿ ಶಿವನ ಮೈಗೆ ಶಾಖವನ್ನು ನೀಡುವರು. (ಪಾ.ಸೋ.ತೃ.ಆ.ಸಾ.೧೧೫೧-೧೧೬೫)

ಭೀಮಕವಿಯು ಈ ವಿಚಾರಗಳೆಲ್ಲವನ್ನು ಹೇಳುತ್ತಾನೆ. ಇಷ್ಟಾದರೂ ವಾಯುರೋಗವು ಗುಣವಾಗುವುದಿಲ್ಲ. ಕೊನೆಗೆ ಈ ವಾಯುರೋಗಕ್ಕೆ ನಾನೇ ಮದ್ದು ಎಂದು ತನ್ನ ಪ್ರಾಣವನ್ನು ಅರ್ಪಿಸಲು ಮುಂದಾಗುತ್ತಾನೆ. ಇಲ್ಲಿ ಮುಖ್ಯವಾಗಿ ವಾಯುರೋಗಕ್ಕೆ ಮೇಲೆ ಹೇಳಿದ ರೀತಿಯಲ್ಲಿ ಔಷಧವನ್ನು ತಯಾರಿಸುತ್ತಿದ್ದರು ಎಂಬುದು ಗಮನಾರ್ಹ ಸಂಗತಿ.

'ಬೇಡರ ಕಣ್ಣಪ್ಪ'ನ ಕಥೆಯಲ್ಲಿ ಕಣ್ಣಿಗೆ ಬರುವ ವಿವಿಧ ರೋಗಗಳನ್ನು ಇಬ್ಬರೂ ಕವಿಗಳು ಪರಿಚಯಿಸಿದ್ದಾರೆ. ಕಣ್ಣಿಗೆ ದೂಳು ಬಿದ್ದಾಗ ನಾಲಿಗೆಯನ್ನು ಗುಡ್ಡೆಯ ಮೇಲೆ ತಿರುಗಿಸಿ ಒರೆಸುವುದು, ಸೀರೆಯ ತುದಿಗೆ ಬಾಯಿಯಿಂದ ಊದಿ ಕಣ್ಣಿಗೊತ್ತುತ್ತಾ ಶಾಖ ನೀಡುವುದು(ಪಾ.ಸೋ.ತೃ.ಆ.೧೦೨೬-೪೪, ಭೀ.ಸಂ.೧೭.೬೦). ಇದು ಸಾಮಾನ್ಯವಾಗಿ ಪ್ರಥಮ ಚಿಕಿತ್ಸೆಯ ರೂಪದ್ದಾಗಿದೆ. ಕಣ್ಣಿಗೆ ಬರುತ್ತಿದ್ದ ರೋಗಗಳನ್ನು ಭೀಮಕವಿ ಹೀಗೆ ಹೇಳಿದ್ದಾನೆ.

"ಅಲಿ ನೊಂದುದೊ ಕಣ್ಣ ಬೇನೆಯೊ
ಮೈಲಗೆಯೊ ಹೂ ಹುಟ್ಟಿದುದೊ ಕಣು
ಶೂಲೆಯೋ ಅಳಿಗಣ್ಣೊ ತಿಮಿರವೊ ಟೊಳ್ಳೆ ಪೋದಪುದೋ
ಬೀಲಿದುದೊ ಪಡೆಗವಿದುದೋ ರವೆ
ಕೀಲಿಸಿತೊ ದುರ್ಮಾಂಸದೋಷವೊ
ನೀಲಿಗಣ್ಣೊ ಮಾಜುವೆಯೊ ಕಣ್ಣುಟಿಲವೋ ಅರಿಯೆ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೧೭,ಪ.೬೬)

ಸುಮಾರು ಹದಿನೈದು ವಿಧದ ಕಣ್ಣಿನ ರೋಗಗಳನ್ನು ಭೀಮಕವಿ ಹಾಗೂ ಸೋಮನಾಥನು (ಪಾ.ಸೋ.ತೃ.ಆ.ಸಾ.೧೦೫೪-೧೦೬೦) ಉಲ್ಲೇಖಿಸಿದ್ದಾರೆ.

**೫.೨. ಧಾರ್ಮಿಕ ಸಂಗತಿಗಳು :**

ಭಾರತವು ಧರ್ಮಪ್ರಧಾನವಾದ ದೇಶ. ಇಲ್ಲಿ ಹಲವು ಧರ್ಮಗಳು, ಮತಗಳು ಕೂಡಿಕೊಂಡಂತೆ, ಕೂಡುಕುಟುಂಬ ದೇಶವಾಗಿದೆ. ೧೨ನೇ ಶತಮಾನದಲ್ಲಿ ರೂಢಿಯಲ್ಲಿದ್ದಂತಹ ಧಾರ್ಮಿಕ ವಿಚಾರಗಳು ಜನರ ಮನಸ್ಸಿನಲ್ಲಿ ತುಂಬಿಕೊಂಡಿದ್ದವು. ಜೈನ, ಬೌದ್ಧ, ಶೈವ, ವೈಷ್ಣವ ಮುಂತಾದ ಧರ್ಮಗಳು ತಮ್ಮದೇ ಆದ ಅನೇಕ ಬಸದಿ, ದೇವಾಲಯಗಳನ್ನು ನಿರ್ಮಿಸಿಕೊಂಡು ತಮ್ಮ ತಮ್ಮ ಧರ್ಮಗಳ ಏಳಿಗೆಗೆ ಶ್ರಮಿಸುತ್ತಿದ್ದರು. ತಮ್ಮ ಧರ್ಮಗಳ ಧಾರ್ಮಿಕ ವಿಚಾರಗಳನ್ನು ಶಾಸನ, ತಾಳೆಗರಿ ಮುಂತಾದವುಗಳಲ್ಲಿ ಲಿಖಿಸುತ್ತಾ ಮುಂದಿನ ಪೀಳಿಗೆಗಳಿಗೆ ಮುಟ್ಟಿಸುವ ಕಾರ್ಯದಲ್ಲಿ ತೊಡಗಿದ್ದರು. ಪರಸ್ಪರ ಸಂಘರ್ಷಗಳಿಂದ ಕೂಡಿದ್ದವು. ಇದಕ್ಕೆ 'ಬಸವಪುರಾಣ'ದಲ್ಲಿ ಅನೇಕ ಉದಾಹರಣೆಗಳಿವೆ. ಹಾಗಾಗಿ ಅಂದಿನ ಕೆಲವು ಧಾರ್ಮಿಕ ಸಂಗತಿಗಳನ್ನು ಇಲ್ಲಿ ತಿಳಿಸಲಾಗಿದೆ.

**ಅ. ದೇವಾಲಯ, ಕೋಟೆಗಳು :**

ವೀರಶೈವಧರ್ಮದ ಪುನವೃತ್ತಿಗಾಗಿ ಆ ಕಾಲದಲ್ಲಿ ಅನೇಕ ಶಿವದೇವಾಲಯಗಳನ್ನು ನಿರ್ಮಿಸಲಾಯಿತು. ರಾಜ, ಸಾಮಂತರಾದಿಯಾಗಿ ಎಲ್ಲರಿಂದಲೂ ಈ ದೇವಾಲಯ ನಿರ್ಮಾಣ ಕಾರ್ಯಕ್ಕೆ ಸಾಕಷ್ಟು ಪ್ರೋತ್ಸಾಹ ಸಿಗುತ್ತಿತ್ತು ಎಂಬುದನ್ನು ಹಲವು ಶಾಸನಗಳು ಸಾಹಿತ್ಯಕ ದಾಖಲೆಗಳು ನಮಗೆ ತಿಳಿಸುತ್ತವೆ. ಬಸವಣ್ಣ ಹಾಗೂ ಅವನ ಸಮಕಾಲೀನ ಅನೇಕ ಶರಣರು ದೇವಾಲಯಗಳ ನಿರ್ಮಾಣ ಮತ್ತು ಜೀರ್ಣೋದ್ಧಾರದ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಹೀಗೆ ದೇವಾಲಯಗಳನ್ನು ಸಂರಕ್ಷಿಸಿಕೊಳ್ಳುವುದರ ಮೂಲಕ ಧರ್ಮದ ಬೆಳವಣಿಗೆಗೆ ಪೂರಕವಾಗಿ ಸಾಕಷ್ಟು ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಿದ್ದರು. ದೀಪದ ಕಲಿಯಾರನ ಕಥೆಯಲ್ಲಿ ಹಾಳಾಗಿದ್ದ ಶಿವದೇವಾಲಯವನ್ನು ಜೀರ್ಣೋದ್ಧಾರ ಮಾಡಿ ಆ ದೇವಾಲಯ ರಕ್ಷಣೆಗೆ ಸುತ್ತಲೂ ಕೋಟೆಗಳನ್ನು ಕಟ್ಟಿ ಕಾವಲುಗಾರರನ್ನು ನಿಯಮಿಸುತ್ತಿದ್ದರೆಂಬ ಸಂಗತಿಗಳು ತಿಳಿಯುತ್ತವೆ.(ತೃ.ಆ.,ಸಾಲು-೯೯೧-೯೯೫)

ದೇವಾಲಯಗಳಿಗೆ ಕವಾಟಗಳು, ಅಂಕದ್ವಾರಗಳು, ಬಾಗುಕಟ್ಟೆಗಳನ್ನು ಇಡುತ್ತಿದ್ದರು. ಕೋಟೆಗಳಲ್ಲಿ ಅಲ್ಲಲ್ಲಿ ಕೊಡೆಗಳನ್ನು ಕಟ್ಟಿರುತ್ತಿದ್ದರು. ಇಲ್ಲಿ ಕಾವಲುಗಾರರು ಇರುತ್ತಿದ್ದರು. ಕೋಟೆಯ ತೆನೆ(ಗೋಡೆಯ ಮೇಲಿನ ಗುಂಡಗಿನ ಅಲಂಕಾರ)ಗಳ ಮೇಲೆ ಪತಾಕೆಗಳು ಹಾರಾಡುತ್ತಿದ್ದವು.(ಭೀ.೧೫-೧೧) 'ಬಿಲ್ಲೇಶ ಮಲ್ಲಯ್ಯ'ನ ಕಥೆಯಲ್ಲಿ ಆ ದೇವಾಲಯದ ಸುತ್ತಲೂ ಪ್ರಕಾರದಲ್ಲಿ ಮುಖಭದ್ರಮಂಟಪ, ಸ್ವರ್ಣಶಿಖರವು ಗುಡಿಗೆ ಒಪ್ಪಿ ವೃಷಭೇಂದ್ರನ ಲಿಂಗವು ಶೋಭಿಸುತಿತ್ತು ಎಂದು ವರ್ಣಿಸಲಾಗಿದೆ.(ಪಾ.ಸೋ.ದ್ವಿ.ಆ.೮೨೭) ಕನ್ನಡ 'ಬಸವಪುರಾಣ'ದಲ್ಲಿಯೂ ಮುಖಭದ್ರಮಂಟಪ ಕನಕ ಶೋಭಾಕಳಶಗಳ ವಿವರವಿದೆ.(ಭೀ.೮-೧೧) ದೇವಾಲಯಗಳಲ್ಲಿ ನಿತ್ಯವೂ ಪ್ರಸಾದ ವಿನಿಯೋಗ ಮಾಡುತ್ತಿದ್ದರು ಮತ್ತು ದೇವಾಲಯಗಳಲ್ಲಿ ಬಹಿರಂಗ ನೃತ್ಯಗಳನ್ನು ಮಾಡುತ್ತಿದ್ದರು. ಸಾಮಾನ್ಯವಾಗಿ ಗರ್ಭಗುಡಿಗೆ ಅಭಿಮುಖವಾಗಿ ನೃತ್ಯವೇದಿಕೆಗಳಿರುತ್ತಿದ್ದವು. ರಾಜರು ನಿತ್ಯವೂ ದೇವಾಲಯಗಳಿಗೆ ಭೇಟಿ ನೀಡುತ್ತಿದ್ದರು.

**ಆ. ವ್ರತಗಳು :**

ಮನುಷ್ಯ ತನ್ನ ಪರಿಸರದಲ್ಲಿ ಹಲವಾರು ನಂಬಿಕೆ, ಆಚರಣೆಗಳಿಗೆ ಮಾರುಹೋಗಿ ಅವುಗಳನ್ನು ಚಚೂತಪ್ಪದೆ ಪಾಲಿಸುತ್ತಿರುತ್ತಾನೆ. ಅದರಂತೆ ಕೆಲವರು ತಮ್ಮ ಇಷ್ಟಸಿದ್ಧಿ ಪ್ರಾಪ್ತಿಗೋಸ್ಕರ ತಾವು ನಂಬಿದ ದೇವರುಗಳಿಗೆ ವಿಶೇಷ ಹರಕೆ, ವ್ರತಗಳನ್ನು ಅರ್ಪಿಸುವುದರ ಮೂಲಕ ಕಾರ್ಯಸಿದ್ಧಿಗೊಳ್ಳುತ್ತಾರೆ. ಈ ರೀತಿಯ ವ್ರತಗಳು ಪ್ರಾಚೀನ ಕಾಲದಿಂದಲೂ ಬೇರೆ ಬೇರೆ ಕಾರಣಗಳಿಗೆ ಆಚರಣೆಯಲ್ಲಿರುವುದನ್ನು ಕಾಣುತ್ತೇವೆ. 'ಬಸವಪುರಾಣ'ದಲ್ಲಿ ಮಾದಾಂಬೆ ಪುತ್ರಪ್ರಾಪ್ತಿಗೋಸ್ಕರ ಏನು ಮಾಡಬೇಕೆಂಬ ಚಿಂತೆಯಲ್ಲಿ ಅನೇಕರನ್ನು ವಿಚಾರಿಸುತ್ತಾಳೆ. ಶಾಸ್ತ್ರಪುರಾಣಗಳನ್ನು ಪರೀಕ್ಷಿಸಲಾಗಿ "ನಂದಿನಾಥನ ನೋಂಪಿಯನ್ನು" ಮಾಡಿದರೆ ಮಕ್ಕಳ ಫಲವಾಗುವುದೆಂದು ತಿಳಿಯುತ್ತದೆ. ಅದರಂತೆ ಒಂಬತ್ತು ಸೋಮವಾರಗಳು ನಂದಿನಾಥನನ್ನು ಪೂಜಿಸಿ, ಅನಂತರ ಆದಿ ನಂದಿಗೆ ಮಜ್ಜನಗೈದು ಅಭಿಷೇಕ ಮಾಡುತ್ತಾಳೆ. ಮೃದುಚಂದನ, ಕುಸುಮ ನವಮಾಲೆಗಳನ್ನಿತ್ತು ಗಂಧ ಧೂಪದೀಪಾರತಿಗಳನ್ನೆತ್ತಿ ನವಪಂಚ ಭಕ್ಷ್ಯಾವಳಿಯನರ್ಪಿಸಿ, ಸಿಹಿ ಅಡುಗೆಯನ್ನು ಮಾಡುತ್ತಾಳೆ. ಅದನ್ನು ಅಲ್ಲಿದ್ದ ಭಕ್ತರೆಲ್ಲರಿಗೂ ಹಂಚಿ, ಭಕ್ತಿಯಿಂದ ಕೈಮುಗಿದು 'ಅನಾಥ ಬಂಧುವೆ ನಿನ್ನಮೇಲಿನ ಭಕ್ತಿಯ ಕಂದನೆನಿಸುವ ಮಗನನ್ನು ಕರುಣಿಸು' ಎಂದು ಬೇಡುತ್ತಾಳೆ.

ಕೊಡಗೂಸಿನ ತಂದೆ ಶಿವದೇವನು ನಿತ್ಯವೂ ಶಿವನಿಗೆ ಒಂದು ಬಳ್ಳ ಹಾಲನ್ನು ಅರ್ಪಿಸುವ ನೇಮವನ್ನು ಆಚರಿಸುತ್ತಿರುತ್ತಾನೆ. ಮಡಿವಾಳ ಮಾಚಯ್ಯನು ವೀರವ್ರತಾಚಾರಿ ಇವನು ಪ್ರತಿನಿತ್ಯ ಅಸಮ ಜಂಗಮಕೋಟಿಗೆ ಅರ್ಚನೆ ಮಾಡಿದ ನಂತರ ಭಕ್ತರ ಮಡಿ ಬಟ್ಟೆಗಳನ್ನು ತೊಳೆಯುವ ವ್ರತವನ್ನು ಪಾಲಿಸುತ್ತಿರುತ್ತಾನೆ. ಇರುವ ದಂಡಾರಿ ಎಂಬ ಶರಣನು 'ಶಿವಭಕ್ತರಿಗೆ ಭಂಗಗೈವ

ಪಾತಕರ ಅವಿಚಾರದಲ್ಲಿ ಕೊಲ್ಲುವಂಥ ನೇಮವನ್ನು ಆಚರಿಸುತ್ತಿರುತ್ತಾನೆ. ಬಾಹೂರ ಬ್ರಹ್ಮಯ್ಯ ಎಂಬುವನು ಕೋಳಿ ಕೂಗುವ ಮುನ್ನ ಹಲವು ಹೂದೋಟಗಳಿಂದ ಹೂಗಳ ತಂದು ಜಂಗಮರಿಗೆ ಕೊಡುವ ವ್ರತವನ್ನು ಪಾಲಿಸುತ್ತಿರುತ್ತಾನೆ. ಕಡವಲನಂಬಿಯು ಪ್ರಾಣಲಿಂಗಕ್ಕೆ ತಾನು ಪ್ರತಿದಿನ ಹಣತೆಯನ್ನು ಬೆಳಗುವ ವ್ರತವನ್ನು ಮಾಡುತ್ತಿರುತ್ತಾನೆ. ಗುಗ್ಗಳು ಕಲಿಯೂರನು ಮೂಸಂಧ್ಯೆಗಳಲ್ಲಿ ಪ್ರಾಣೇಶ್ವರನಿಗೆ ಧೂಪವ ಸಮರ್ಪಿಸುವ ನೇಮವನ್ನು ಮಾಡುತ್ತಿರುತ್ತಾನೆ. ಅರಿವಾಳು ನಯನಾರ ಎಂಬುವನು ಪ್ರತಿದಿನವು 'ರಾಜಾನ್ನದಕ್ಕಿಯೋಗರವ' ಸಮರ್ಪಿಸುವ ನೇಮವನ್ನು ಮಾಡುತ್ತಿರುತ್ತಾನೆ.

ಹೀಗೆ 'ಬಸವಪುರಾಣ'ಗಳಲ್ಲಿ ಬರುವ ಬಹುತೇಕ ಕಥಾಪುರುಷರು ಒಂದಿಲ್ಲೊಂದು ವ್ರತಗಳನ್ನು ಮಾಡುತ್ತಾ ಶಿವನ ಸೇವೆಯಲ್ಲಿ ತೊಡಗುತ್ತಿದ್ದರು.

ಕಂಚಿಯಲ್ಲಿ ಸಿರಿಯಾಳ ಸೆಟ್ಟಿ ಎಂಬ ಭಕ್ತ ತನ್ನ ಪತಿ ಚಂಗಳೆಯೊಡನೆ ನಿತ್ಯ ಸಾವಿರ ಜಂಗಮರಿಗೆ ದಾಸೋಹ ಮಾಡಿಸುವ ವ್ರತವನ್ನು ಮಾಡುತ್ತಿರುತ್ತಾನೆ.

**ಇ. ಹರಕೆಗಳು :**

ಸಾಮಾನ್ಯವಾಗಿ ಎಲ್ಲಾ ವರ್ಗದ ಜನರು ಈ ಸಂಪ್ರದಾಯವನ್ನು ನಂಬಿದ್ದಾರೆ. ತಮ್ಮ ಆಸೆ ಆಕಾಂಕ್ಷೆಯನ್ನು ಮನಸ್ಸಿನಲ್ಲಿ ಭಕ್ತಿಪೂರ್ವಕವಾಗಿ ಬೇಡಿಕೊಳ್ಳುತ್ತಾ ದೇವರ ಎದುರಲ್ಲಿ ಕುಳಿತುಕೊಳ್ಳುತ್ತಾರೆ. ದೇವರ ಮೂರ್ತಿಯ ಬಲ ಮತ್ತು ಎಡಭಾಗದಿಂದ ಮುಡಿಸಿದ ಹೂವೊಂದು ಕೆಳಗೆ ಬೀಳುತ್ತದೆ. ಬಲಗಡೆ ಬಿದ್ದರೆ ಕಾರ್ಯ ನೆರವೇರುತ್ತದೆಂದು, ಎಡಗಡೆ ಬಿದ್ದರೆ ಕಾರ್ಯ ನೆರವೇರುವುದಿಲ್ಲ ಎಂಬ ನಂಬಿಕೆಯಿದೆ. ಇದನ್ನೇ ಸೂಚಿಸುವ ಸಂದರ್ಭ 'ಬಸವಪುರಾಣ'ದಲ್ಲಿ ಬರುತ್ತದೆ. ಮಾದಾಂಬೆ ಪುತ್ರ ಸಂತಾನಕ್ಕಾಗಿ ನಂದಿಕೇಶ್ವರನಲ್ಲಿ ಬೇಡುತ್ತಾ ನನಗೆ ಪುತ್ರನೊಬ್ಬ ಜನಿಸಿದರೆ ನಿನ್ನ ಹೆಸರಿಡುವೆನೆಂದು ಕೈಮುಗಿದು ಕುಳಿತಿರುವಾಗ,

"ಇಂಡೆಯಂ ಕರುಣಿಸಲದಂ ಕೈ
ಕೊಂಡುರದೊಳಾನನದೊಳೊತ್ತುತೆ
ಮಂಡೆಯಲಿ ಸೂಡಿದಳು ಮಾನನಿ ತತ್‌ಪ್ರಸಾದವನು"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೨,ಪ.೫೫)

ಇಲ್ಲಿ 'ಇಂಡೆಯಂ' ಎನ್ನುವ ವಸ್ತು ಶುಭಸೂಚನೆಯನ್ನು ಸೂಚಿಸುತ್ತದೆ. ಹೀಗೆ ಕರುಣಿಸಿದ ವಸ್ತು ಯಾವುದು ಎಂಬುದು ಸ್ಪಷ್ಟವಾಗಿ, ಹೇಳದಿದ್ದರೂ ಅದನ್ನು 'ಮಂಡೆಯಲಿ ಸೂಡಿದಳು' ಎಂಬ ಮಾತಿನಿಂದ ಅದು ಹೂವೆಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದ ಶುಭ ಸೂಚನೆಯಿತ್ತ ದೇವರ ಪ್ರಸಾದವನ್ನು ಸ್ವೀಕರಿಸಿದಳು ಎಂಬುದು ಇಲ್ಲಿನ ಭಾವಾರ್ಥ. ಇದರಿಂದ ದೇವರಲ್ಲಿ ಹರಕೆಗಳನ್ನು ಕಟ್ಟಿಕೊಳ್ಳುವುದು, ಹಿಂದಿನಿಂದಲೂ ರೂಢಿಗತವಾಗಿ ಬಂದಿದೆ ಎಂಬ ಅಂಶ ಸ್ಪಷ್ಟವಾಗುತ್ತದೆ.

**ಈ. ಧರ್ಮ ಸಂಘರ್ಷಗಳು :**

ತಮ್ಮ ಸ್ವಧರ್ಮ ಸ್ಥಾಪನೆ ಮತ್ತು ಬೆಳವಣಿಗೆಯ ದೃಷ್ಟಿಯಿಂದ ಹಿಂದೆ ಧರ್ಮಧರ್ಮಗಳ ನಡುವೆ ಸಂಘರ್ಷಗಳು ನಡೆದಿರುವುದು ನಿಜ. ಪ್ರಮುಖವಾಗಿ ೧೨-೧೩ನೇ ಶತಮಾನಗಳಲ್ಲಿ ವೀರಶೈವ ಧರ್ಮವು ಪ್ರಭಲವಾಗುತ್ತಿತ್ತು. ಇದಕ್ಕೆ ಪ್ರೇರಣೆ ಎಂಬಂತೆ ಅಂದಿನ ಕೆಲ ಶರಣರು ತಮ್ಮ ಪರಿಸರದಲ್ಲಿದ್ದ ಜೈನ, ಬೌದ್ಧ, ವೈಷ್ಣವ ಧರ್ಮಗಳ ವಿರುದ್ಧ ಸಂಘರ್ಷಕ್ಕಿಳಿದರು. ಆದರೆ ಧರ್ಮಗಳನ್ನು ಅವನತಿ ಮಾಡಲು ಸಾಕಷ್ಟು ವಾದವಿವಾದಗಳು, ಗೋಷ್ಠಿಗಳನ್ನು ನಡೆಸುವ ಮೂಲಕ ಅವರನ್ನು ಸೋಲಿಸಿ ಎಲ್ಲರನ್ನು ಶಿವಭಕ್ತರನ್ನಾಗಿ ಮಾಡುತ್ತಿದ್ದರು. ಹಾಗೆಯೇ ಅನೇಕ ಜೈನ ಬಸದಿಗಳನ್ನು ನಾಶಮಾಡಿ ಅಲ್ಲಿ ಶಿವಾಲಯಗಳನ್ನು ಸ್ಥಾಪಿಸಿದರು. ಜಿನಮೂರ್ತಿ, ಬೌದ್ಧಮೂರ್ತಿಗಳನ್ನು ತೆಗೆದು ಶಿವಲಿಂಗ, ಶಿವಮೂರ್ತಿಗಳನ್ನಿಡುತ್ತಿದ್ದರು. ಏಕಾಂತ ರಾಮಯ್ಯ ಎಂಬ ಶರಣ ಕೆರುಹು ಕಾಲಿನಲ್ಲಿ ಶಿವಾಲಯವನ್ನು ಪ್ರವೇಶಿಸುತ್ತಿರುವ ಜೈನನನ್ನು ತಡೆದು ನಿಲ್ಲಿಸುತ್ತಾನೆ. ವಾದ ಪ್ರತಿವಾದಗಳ ನಂತರ ಜೈನನ ಪ್ರಶ್ನೆಯಂತೆ ರಾಮಯ್ಯ ತನ್ನ ತಲೆ ಕಡಿದು ಏಳು ದಿನಗಳ ನಂತರ ಮತ್ತೆ ಜೀವಪಡೆದು ಶಿವಧರ್ಮವೇ ಶ್ರೇಷ್ಠ ಎಂಬುದನ್ನು ತೋರಿಸಿ ಜೈನರನ್ನು ಶಿವಭಕ್ತರನ್ನಾಗಿ ಮಾಡುತ್ತಾನೆ. ಈ ಸಂದರ್ಭದಲ್ಲಿ ಅನ್ಯ ಧರ್ಮದವರನ್ನು ಸೋಲಿಸಿ ಶಿವಧರ್ಮವನ್ನು ಸ್ಥಾಪಿಸಿದ ಇರುತ್ತಾಂಡಿ, ಪಿಳ್ಳೈನಾರ, ನಿಡುಮಾರ, ನಮಿನಂದಿ, ಕೋವೂರ ಬ್ರಹ್ಮಯ್ಯ, ಹಿರಿಯ ನಾಚಯ್ಯ, ವೈಜಕವ್ವೆ ಸೊಡ್ಡಳ ಬಾಚಯ್ಯ, ಶಿವಲೆಂಕ ಮಂಚಯ್ಯ ಮುಂತಾದ ಶಿವಭಕ್ತರ ಕಥೆಗಳನ್ನು ಹೇಳಲಾಗಿದೆ. ಇವರೆಲ್ಲರೂ ಧಾರ್ಮಿಕ ಸಂಘರ್ಷವನ್ನು ಮಾಡಿದವರೆ ಆಗಿದ್ದಾರೆ.

**ಉ. ಅಷ್ಟಾವರಣಗಳು :**

ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ. ಈ ಎಂಟು ಅಷ್ಟಾವರಣಗಳು ವೀರಶೈವರಲ್ಲಿ ಅತ್ಯಂತ ಪ್ರಮುಖವಾದವುಗಳು. ಅವುಗಳ ಆಚರಣೆ ಮತ್ತು ಪ್ರಸಾರ ಮಾಡುವ ವಿಧಾನಗಳು ಬಸವಪುರಾಣದಲ್ಲಿ ಕಾಣುತ್ತೇವೆ. ಗುರುವಿಗೆ ಶಿಷ್ಯರು ತೋರುವ ವಿಧೇಯತೆ ಮತ್ತು ಶಿಷ್ಯರೊಂದಿಗೆ ಗುರುವಿನ ಸಂಬಂಧ ಮತ್ತು ಲೋಕಜ್ಞಾನ, ಬುದ್ಧಿಜ್ಞಾನಗಳನ್ನು ಬೋಧಿಸುವ ಗುರುಗಳ ಪ್ರಾಮುಖ್ಯತೆಯನ್ನು ಈ ಪುರಾಣಗಳಲ್ಲಿ ತಿಳಿಸಲಾಗಿದೆ. ಹಾಗೆಯೇ 'ಲಿಂಗ'ದ ಪ್ರಾಮುಖ್ಯತೆ, ಪೂಜೆ ಪುನಸ್ಕಾರಗಳನ್ನು ಸಲ್ಲಿಸುವ ಬಗೆಯನ್ನು ವಿವರಿಸಲಾಗಿದೆ. ಪ್ರತಿಯೊಬ್ಬ ಶರಣನು ಈಶ್ವರನ ಮೇಲೆ ಭಕ್ತಿಯುಳ್ಳವನು ಪ್ರಸಾದವನ್ನು ನೀಡಬೇಕು. ಆಗಲೇ ಅವನಿಗೆ ಮುಕ್ತಿ ಎನ್ನುವ ವಿಚಾರಗಳಿವೆ. ವಿಭೂತಿ ಧರಿಸುವುದು ಅತ್ಯಂತ ಶ್ರೇಷ್ಠ ಎಂಬಂತಹ ವಿಚಾರಗಳು ಬಸವಪುರಾಣಗಳಲ್ಲಿ ಸಂದರ್ಭೋಚಿತವಾಗಿ ವಿವರಿಸಲ್ಪಟ್ಟಿವೆ.

**ಊ. ಪಂಚಚಾರಗಳು :**

ಲಿಂಗಾಚಾರ, ಶಿವಾಚಾರ, ಸದಾಚಾರ, ಭೃತ್ಯಾಚಾರ, ಗಣಾಚಾರ ಈ ಐದು ವೀರಶೈವರಲ್ಲಿ ಪಂಚಾಚಾರಗಳೆನಿಸಿವೆ. ಇವುಗಳ ಪ್ರಾಮುಖ್ಯತೆಯನ್ನು ಶರಣರ ಕಥೆಗಳನ್ನು ವಿವರಿಸುವ ಸಂದರ್ಭದಲ್ಲಿ

ವರ್ಣಿಸಲಾಗಿದೆ. ಶಿವಭಕ್ತರಾದವರು ಈ ಐದು ಆಚಾರಗಳನ್ನು ತಪ್ಪದೇ ಪಾಲಿಸಬೇಕು ಎಂಬುದನ್ನು ವೀರಶೈವ ಧರ್ಮ ಪ್ರತಿಪಾದಿಸುತ್ತದೆ. ಹಾಗಾಗಿ ಕವಿಗಳು ಕೂಡ ಈ ಆಚಾರಗಳ ಮಾಹಿತಿಯನ್ನು 'ಬಸವಪುರಾಣ'ಗಳಲ್ಲಿ ಹೇಳಿದ್ದಾರೆ. ಹಾಗೆಯೇ ಬಿಜ್ಜಳನಲ್ಲಿ ಭಂಡಾರಿಯಾದ ಬಳಿಕ ಪ್ರತಿಜ್ಞೆ ಮಾಡುವ ಬಸವಣ್ಣನವರ ಭಾಷೆಗಳು ಅತ್ಯಂತ ಪ್ರಮುಖವಾದವುಗಳಾಗಿವೆ. ಬಸವಣ್ಣ ಮಾಡುವ ಪ್ರತಿಜ್ಞೆಗಳು ಪಂಚಚಾರಗಳ ಮಹತ್ವವನ್ನು ಅತ್ಯಂತ ಪರಿಣಾಮಕಾರಿಯಾಗಿ ಪ್ರತಿನಿಧಿಸುತ್ತವೆ.

ಶಿವರಾತ್ರಿಯನ್ನು ನಿತ್ಯ ಮಾಡುವ ಭಾಷೆ, ಶಿವಭಕ್ತರೆಲ್ಲರು ಶಿವನೆಂಬ ಭಾಷೆ, ಭಕ್ತರ ದೋಷವನ್ನು ತೋರಿಸದ ಭಾಷೆ, ಭಕ್ತರ ಕುಲವೆತ್ತಿ ನುಡಿಯದ ಭಾಷೆ, ಮೃಡನಾದರೂ ಒಮ್ಮೆ ಬೇಡರ ಭಾಷೆ, ಬೇಡಲು ಅರ್ಥವಿಲ್ಲನ್ನದ ಭಾಷೆ, ಇರುವೆಗೂ ವಂಚಿಸದೇ ಇರುವ ಭಾಷೆ, ಕೇಳಿದುದನ್ನು ಕೊಡುವ ಭಾಷೆ, ನುಡಿದುದು ನಡೆಯಲ್ಲಿ ಪಾಲಿಸುವ ಭಾಷೆ, ಮನದಲ್ಲಿದ್ದಂತೆಯೇ ನಡೆಯುವ ಭಾಷೆ, ನುಡಿದ ಬೊಂಕದ ಭಾಷೆ, ಚಲುವಡಗದ ಭಾಷೆ, ತಪ್ಪುಮೆಟ್ಟದ ಭಾಷೆ, ಭೃತ್ಯತ್ವವಡಗದ ಭಾಷೆ, ಕನಸಲ್ಲೂ ಶಿವನನ್ನು ಗೆಲಿಸಿದ ಭಾಷೆ, ಗೆಲುವು ಭಕ್ತರಿಗಿತ್ತು ನಮಿಸುವ ಭಾಷೆ, ಪರಸತಿಯೆಡೆ ದಟ್ಟಿ ಹರಿಸದ ಭಾಷೆ, ಪರಧನಗಳಿಗಾಸೆಗೈಯದ ಭಾಷೆ, ಪರನಿಂದನೆಯನ್ನೆಲ್ಲೂ ಮಾಡದ ಭಾಷೆ, ಪರಧರ್ಮ ಕರ್ಮಗಳಾಡದ ಭಾಷೆ, ಪರಸಮಯಗಳ ಪರಿಹರಿಪಭಾಷೆ, ಪರವಾದಿಗಳನಿಕ್ಕಿ ಬಂಜಿಪ ಭಾಷೆ, ಹರಿದೂಷಣೆಗೆ ಕಿವಿಯಾಗದ ಭಾಷೆ, ಹರಗಣಾನರ್ಪಿತ ಏಂಟದ ಭಾಷೆ, ಹಗರಣ ಪರತಂತ್ರನಾಗಿಹ ಭಾಷೆ, ಹರಭಕ್ತರೆಂದಂತೆ ತಾನೆಂಬ ಭಾಷೆ, ಜಂಗಮ ಪ್ರಾಣಲಿಂಗವೆಯೆಂಬ ಭಾಷೆ, ಮೂಢಮನುಜರನು ಬೇಡದ ಭಾಷೆ, ಭವಿಗೆ ಮೊಕ್ಕದ ಭಾಷೆ, ಭವಭಾದೆಗೊಳಗಾಗದ ಭಾಷೆ, ವಿಷಯೇಂದ್ರಿಯಗಳಿಗೆ ಬಾಗದ ಭಾಷೆ, ವಿಷಮ ಷಡ್ವರ್ಗವ ಮುರಿಯುವ ಭಾಷೆ, ವೇದೋಕ್ತ ಭಕ್ತಿಯ ಗಳಿಸುವ ಭಾಷೆ, ಆದಿಶಿವಾಚಾರವಲರಿಪ ಭಾಷೆ, ಶಿರವಟ್ಟಿ ಕಡಿದರೂ ಶರಣೆಂಬ ಭಾಷೆ, ಶಿರಕಟ್ಟಿ ತೊಡೆದರು ನಮಿಸದ ಭಾಷೆ, ಮುಟ್ಟಿದ ಎಡೆಯಿಂ ಹಮ್ಮೆಟ್ಟದ ಭಾಷೆ, ಮೇಲಿನವೆಲ್ಲವನ್ನು ತುದಿಗೊಳಿಸುವ ಭಾಷೆ

ಈ ಎಲ್ಲಾ ಭಾಷೆಗಳು ಬಸವಣ್ಣನವರ ತಾನು ಈಗ ಅನುಸರಿಸುತ್ತಿರುವ ಮತ್ತು ಮುಂದೆ ಅನುಸರಿಸುವ ಭಾಷೆಗಳು. ಇವುಗಳನ್ನು ಮೀರುವುದಿಲ್ಲ ಎಂದು ಹೇಳುತ್ತಾನೆ. ಕವಿಗಳು ಈ ಭಾಷೆಗಳು ಕೇವಲ ಬಸವಣ್ಣನ ಭಾಷೆಗಳು ಮಾತ್ರವಾಗಿರದೆ ಇಡೀ ವೀರಶೈವ ಧರ್ಮವನ್ನು ಅನುಸರಿಸಿರುವ ಎಲ್ಲಾ ಶಿವಭಕ್ತರ ಭಾಷೆಗಳೆಂಬಂತೆ ಇಲ್ಲಿ ಚಿತ್ರಿಸಿದ್ದಾರೆ. ಸಾಮಾನ್ಯವಾಗಿ ಪ್ರತಿಯೊಬ್ಬ ಶಿವಶರಣನು ಮೇಲಿನ ಭಾಷೆಗಳನ್ನು ಪಾಲಿಸುತ್ತಿದ್ದರೆಂಬುದು ಗಮನಾರ್ಹ.

ಧಾರ್ಮಿಕ ಸಂಗತಿಗಳಲ್ಲಿ ಮತ್ತೊಂದು ಪ್ರಮುಖ ಸಂಗತಿ ಎಂದರೆ 'ಪವಾಡ' ಬಸವಣ್ಣ ಮತ್ತು ಅವನ ಶರಣ ಸಮೂಹವು ಸಾಮಾಜಿಕ ಒಳತಿಗಾಗಿ ಅನೇಕ ಪವಾಡ, ಮಹಿಮೆಗಳನ್ನು ನಡೆಸಿದ್ದಾರೆ. ಇವು ಅಂದಿನ ಸಂದರ್ಭಕ್ಕೆ ಹೆಚ್ಚು ಪ್ರಸ್ತುತ ಎನ್ನಿಸುತ್ತದೆ. ಸಾಮಾನ್ಯನಿಗಾಗಲಿ ಅಥವಾ ಶಿವಭಕ್ತರಿಗಾಗಲಿ ಅಪಾಯವೊದಗಿದಾಗ ತಮ್ಮ ಅದ್ಭುತ ಶಕ್ತಿಯಿಂದ ಪವಾಡ ರೂಪದಲ್ಲಿ

ಆ ಸಮಸ್ಯೆಯನ್ನು ಬಗೆಹರಿಸುತ್ತಾರೆ. ಇಂತಹ ಅನೇಕ ಕಥೆಗಳು ಈ ಪುರಾಣಗಳಲ್ಲಿವೆ. ಬದನೆಕಾಯಿ ಲಿಂಗವಾಗಿದ್ದು, ಜೋಳವನ್ನು ಮುತ್ತುಗಳನ್ನಾಗಿ ಮಾಡಿದ್ದು, ಗಂಗಾಂಬಿಕೆಯ ಸೀರೆಯನ್ನು ಅಕ್ಷಯವಾಗುವಂತೆ ಮಾಡಿದ್ದು, ಗೊಲ್ಲತಿಯ ಮೊಸರಿನ ಮಡಕೆಯನ್ನು ಬೀಳದಂತೆ ಆಗಸದಲ್ಲಿ ನಿಲ್ಲಿಸಿದ್ದು, ಇನ್ನೂ ಮುಂತದವು. ಇವು ಧಾರ್ಮಿಕವಾಗಿ ಅಂದು ಸಾಕಷ್ಟು ಪ್ರಭಾವ ಬೀರಿದ್ದವು. ಕವಿಗಳು ಕಥಾನಾಯಕರನ್ನು ಅವರ ಧರ್ಮವನ್ನು ಹೆಚ್ಚು ವೈಭವೀಕರಿಸಲು ಇಂತಹ ಧಾರ್ಮಿಕ ಕಥೆಗಳನ್ನು ಹೆಚ್ಚು ಹೆಚ್ಚು ಪುರಾಣಗಳಲ್ಲಿ ಹೇಳಿದ್ದಾರೆ.

**೫.೩. ಆರ್ಥಿಕ ಸಂಗತಿಗಳು :**

ಯಾವುದೇ ಸಮಾಜ ಅಥವಾ ಸಮುದಾಯದ ಬೆಳವಣಿಗೆ ಮತ್ತು ಬದುಕು ಅಲ್ಲಿನ ಆರ್ಥಿಕ ಪರಿಸ್ಥಿತಿಯ ಮೇಲೆ ಅವಲಂಬಿಸಿರುತ್ತದೆ. ಈ 'ಬಸವಪುರಾಣ'ಗಳಲ್ಲಿ ಕಂಡುಬರುವಂತೆ ಆ ಕಾಲದ ಅಂದಿನ ಪರಿಸರದಲ್ಲಿ ಶ್ರೀಮಂತ, ಮಧ್ಯಮ, ಬಡವ, ನಿರ್ಗತಿಕ ಹೀಗೆ ಎಲ್ಲಾ ವರ್ಗದ ಜನ ಸಮುದಾಯಗಳು ವಾಸಿಸುತ್ತಿದ್ದವು. ಈ ಪುರಾಣಗಳಲ್ಲಿ ಚಿತ್ರಿಸಿರುವ ಶರಣರಲ್ಲಿ ಬಹುತೇಕ ಮಂದಿ ಬಡವರು, ದಲಿತರು, ಹೀನ ಕುಲಕ್ಕೆ ಸೇರಿದವರಾಗಿದ್ದು, ಅವರ ಪರಿಚಯದಲ್ಲಿ ವೃತ್ತಿಬದುಕಿನ ಜೊತೆಗೆ ಅವರ ಆರ್ಥಿಕ ಜೀವನ ಸ್ಥಿತಿಯನ್ನು ಕವಿಗಳು ಕಟ್ಟಿಕೊಟ್ಟಿದ್ದಾರೆ. ಶ್ರೀಮಂತರಾಗಿದ್ದವರು, ಬಡವರಾಗಿದ್ದಾರೆ(ದೀಪದ ಕಲಿಯಾರ) ಬಡವರಾಗಿದ್ದವರು ಶ್ರೀಮಂತರಾಗಿದ್ದಾರೆ(ಕಲಕೇತ ಬ್ರಹ್ಮಯ್ಯ) ಇಂತಹ ವಿಲೋಮ ಪರಿಸ್ಥಿತಿಗಳು ಅಂದೂ ಇದ್ದವೆಂಬುದಕ್ಕೆ ಇಲ್ಲಿನ ಶರಣರ ಆರ್ಥಿಕ ಬದುಕು ತೆರೆದು ತೋರಿಸುತ್ತದೆ.

**ಅ. ವ್ಯವಸಾಯ ಜೀವನ :**

ಹನ್ನೆರಡು, ಹದಿಮೂರನೆಯ ಶತಮಾನದಲ್ಲಿ ಸಾಮಾನ್ಯವಾಗಿ ಮೂರು ರೀತಿಯ ವ್ಯವಸಾಯಿಕ ವರ್ಗಗಳಿದ್ದವು ಎಂಬುದು 'ಬಸವಪುರಾಣ'ಗಳಿಂದ ತಿಳಿಯುತ್ತದೆ. ಒಂದು ಉನ್ನತ ವರ್ಗ ಅಂದರೆ ಶ್ರೀಮಂತ ವರ್ಗದವರು. ಇವರು ಸಾಮಾನ್ಯವಾಗಿ ಕೆರೆ, ಬಾವಿ ಹೊಂದಿದ್ದು, ಕಾಲುವೆಗಳ ಮೂಲಕ ನೀರನ್ನು ಹರಿಸುತ್ತಾ ಬೆಳೆಗಳನ್ನು ಬೆಳೆಯುತ್ತಿದ್ದರು. ಇದಕ್ಕೆ ನಿದರ್ಶನವಾಗಿ ಕೆಂಬಾವಿ ಭೋಗಯ್ಯನ ಕಥೆಯಲ್ಲಿ ವೇಷಧಾರಿ ಶಿವನಿಗೆ ಸತ್ತಕರುವಿನ ಮಾಂಸದಡುಗೆ ಮಾಡಿ ನೀಡಿದ್ದಕ್ಕಾಗಿ ವಿಪ್ರರೆಲ್ಲಾ ಸೇರಿ ಭೋಗಯ್ಯನನ್ನು ಪುರದಿಂದ ಹೊರಹಾಕುತ್ತಾರೆ. ಆಗ ಅಲ್ಲಿದ್ದ ಲಿಂಗಗಳು, ಪುರಭಾಗ್ಯವೆಲ್ಲವೂ ಭೋಗಯ್ಯನ ಹಿಂದೆಯೇ ಹೋದವು. ಕೆರೆ-ಬಾವಿ ಪದ್ಮಾಕರಗಳೆಲ್ಲವೂ (ಪಾ.ಸೋ.ಸ.ಆ.ಸಾ.೭೭೯) ಬತ್ತಿಹೋದವು. ಫಲಪುಷ್ಪವಾಟಿಕೆಗಳು ಕಮರಿದವು ಎಂದು ಸೋಮನಾಥ ಹೇಳುತ್ತಾನೆ. ಹಾಗಾಗಿ ಅಂದಿನ ಕಾಲದಲ್ಲಿ ಬೆಳೆಗಳನ್ನು ಬೆಳೆಯಲು ಕೆರೆಬಾವಿಗಳನ್ನು ಹೊಂದಿದ್ದರು ಎಂಬುದು ಸ್ಪಷ್ಟವಾಗುತ್ತದೆ. ಇದೇ ವಿಚಾರವು ಕನ್ನಡ 'ಬಸವಪುರಾಣ'ದಲ್ಲಿಯೂ ವ್ಯಕ್ತಗೊಂಡಿದೆ. (ಭೀ.೫೬-೪೭)

ಇನ್ನು ಎರಡನೇ ವರ್ಗದ ವ್ಯವಸಾಯಗಾರರೆಂದರೆ ಮಳೆಯಾಶ್ರಯದಲ್ಲಿ ಬೆಳೆಗಳನ್ನು ಬೆಳೆದು ಜೀವನ ನಡೆಸುತ್ತಿರುವ ವರ್ಗ. ಈ ವರ್ಗದ ವ್ಯವಸಾಯಗಾರರು ಮಳೆಯನ್ನೇ ನಂಬಿ ಬದುಕುವ ಮಧ್ಯಮ ವರ್ಗವಾಗಿದೆ. ಇವರು ಮಳೆಯಾಶ್ರಿತ ಬೆಳೆಗಳನ್ನು ಮಾತ್ರ ಬೆಳೆಯುತ್ತಿದ್ದರು. ಆಗಿನ ಕಾಲದಲ್ಲಿ ಮಳೆ ಮಧ್ಯಮ ವರ್ಗಕ್ಕೆ ಮಾತ್ರ ಪ್ರಮುಖವಾಗಿರದೆ ಎಲ್ಲಾ ವರ್ಗಕ್ಕೂ ಪ್ರಮುಖವಾಗಿತ್ತು. ಎಂಬ ಅಂಶವು ಶಿವನಾಗಮಯ್ಯನ ಕಥೆಯಲ್ಲಿ ತಿಳಿದುಬರುತ್ತದೆ. ಬಸವಣ್ಣ ಹೊಲಗೇರಿಯಲ್ಲಿ ಅವರೊಂದಿಗೆ ಉಂಡು ಅವರ ಕಾಲಿಗೆ ನಮಸ್ಕರಿಸುವುದನ್ನು ಕಂಡ ಅರಮನೆಯ ಕೆಲ ವಿಪ್ರರು ರಾಜನಿಗೆ ದೂರು ನೀಡುತ್ತಾರೆ. ಆಗ ಬಿಜ್ಜಳನು ಬಸವಣ್ಣನನ್ನು ಉದ್ದೇಶಿಸಿ

ನೀತಲಂಬುಟ್ಟೆನೇ ನಿಟಿಲಾಕ್ಷುಭಕ್ತಿ
ನೀತಿ ಹೀನುಂದ ಕುರ್ಯುನೇ ವರ್ಷ ಮಿಂಕಂ
ಬಂಡುನೇ ಯಿಂಕ ಮೂರುಂಡಿನ ಭೂಮಿ

(ಗೂ.ವೆಂ.ಸು.(ಸಂ),ಬ.ಪು.,ಸ.ಆ.,ಸಾಲು–೫೧–೫೩)

(ನಿನ್ನ ತಲೆಗೇರಿತೆ ಈಶ್ವರನ ಭಕ್ತಿ, ನೀತಿ ಹೀನನೆ ಇನ್ನು ಮುಂದೆ ಮಳೆಗಳಾಗುವುವೇ, ನೀವು ನಿಂತಿರುವ ಭೂಮಿಯಲ್ಲಿ ಫಲ ಬಿಡುವುವೇ?)

ಎಂದು ಕೇಳುವ ಮಾತಿನಲ್ಲಿ ಮಳೆಯು ಅಂದಿನ ಕಾಲದಲ್ಲಿಯೂ ಪ್ರಮುಖವಾಗಿತ್ತು ಎಂಬುದನ್ನು ಸೂಚಿಸುತ್ತದೆ. ಕನ್ನಡ 'ಬಸವಪುರಾಣ'ದಲ್ಲಿಯೂ(ಭೀ.೫೪–೧೩) ಈ ಅಂಶವನ್ನು ಭೀಮಕವಿಯು ಹೇಳುತ್ತಾನೆ.

ಮೂರನೆಯ ವರ್ಗದ ರೈತರೆಂದರೆ ಊಳಿಗದವರು, ರಾಜರು ಅಥವಾ ಶ್ರೀಮಂತರ ಕೈಕೆಳಗೆ ಅವರ ಜಮೀನುಗಳಲ್ಲಿ ದುಡಿಯುವವರನ್ನು ಊಳಿಗದವರು ಎಂದು ಕರೆಯುತ್ತೇವೆ. ಈ ವರ್ಗದ ರೈತರು ಆಗಿನ ಕಾಲದಲ್ಲಿದ್ದರು. ಇವರು ತಾವು ಮಾಡಿದ ಸಾಲಕ್ಕೆ ಪ್ರತಿಯಾಗಿ ಆ ಸಾಲ ತೀರುವವರೆಗೂ ಶ್ರೀಮಂತರ ಮನೆಗಳಲ್ಲಿ ಅವರ ಜಮೀನುಗಳಲ್ಲಿ ಜೀತದಾಳುಗಳಾಗಿ ದುಡಿಯಬೇಕಾಗಿತ್ತು. ಇದು ಊಳಿಗಮಾನ್ಯ ವ್ಯವಸ್ಥೆಯ ಕ್ರೂರರೂಪ. ತಾವು ನೀಡಿದ ಸಾಲಕ್ಕೆ ಪ್ರತಿಯಾಗಿ ಹಗಲು ರಾತ್ರಿಗಳೆನ್ನದೆ ಪಶುಗಳಂತೆ ದುಡಿಸಿಕೊಳ್ಳುವ ಉನ್ನತವರ್ಗ ಮತ್ತು ದುಡಿಯುವ ಸಾಮಾನ್ಯವರ್ಗವೂ ಇತ್ತು. ಇದಕ್ಕೆ ನಿದರ್ಶನವಾಗಿ ಸೋಮನಾಥನು ಸೊಡ್ಡಳ ಬಾಚಯ್ಯನ ಕಥೆಯಲ್ಲಿ ನಿರೂಪಿಸಿದ್ದಾನೆ. ಬಿಜ್ಜಳನಲ್ಲಿ ಜೀತಗಾರನಾಗಿದ್ದ ಬಾಚರಸನು ತನ್ನ ನೇಮದ ಪ್ರಕಾರ ಸೌರಾಷ್ಟ್ರದಲ್ಲಿ ಜಾಗರಣೆ ಮಾಡಲು ನಿರ್ಧರಿಸುತ್ತಾನೆ. ಇದಕ್ಕೆ ಒಪ್ಪಿಗೆ ಪಡೆಯಲು ರಾಜನಲ್ಲಿ ಬಂದು ಕೇಳಿದಾಗ ಬಿಜ್ಜಳನು ಹೀಗೆ ಹೇಳುತ್ತಾನೆ.

ಕಜ್ಜ ಮೆಂತೇನಿಯುಂ ಗಲದು ವೊರಾದು
ಕೊಟ್ಟರುವುನಂ ಬಳ್ಳು ಗೊಲವಂಗವಲಯು

ನಿಟ್ಟೇಲ ಚೆಲ್ಲು ನೀ ಕಿರುದೆಸ ಕೊಲವು
ಬಾಲೆಂತಲಂಜಿಯ ಪಡುಪಟ್ಲ ರಾಚ
ಯೂಳಿಗಂಬುನು ಭಕ್ತಿಯನುಗೂರ್ಚಿ ನಡವ
ಸೌರಾಷ್ಟ್ರಮುನ ಕೀವು ಸನುಮು ಗಾದೇನಿ
ಸೌರಾಷ್ಟ್ರನಾಥುಂಡು ಸನುದೇರ ನಿಮ್ಮು
ಶಿವರಾತ್ರಿ ಗಿವರಾತ್ರಿ ಸೇಯುಟ ಮಾನು
ತವಲಿ ಯೀಯುಳಿಗಂಬು ದಪ್ಪಿಂಪರಾದು

(ಗೂ.ವೆಂ.ಸು.(ಸಂ),ಬ.ಪು.,ಷ.ಆ.,ಸಾಲು–೨೫೪–೨೬೨)

(ಕೆಲಸ ತುಂಬಾ ಇದೆ. ಈಗ ಹೋಗಬೇಡ ಕಣದಲ್ಲಿ ಧಾನ್ಯಗಳನ್ನು ಅಳೆಯಬೇಕು. ರಾಜನ ಊಳಿಗವನ್ನು ಭಕ್ತಿಯಂತೆ ನೆರವೇರಿಸಬೇಕು. ನೀನು ಸೌರಾಷ್ಟ್ರಕ್ಕೆ ಹೋಗಬೇಡ. ಸೌರಾಷ್ಟ್ರನಾಥವನ್ನೇ ಇಲ್ಲಿಗೆ ಕರಿಸಿಕೋ. ನೀನು ಶಿವರಾತ್ರಿ ಗಿವರಾತ್ರಿ ಮಾಡುವುದನ್ನು ಬಿಡು, ತಪ್ಪಿಸುವಂತಿಲ್ಲ ಒಪ್ಪಿಕೊಂಡ ಊಳಿಗವನ್ನು)

ಇಲ್ಲಿ ಊಳಿಗನಾದ ಬಾಚರಸನಿಗೆ ತನ್ನ ಸ್ವಂತ ಆಸೆಯನ್ನು ನೆರವೇರಿಸಿಕೊಳ್ಳಲಾಗದ ಪರಿಸ್ಥಿತಿಯಿತ್ತು ಎಂಬ ಅಂಶವನ್ನು ಮೇಲಿನ ಸಂದರ್ಭ ಸೂಚಿಸುತ್ತದೆ. ಭೀಮಕವಿಯು ಈ ಸಂದರ್ಭವನ್ನು ಸೋಮನಾಥನು ಹೇಳಿದಂತೆಯೇ ತನ್ನ ಪುರಾಣದಲ್ಲಿ(೫೨.೧೨,೧೩) ಹೇಳಿದ್ದಾನೆ.

ಹೀಗೆ ಈ ಮೂರು ಪ್ರಕಾರದ ವ್ಯವಸಾಯಗಾರರು ಆ ಕಾಲದಲ್ಲಿ ಇದ್ದರು ಎಂಬುದನ್ನು ಬಸವಪುರಾಣಗಳು ಹೇಳುತ್ತವೆ.

‘ಬಸವಪುರಾಣ’ಗಳು ರಚನೆಗೊಂಡ ಆ ಸಂದರ್ಭದಲ್ಲಿ ಮೇಲೆ ತಿಳಿಸಿದ ವಿವಿಧ ಬೇಸಾಯ ವರ್ಗದವರು ಬೆಳೆಯುತ್ತಿದ್ದ ಬೆಳೆಗಳು ಯಾವುವು ಎಂಬುದನ್ನು ಪುರಾಣಗಳಲ್ಲಿ ಸಾಂದರ್ಭಿಕವಾಗಿ ಕವಿಗಳು ತಿಳಿಸಿದ್ದಾರೆ. ಪ್ರಮುಖವಾಗಿ ಜೀವನಾವರ್ತನೆಗಾಗಿ ಆಹಾರ ಬೆಳೆಗಳಾದ ದವಸ ಧಾನ್ಯಗಳನ್ನು ಬೆಳೆಯುತ್ತಿದ್ದರು. ಜೋಳ ಪ್ರಮುಖ ಆಹಾರ ಬೆಳೆಯಾಗಿತ್ತು ಎನಿಸುತ್ತದೆ. ಬಸವಪುರಾಣಗಳ ಬಹುತೇಕ ಕಡೆಗಳಲ್ಲಿ ಜೋಳದ ಪ್ರಸ್ತಾಪವಿದೆ. ಹಾಗೆಯೇ ಬಿದರಕ್ಕಿ ಕೂಡ ಆಗಿನ ಪ್ರಮುಖ ಆಹಾರದ ಬೆಳೆಯಾಗಿತ್ತು ಎಂಬುದು ಬಸವಪುರಾಣಗಳಿಂದ ತಿಳಿಯುತ್ತದೆ. ತರಕಾರಿಗಳನ್ನು ಬೆಳೆಯುತ್ತಿದ್ದರೆಂಬುದಕ್ಕೆ ಕೆಲವು ನಿದರ್ಶನಗಳು ಈ ಪುರಾಣಗಳಲ್ಲಿವೆ. ಉದಾಹರಣೆಗೆ ಬದನೆಕಾಯಿಗಳು, ಕಳ್ಳರು ಲಿಂಗಕ್ಕೆ ಬದಲಾಗಿ ಬದನೆಕಾಯಿಗಳನ್ನು ಕಟ್ಟಿಕೊಂಡು ಬಂದಾಗ ಬಸವಣ್ಣ ಬದನೆಕಾಯಿಗಳನ್ನು ಲಿಂಗಗಳಾಗಿ ಪರಿವರ್ತಿಸಿದ ಕಥೆಯಲ್ಲಿ ಈ ಅಂಶ ತಿಳಿಯುತ್ತದೆ. (ಪಾ.ಸೋ.೨–೪೬೪, ಭೀ.ಸಂ.೯) ಮೆಣಸನ್ನು ಬೆಳೆಯುತ್ತಿದ್ದರೆಂಬ ಅಂಶವು ಸುರಗಿ ಚೌಡಯ್ಯನ ಕಥೆಯಲ್ಲಿ ತಿಳಿಸುತ್ತದೆ.

ಭೀಮಕವಿಯು ಸಂಧಿ ೨೫ರಲ್ಲಿ ಲವಂಗ, ಏಲಕ್ಕಿ, ಖರ್ಜೂರ, ಬಿಲ್ವಾಶ್ವತ್ಥ ಜಂಬೂ, ದಾಳಿಂಬೆ, ದ್ರಾಕ್ಷಿ (ಪ.೩೫,೩೬) ಮುಂತಾದವುಗಳನ್ನು ಬೆಳೆಯುತ್ತಿದ್ದರೆಂದು ಹೇಳಿದ್ದಾನೆ. ಹಾಗೆಯೇ

ಹುಣಸೆ ತೋಪುಗಳು, ಮಾವಿನ ತೋಪುಗಳ(ಪಾ.ಸೋ.೪–೨೪೬,೩೩೫) ಮಾಹಿತಿಯಿದೆ. ಹೀಗೆ ಹಲವು ವಿಧದ ಬೆಳೆಗಳನ್ನು ಬೆಳೆಯುತ್ತಿದ್ದ ಆ ಕಾಲದಲ್ಲಿ ಪ್ರಕೃತಿ ವಿಕೋಪಗಳಿಂದ ಇನ್ನಿತರೆ ಕಾರಣಗಳಿಂದ ಬೆಳೆಗಳು ನಾಶವಾಗುತ್ತಿದ್ದವು ಎಂಬ ಮಾಹಿತಿಯನ್ನು ಈ ಪುರಾಣಗಳು ಹೇಳುತ್ತವೆ. ಪಾಲ್ಕುರಿಕೆ ಸೋಮನಾಥ ಉದ್ಧಟನ ಕಥೆಯಲ್ಲಿ "ಚೆನ್ನಾಗಿದ್ದ ಬೆಳೆಯನ್ನು ಉರಿಗಿತ್ತ ರೀತಿಯಾಯಿತು" (ಪಾ.ಸೋ.೭–೬೨೦) ಎಂದು ಹೇಳುವ ಮಾತಿನಲ್ಲಿ ಬೆಳೆಗಳು ಅಗ್ನಿ ಅವಘಡಗಳಿಂದ ನಾಶವಾಗುತ್ತಿದ್ದವು ಎಂಬುದನ್ನು ಅರಿಯಬಹುದು.

ಇಂದಿನಂತೆ ಆ ಕಾಲದಲ್ಲಿಯೂ ಬೀಜಗಳನ್ನು ನಾಟಿ ಮಾಡುತ್ತಿದ್ದರು ಎಂಬುದನ್ನು ಸೋಮನಾಥನು ದಂಗುಳಿ ಮಾರಯ್ಯನ ಕಥೆಯಲ್ಲಿ ತಿಳಿಸುತ್ತಾನೆ. ಶಿವನು ಒಂದು ದಿನ ಮಳೆಯಲ್ಲಿ ನೆನೆಯುತ್ತಾ ಅರ್ಧರಾತ್ರಿಯಲ್ಲಿ ದಂಗುಳಿ ಮಾರಯ್ಯನ ಮನೆಗೆ ಬರುತ್ತಾನೆ. ಮಳೆಯಲ್ಲಿ ನೆನೆದು ನಡುಗುತ್ತಿದ್ದ ಶಿವನನ್ನು ನೋಡಿ ತನ್ನ ಗುಡಿಸಲನ್ನು ಕಿತ್ತು ಬೆಂಕಿಹಚ್ಚಿ ಕಾಯಿಸಿಕೊಳ್ಳಲು ಹೇಳುತ್ತಾನೆ. ನಂತರ ಹಿಂದಿನ ದಿನ ಬಿತ್ತಿದ್ದ ಬೀಜವನ್ನು ಆರಿಸಿಕೊಂಡು ಬಂದು, ನೀರಿನಲ್ಲದ್ದಿ ತೊಳೆದು ಚೆನ್ನಾಗಿ ಹುರಿದು ತಿನ್ನಲು ಕೊಡುತ್ತಾನೆ.(ಪಾ.ಸೋ.೪–೯೫,೪೦)

**ಆ. ಪಶು ಸಂಗೋಪನೆ :**

ಬಿತ್ತನೆ ಕಾರ್ಯಕ್ಕೆ (ಪಾ.ಸೋ.೩–೧೦೭೯) ಮತ್ತು ಬಂಡಿಗಳನ್ನು ಹೊಡೆಯಲಿಕ್ಕೆ ಎತ್ತುಗಳನ್ನು ಬಳಸುತ್ತಿದ್ದರು. ಎತ್ತುಗಳನ್ನು ಕಟ್ಟಲು ಪ್ರತ್ಯೇಕವಾದ ಗೋದಲಿ ವ್ಯವಸ್ಥೆಯನ್ನು ಮಾಡುತ್ತಿದ್ದರೆಂಬುದು "ಹಾಗೇಕೆ ಎತ್ತೀಯಿತೆಂದರೆ ಗೊಂದಿಯಲ್ಲಿ ಕಟ್ಟೆನ್ನುವ ರೀತಿಯು ಸರಿಯೇ?"(ಪಾ.ಸೋ.೫–೧೬೭) ಎಂಬ ಮಾತಿನಿಂದ ತಿಳಿಯುತ್ತದೆ. ಎತ್ತುಗಳಿಗೆ ವಿವಿಧ ರೀತಿಯಲ್ಲಿ ಅಲಂಕಾರಗಳನ್ನು ಮಾಡುತ್ತಿದ್ದರು. ಗಂಟೆ, ಗೆಜ್ಜೆ, ಕೋಡಗ ಮುಂತಾದವುಗಳಿಂದ ಅಲಂಕರಿಸುತ್ತಿದ್ದರು ಎಂಬ ಅಂಶವನ್ನು ಮುಸಿಡಿ ಚೌಡಯ್ಯನ ಕಥೆಯಲ್ಲಿ ಇಬ್ಬರೂ ಕವಿಗಳು ಹೇಳಿದ್ದಾರೆ.

ಹಸುಗಳು ಆ ಕಾಲದ ಮುಖ್ಯವಾದ ಸಾಕುಪ್ರಾಣಿಗಳು. ಹಾಲು ಮತ್ತು ಹಾಲಿನ ಉತ್ಪನ್ನಗಳನ್ನು ಅಂದಿನ ಶರಣರು ಶಿವನಿಗೆ ಭಕ್ತಿಪೂರ್ವಕವಾಗಿ ಅರ್ಪಿಸಿ ನೈವೇದ್ಯ ಮಾಡುತ್ತಿದ್ದರು. ಹಾಗಾಗಿ ಹಸುಗಳನ್ನು ಹೆಚ್ಚು ಹೆಚ್ಚಾಗಿ ಸಾಕುತ್ತಿದ್ದರು. ಕಪ್ಪಡಿ ಸಂಗಮದಲ್ಲಿದ್ದ ಗೋವುಗಳೆಲ್ಲ ಕಾಮಧೇನುಗಳಾಗಿದ್ದವು ಮತ್ತು ಕರುಗಳೆಲ್ಲವೂ ನಂದಿಕರುಗಳಾಗಿದ್ದವು(ಪಾ.ಸೋ.೧–೧೧೪೬) ಎಂದು ಸೋಮನಾಥ ಹೇಳುತ್ತಾನೆ. ಶಂಕರದಾಸಿಮಯ್ಯನ ಕಥೆಯಲ್ಲಿ ಕಾಟಿಪಾಪನು ಪಶುಗಳನ್ನು ಕಾಯುತ್ತಿದ್ದನು ಎಂದು ಹೇಳಲಾಗಿದೆ. ಹಾಗೆಯೇ ಶಿವಭಕ್ತೆ ನಿಂಬವ್ವೆಯ ಮಗನು ಭಕ್ತರ ಮನೆಗಳ ಗೋವುಗಳನ್ನು ಕಾಯುತ್ತಿದ್ದನೆಂಬುದಾಗಿ ಈ ಪುರಾಣಗಳಲ್ಲಿ ತಿಳಿಸಲಾಗಿದೆ. ಕಿನ್ನರಿ ಬ್ರಹ್ಮಯ್ಯನ ಕಥೆಯಲ್ಲಿ ಕುರಿ ಸಾಕಣೆಯ ವಿವರವಿದೆ. ಮತ್ತು ಕಾಟಕೋಟನ ಕಥೆಯಲ್ಲಿ ಮೇಕೆಗಳನ್ನು ಸಾಕಿರುವ ವಿಷಯದ ಪ್ರಸ್ತಾಪವಿದೆ. ಹೀಗೆ ಎರಡೂ ಪುರಾಣಗಳಲ್ಲಿ ಸಾಕುಪ್ರಾಣಿಗಳ ಕುರಿತು ಮಾಹಿತಿ ಇದೆ. ಇದೆಲ್ಲವನ್ನು ಗಮನಿಸಿದರೆ ಈಗಿನಂತೆಯೇ ಆ ಕಾಲದ ವ್ಯವಸಾಯಿಕ ಬದುಕು ನಡೆಯುತ್ತಿತ್ತು ಎಂಬುದು ತಿಳಿಯುತ್ತದೆ.

## ಇ. ಉಗ್ರಾಣ :

ಆ ಕಾಲದ ವ್ಯವಸಾಯಗಾರರು ತಾವು ಬೆಳೆದ ಧಾನ್ಯ ಮತ್ತು ಪದಾರ್ಥಗಳನ್ನು ಉಗ್ರಾಣಗಳಲ್ಲಿ ಶೇಖರಿಸಿಡುತ್ತಿದ್ದರು. ಉಗ್ರಾಣಗಳನ್ನು ಕಣಜ ಎಂದು ಕರೆಯುತ್ತಿದ್ದರು. ಈ ಕಣಜಗಳನ್ನು ಹೇಗೆ ತಯಾರಿಸುತ್ತಿದ್ದರು ಎಂಬುದನ್ನು ಸೋಮನಾಥ ಕವಿಯು 'ದೀಪದ ಕಲಿಯಾರ'ನ ಕಥೆಯಲ್ಲಿ ಹೇಳುವುದು ಹೀಗೆ "ಕಲ್ಲುಗುಂಡುಗಳನ್ನು ಮರಳನ್ನು ತರಿಸಿ ಕೋಟೆಗಳಲ್ಲಿ ನಿರ್ದಿಷ್ಟ ಜಾಗಕ್ಕೆ ಹಾಕಿಸುತ್ತಾ ಕೋಟೆಯನ್ನು ಕ್ರಮದಿಂದ ವಿಸ್ತರಿಸಿ ನಡನಡುವೆ ಬಾವಿಗಳನ್ನು ಆಳಕ್ಕೆ ಅಗೆಸಿ ಧಾನ್ಯಗಳನ್ನು ಸಂಗ್ರಹಿಸಿ" (ಪಾ.ಸೋ.೩-೧೦೦೪) 'ಶಂಕರ ದಾಸಿಮಯ್ಯನ ಕಥೆ'ಯಲ್ಲಿ "ಕೂಳೆಂಬ ಮದ್ದಿಗೆ ಧಾನ್ಯವಿಷ್ಟರದೆ ನೋಡಲು ಕಣಜಗಳವು ಬರಿದಾಗೆ"(ಪಾ.ಸೋ.೪-೫೭೪) ಎಂದು ಸೋಮನಾಥನು ಹೇಳಿದ್ದಾನೆ. ಭೀಮಕವಿಯು "ಹಿರಿಯ ಕಣಜಗಳಲ್ಲಿಗೆ ಪರಕಿಸಲು ನೆರೆ ಹಾಳುಬಿದ್ದವು(ಭೀ.೨೨-೧೦) ಎಂದು ಹೇಳಿದ್ದಾನೆ. ಕಣಜಗಳಲ್ಲಿ ಶೇಖರಿಸಿಟ್ಟ ಧಾನ್ಯವೆಲ್ಲವು ಹಾಳಾಯಿತು ಎಂದು ಹೇಳುವಾಗ ಇಬ್ಬರೂ ಈ ಮೇಲಿನ ಮಾತನ್ನು ಹೇಳಿದ್ದಾರೆ. ಹಾಗೆಯೇ ಸೋಮನಾಥನು 'ಸೊಡ್ಡಳಬಾಚರಸನ ಕಥೆ'ಯಲ್ಲಿ "ದೊಡ್ಡಕಣಜ(೬-೨೮೩) ಎಂದು ಹೇಳಿದರೆ ಭೀಮಕವಿಯು(೫೨-೧೨) ಕಣಜಕ್ಕೆ ಹಾಕಬೇಕಾದ ಧಾನ್ಯವನ್ನು ತನ್ನಿರಿ ಎಂದು ಹೇಳುವ ಮಾತು ಬರುತ್ತದೆ. ಹೀಗೆ 'ಬಸವಪುರಾಣ'ಗಳಲ್ಲಿ ಅಂದು ಉಗ್ರಾಣಗಳನ್ನು ಬಳಸುತ್ತಿದ್ದರು ಎಂಬ ಅಶವನ್ನು ತಿಳಿಸುತ್ತಿವೆ.

## ಈ. ಅಳತೆ ಮತ್ತು ಪರಿಮಾಣಗಳು :

ಬಸವಪುರಾಣಗಳ ರಚನಾ ಕಾಲದಲ್ಲಿ ಅಳತೆಯ ವಿವಿಧ ಮಾನಗಳು ಇದ್ದವು. ಪ್ರಮುಖ ಅಳತೆಗಳು ಮುಂದಿನಂತಿವೆ:

**ಬಳ್ಳ :** ಇದು ಒಂದು ಮಾಪನದ ಪರಿಕರ. ಇದನ್ನು ಬಿದಿರು ಅಥವಾ ಚಾಪೆಯ ಕಡ್ಡಿಗಳಿಂದ ತಯಾರಿಸತ್ತಿದ್ದರು. ಮೇಲ್ಭಾಗದಲ್ಲಿ ಇದರ ಬಾಯಿಯಿರುತ್ತದೆ. ಇದರಿಂದ ಧಾನ್ಯಗಳನ್ನು ಅಳೆಯುತ್ತಿದ್ದರು. ಬಿಲ್ಲೇಶ ಮಲ್ಲಯ್ಯನ ಕಥೆಯಲ್ಲಿ ಸೋಮನಾಥ 'ಬಳ್ಳವನ್ನು ತನ್ನಿರಿ ಅಳೆಯಬೇಕು'(೨-೮೧೮) ಭೀಮಕವಿಯು 'ಹುಲ್ಲುಗುಡಿಸಿಲೊಳಾಗ ಮಡಗಿದ ಬಳ್ಳವಂ ತೆಗೆತನ್ನಿ ಅಳೆಯಲಿಕ್ಕಿಲ್ಲೆಮಗೆ' (೮-೯) ಎಂದು ಹೇಳುವ ಮೂಲಕ ಬಳ್ಳವು ಅಳತೆ ಮಾಡುವ ಪ್ರಮುಖ ಸಾಧನ ಎಂಬುದನ್ನು ಕವಿಗಳು ಹೇಳಿದ್ದಾರೆ.

**ಖಂಡುಗ :** ಇದೊಂದು ಅಳತೆಯ ಮಾಪನ. ಬಸವಣ್ಣ ಜೋಳವನ್ನು ಮುತ್ತುಗಳನ್ನಾಗಿ ಮಾಡಿದ ಪವಾಡ ಕಥೆಯಲ್ಲಿ ಜಂಗಮನೊಬ್ಬ ಹತ್ತು ಖಂಡುಗ ಮುತ್ತಿನ ಪುಡಿಯನ್ನು ಬೇಡುತ್ತಾನೆ. ಆಗ ಬಸವಣ್ಣ ಅಷ್ಟನ್ನೂ ಕೊಟ್ಟು ಕಳಿಸುತ್ತಾನೆ.

**ಮೊಳ :** ಮೊಳ ಎಂದರೆ ಮೊಣಕೈಯಿಂದ ಹಸ್ತದ ತುದಿಯವರೆಗಿನ ಅಳತೆ. 'ಇಡುಗುಡಿ ನಾಯನಾರ'ನೆಂಬ ಭಕ್ತನ ಕಥೆಯಲ್ಲಿ "ಹನ್ನೆರಡು ವರುಷ ನಿರಂತರವಾಗಿ ನೇಯ್ದು ಹನ್ನೆರಡು

ಮೊಳದ ಬಂಗಾರದ ಸೀರೆಯನು" ಎಂದು 'ಮೊಳ'ದ ವಿವರವನ್ನು ಸೋಮನಾಥ ಹೇಳುತ್ತಾನೆ.(ಪಾ.ಸೋ.೩-೧೫೩)

**ಹೇರು :** ಹೇರು ಎಂದರೆ ಒಬ್ಬ ಮನುಷ್ಯ ಅಥವಾ ಒಂದು ಪ್ರಾಣಿ ಹೊರುವಷ್ಟು ತೂಕ ಎಂದು ಸಾಮಾನ್ಯವಾಗಿ ಹೇಳುತ್ತಾರೆ. ಈ ಅಳತೆ ಮಾಪನವು ಕೂಡ ಆ ಕಾಲದಲ್ಲಿತ್ತು ಎಂಬುದನ್ನು ಸೋಮನಾಥ 'ಶಂಕರದಾಸಿಮಯ್ಯನ ಕಥೆ'ಯಲ್ಲಿ "ಈ ಹೊಳೆವ ಮಣ್ಣನಾದರೂ ಕೆಲ ಹೇರುಗಳನ್ನು ಕೊಂಡೊಯ್ಯಿಯೆನ"(ಪಾ.ಸೋ.೪-೭೫) ಎಂದು ಹೇಳುತ್ತಾನೆ. ಭೀಮಕವಿಯು "ಈ ಮಿಸುಪ ಹೊಮ್ಮಣ್ಣನಾದಡೆ ಕಾಮಿಪಡೆ ಕೆಲ ಹೇರುಗಳನುದ್ದಾಮಮತಿ ನೀಂ ಕೊಂಡು ಹೋಗೈ" (ಭೀ.೨೨-೨೯) ಎಂದು ಹೇಳುತ್ತಾನೆ.

**ಮಾನ :** ಇದು ಕೂಡ ಅಳತೆಯ ಮಾಪನವಾಗಿದೆ. 'ಶಂಕರದಾಸಿಮಯ್ಯ'ನ ಕಥೆಯಲ್ಲಿ ಸೋಮನಾಥ ಐದು ಮಾನಗಳಷ್ಟು ಜಂಗಮಕೋಟಿಗೆ(ಪಾ.ಸೋ.೪-೫೬) ನಿತ್ಯದಾಸೋಹ ನೀಡುವ ವಿಚಾರವಿದೆ. ಭೀಮಕವಿಯಲ್ಲೂ ಈ ಸಂದರ್ಭದಲ್ಲಿ(ಭೀ.೨೨-೪) 'ಮಾನ'ದ ಅಳತೆ ಕುರಿತು ಹೇಳುತ್ತಾನೆ.

**ಹೆಡಗೆ :** ಇದನ್ನು ಪಾಲ್ಕುರಿಕೆ ಸೋಮನಾಥ 'ಗೂಡೆ' ಎಂದು ಕರೆದಿದ್ದಾನೆ.(ಪಾ.ಸೋ.೪-೫೭೪) 'ಹೆಡಗೆ' ಅಥವಾ 'ಗೂಡೆ' ಎಂದರೆ ಪುಟ್ಟಿ ಎಂಬರ್ಥವಿದೆ. ಇದನ್ನು ಬಿದಿರು ಅಥವಾ ಈಚಲು ಗರಿಗಳಿಂದ ಹೆಣೆದಿರುತ್ತಾರೆ. ಭೀಮಕವಿಯು "ಒಂದು ಹೆಡಿಗೆಯ ಬತ್ತವಂ ಭರದಿಂದ ಕಳುಹಲು ನೋಡಿ"(ಭೀ.೨೨-೭) ಎಂದು ಹೇಳುತ್ತಾನೆ.

**ಕೊಳಗ :** ಕೊಳಗ ಎಂದರೆ ಇದು ಒಂದು ರೀತಿಯ ಲೋಹದ ಪಾತ್ರೆ. ಒಂದು ಕೊಳಗ ಎಂದರೆ ನಾಲ್ಕು ಬಳ್ಳಗಳ ಒಂದು ಪರಿಮಾಣ. ಕೊಳಗದ ವಿಚಾರವನ್ನು ಸೋಮನಾಥ ಹತ್ತು ಕೊಳಗ ಎಂದು(ಪಾ.ಸೋ.೪-೭೧೬) ಹೇಳುತ್ತಾನೆ. ಭೀಮಕವಿಯು 'ಹತ್ತು ಕೊಳಗವನು'(ಭೀ.೨೨-೩೭) ಎಂದು ಕೊಳಗ ಪ್ರಮಾಣ ಕುರಿತು ಹೇಳುತ್ತಾನೆ.

**ತಕ್ಕಡಿ :** ಇದನ್ನು ಎರಡು ವಸ್ತುಗಳ ಅಳತೆಯನ್ನು ಸಮನಾಂತರವಾಗಿ ತೂಗಲು ಬಳಸುತ್ತಾರೆ. ಈ ತಕ್ಕಡಿಯನ್ನು ಹಿಂದಿನಿಂದಲೂ ಬಳಸುತ್ತಿದ್ದರೆಂಬುದಕ್ಕೆ 'ಬಸವಪುರಾಣ'ಗಳಲ್ಲಿ ನಿದರ್ಶನವಿದೆ. ಸೋಮನಾಥನಲ್ಲಿ 'ಇರುವದಂಡಾರಿಯ ಕಥೆ'ಯಲ್ಲಿ ಭಕ್ತನೊಬ್ಬನು ಇಟ್ಟುಹೋದ ಕಿರುಗತ್ತಿಯನ್ನು ಮರಳಿ ಪಡೆಯಲು ಬರುತ್ತಾನೆ. ಆಗ ಮನೆಯಲ್ಲಿಟ್ಟಿದ ಕಿರುಗತ್ತಿ ಕಾಣದಾಗಿ ಅದಕ್ಕೆ ಪ್ರತಿಯಾಗಿ ಬೇರೆ ವಸ್ತುಗಳನ್ನು ಕೊಡುವೆನೆಂದು ಇರುವ ದಂಡಾರಿ ಹೇಳುತ್ತಾ, ತುಲಾಯಷ್ಟಿಯಲ್ಲಿ ಒಂದು ಕಡೆಯಲ್ಲಿ ಕಿರುಗತ್ತಿ ಮತ್ತೊಂದು ಕಡೆಯಲ್ಲಿ ವಿವಿಧ ವಸ್ತುಗಳನ್ನು ಕಟ್ಟಿಟ್ಟು ತೂಗಿ ಕೊಡುವೆ ಎಂದು ಹೇಳುತ್ತಾನೆ. (ಪಾ.ಸೋ.,ಚ.ಆ.-೧೯೨೨-೨೬) ಭೀಮಕವಿಯಲ್ಲಿಯೂ ಈ ವಿಚಾರವು(೨೬೪೩-೪೪) ಬರುತ್ತದೆ.

**ಸೊಲಿಗೆ :** ಇದು ದ್ರವಪದಾರ್ಥಗಳನ್ನು ಅಳೆಯುವ ಸಾಧನ. ಇದನ್ನು ಪಾಲ್ಕುರಿಕೆ ಸೋಮನಾಥನು ಸುರಗಿ ಚೌಡಯ್ಯನ ಕಥೆಯಲ್ಲಿ ಹೇಳುತ್ತಾನೆ. "ಮುನ್ನೂರ ಅರವತ್ತು ಸೊಲಿಗೆ (ಪಾ.ಸೋ.೫-೧೨೨೨) ಎಂದು ಹೇಳುತ್ತಾನೆ. ಭೀಮಕವಿಯು "ಮುನ್ನೂರದರವತ್ತು ಸೊಲಗೆ ಪತ್ರಾದಿ ಶಾಕಂಗಳ"(ಭೀ.೩೨-೧೩) ಎಂದು ಹೇಳುತ್ತಾನೆ.

**ಕೊಪ್ಪರಿಗೆಗಳು :** ಕೊಪ್ಪರಿಗೆ ಎಂದರೆ ಅಗಲವಾದ ಬಾಯಿಯನ್ನು ಹೊಂದಿರುವ ಪಾತ್ರೆ, ಈ ಪಾತ್ರೆಯ ಮೂಲಕ ಅಂದಿನ ಕಾಲದಲ್ಲಿ ಅಳತೆಯನ್ನು ಮಾಡುತ್ತಿದ್ದರು. ಸೋಮನಾಥನು ಬಸವಣ್ಣನು ವಿಷವನ್ನು ಕುಡಿಯುವ ಸಂದರ್ಭದಲ್ಲಿ "ಹೊನ್ನ ಕೊಪ್ಪರಿಗೆಗಳೆಲೆಸೆಯೆ" ಕೊಪ್ಪರಿಗೆಗಳ ತರಿಸಿ(ಪಾ.ಸೋ.೭-೧೨೧೫) ಎಂದು ಹೇಳುತ್ತಾನೆ. ಭೀಮಕವಿಯು ೫೭ನೇ ಸಂಧಿ ೬೮ನೇ ಪದ್ಯದಲ್ಲಿ ಈ ವಿಷಯವನ್ನು ಹೇಳುತ್ತಾನೆ.

**ಉ. ಕೂಲಿ :**

ಪ್ರಾಚೀನ ಕಾಲದಿಂದಲೂ ಸೇವೆಗೆ ಪ್ರತಿಯಾಗಿ ಸಂಬಳವನ್ನು ನೀಡುವ ಕ್ರಮವಿದೆ. ಅದರಂತೆ ಹನ್ನೆರಡು, ಹದಿಮೂರನೆಯ ಶತಮಾನದಲ್ಲೂ ಶ್ರಮಿಕ ವರ್ಗ, ದುಡಿಯುವ ವರ್ಗಕ್ಕೆ ಕೂಲಿ ರೂಪದಲ್ಲಿ ಹಣ ಅಥವಾ ದವಸ ಧಾನ್ಯಗಳನ್ನು ನೀಡುತ್ತಿದ್ದರೆಂಬುದು 'ಬಸವಪುರಾಣ'ಗಳಿಂದ ತಿಳಿಯುತ್ತದೆ. ಬಿಜ್ಜಳನ ಭಂಡಾರಿಯಾದ ಬಸವಣ್ಣ ಅರಮನೆಯ ಕೆಲಸಗಾರರಿಗೆ ಸಂಬಳ ನೀಡುವ ವಿಚಾರವನ್ನು ಸೋಮನಾಥ ಹೀಗೆ ಹೇಳುತ್ತಾನೆ. "ಮಂತ್ರಿಗಳೊಡನೆ ತಾ ರಾಜಾಜ್ಞೆಯಂತೆ ತಂತ್ರಗಳಿಗೆ ಸಂಬಳವನೀಯುವೆಡೆಗೆ" (ಭೀ.೩-೫,೬) ಎಂದು ಹೇಳಿದರೆ, ಭೀಮಕವಿಯು "ತಂಡತಂಡದ ಪೆರ್ಬಲಕೆ ಮುಂಕೊಂಡು ಜೀವಿತಮಂ ಕೊಡುವೆಡೆಗೆ" ಎಂದು ಹೇಳುವುದರ ಮೂಲಕ ಕೂಲಿಯನ್ನು ನೀಡುತ್ತಿದ್ದರೆಂಬುದು ತಿಳಿಯುತ್ತದೆ.

ಅಂದಿನ ಕಾಲದಲ್ಲಿ ಕೂಲಿಗಾಗಿ ಸಾಮಾನ್ಯರು ಪರಿತಪಿಸುವ ಚಿತ್ರಣವನ್ನು ಪಾಲ್ಕುರಿಕೆ ಸೋಮನಾಥ 'ಅರಿವಾಳು ನಯನಾರನ ಕಥೆ'ಯಲ್ಲಿ ತಿಳಿಸುತ್ತಾನೆ. ಇವನು ತನ್ನ ಲಿಂಗಕ್ಕೆ ಮೂರೊತ್ತು ರಾಜಾನ್ನದಕ್ಕಿಯನ್ನು ನೀಡುವ ವ್ರತವನ್ನು ಪಾಲಿಸುತ್ತಿರುತ್ತಾನೆ. ಪ್ರತಿನಿತ್ಯ ಈ ವ್ರತದಿಂದ ತನ್ನಲ್ಲಿದ್ದ ಎಲ್ಲಾ ಪದಾರ್ಥಗಳು ಖಾಲಿಯಾಗುತ್ತವೆ. ಆಗ ಅರಿವಾಳುನಯನಾರನು ಕುಡಗೋಲೊಂದನ್ನು ತೆಗೆದುಕೊಂಡು ರಾಜನ್ನದಕ್ಕಿಗಾಗಿ ಪರಿತಪಿಸುತ್ತಾ ಕೈಗೊಂಡ ನೇಮವು ತಪ್ಪಬಾರದೆಂದು ಇರುವಾಗ ಮುಂದೊಂದು ಕಾಲಕ್ಕೆ ಎಲ್ಲಿಯೂ ಕೂಲಿಯು ಸಿಕ್ಕದಿರುವಾಗ ಏಳು ದಿನಗಳವರೆಗೆ ಉಪವಾಸವಿರುತ್ತಾನೆ.(ಪಾ.ಸೋ.ಚ.ಆ.,ಸಾಲು-೧೭೯೭-೧೮೦೧)

ಇದೇ ವಿಚಾರವನ್ನು ಭೀಮಕವಿಯು ಸಂಧಿ ೨೬, ಪದ್ಯ ೧೬ರಲ್ಲಿ ಹೇಳಿದ್ದಾನೆ. ಇಂದಿನಂತೆ ಅಂದೂ ಸಹ ಜನರು ಕೂಲಿ ಮಾಡಿ ಜೀವಿಸುತ್ತಿದ್ದರೆಂಬ ಸಂಗತಿ ಈ ಸನ್ನಿವೇಶದಿಂದ ತಿಳಿಯುತ್ತದೆ.

**೮೦. ಕಪ್ಪಕಾಣಿಕೆ :**

ಅಂದು ರಾಜ್ಯದ ಆರ್ಥಿಕ ಪರಿಸ್ಥಿತಿಯಲ್ಲಿ ಕಪ್ಪಕಾಣಿಕೆಗಳು ಪ್ರಮುಖ ಪಾತ್ರವಹಿಸುತ್ತವೆ. ಸೋತ ರಾಜ್ಯಗಳ ಅರಸರು ಒಪ್ಪಂದದಂತೆ ಇಂತಿಷ್ಟು ಕಪ್ಪವನ್ನು ಗೆದ್ದ ರಾಜ್ಯದ ರಾಜರಿಗೆ ನೀಡುತ್ತಿದ್ದರು. ಈ ವಿಚಾರವು 'ಬಸವಪುರಾಣ'ಗಳಲ್ಲಿ ವ್ಯಕ್ತಗೊಂಡಿದೆ. 'ಏಣಾದಿನಾಥ' ಎಂಬ ರಾಜನ ಕಥೆಯಲ್ಲಿ ಸೋಮನಾಥನು ಹೀಗೆ ಹೇಳುತ್ತಾನೆ. "ಮಲೆತ ರಾಜರನ್ನು ಗೆದ್ದು ಸೋತವರ ಬಳಿ ಭರದಿಂದ ಬಂದು ಕಪ್ಪಗಳನ್ನು ಕೊಳುತ"(ಪಾ.ಸೋ.೪-೧೮೫೫) ಎಂದು ಹೇಳಿದರೆ ಭೀಮಕವಿಯು "ಸೋತನೃಪರೊಳು ಕಪ್ಪಮಂ ವಿಖ್ಯಾತಿಮಿಗೆ ಕೊಂಡಹಿತ"(ಭೀ.೨೬-೨೯) ಎಂದು ಹೇಳುತ್ತಾನೆ. ಅದೇ ರೀತಿಯಾಗಿ ಗಣಪಾಲನ ಕಥೆಯಲ್ಲಿ ಕಪ್ಪಕಾಣಿಕೆಯ ವಿವರವಿದೆ.

**೮೧. ವೃತ್ತಿಗಳು :**

'ಬಸವಪುರಾಣ'ಗಳಲ್ಲಿ ವಿವರಿಸಲ್ಪಟ್ಟ ಎಲ್ಲಾ ಶರಣರು ಕಾಯಕ ಜೀವಿಗಳು. 'ಕಾಯಕವೇ ಕೈಲಾಸ' ಎಂಬ ತತ್ವಕ್ಕೆ ಬದ್ಧರಾಗಿ ನಿತ್ಯವೂ ತಮ್ಮ ಕುಲವೃತ್ತಿಗಳನ್ನು ನಡೆಸಿಕೊಂಡು ಜೀವನ ಮಾಡುತ್ತಿದ್ದರು. ಇಲ್ಲಿನ ಯಾವ ಭಕ್ತನು ಕೂತು ಉಣ್ಣುತ್ತಿರಲಿಲ್ಲ. ತನ್ನ ಜೀವನ ನಿರ್ವಹಣೆಯ ಜೊತೆಗೆ ತನ್ನ ಸುತ್ತಲ ಜನಸಮುದಾಯಕ್ಕೆ ತಮ್ಮಿಂದಾದ ಸಹಾಯವನ್ನು ನೀಡುತ್ತಾ ಸಂತೃಪ್ತ ಜೀವನವನ್ನು ನಡೆಸುತ್ತಿದ್ದರು. ಈ ಪುರಾಣಗಳ ಕಥಾನಾಯಕ ಬಸವಣ್ಣನ ಪ್ರಧಾನ ವೃತ್ತಿ "ಪ್ರಸರಿಲಾವನು ಜಂಗಮಭಕ್ತಿ ವಸುಧೆಯಲದು ಬಸವನ ವೃತ್ತಿ ತಾನೆ?"(ಪಾ.ಸೋ.೨-೧೨೬೩) ಎಂದು ಪಾಲ್ಕುರಿಕೆ ಸೋಮನಾಥ ಹೇಳುತ್ತಾನೆ. ಅಂದರೆ ಜಂಗಮ ಭಕ್ತಿಯೇ ಬಸವಣ್ಣನ ಕಾಯಕ. ನಿತ್ಯವೂ ಸಾವಿರದ ಏಳುನೂರು ಜಂಗಮರಿಗೆ ದಾಸೋಹವನ್ನು ನೀಡುತ್ತಿದ್ದನು. ಬಸವಣ್ಣ ತನ್ನ ಜೀವನ ನಿರ್ವಹಣೆಗೆ ಬಿಜ್ಜಳನ ರಾಜ್ಯದಲ್ಲಿ ಭಂಡಾರಿಯಾಗಿ, ಮಂತ್ರಿಯಾಗಿ ಅವನ ಸಕಲ ರಾಜ್ಯ ಪರಿಪೋಷಣೆಯನ್ನು ವಹಿಸಿಕೊಂಡು ಕೆಲಸ ಮಾಡುತ್ತಿರುತ್ತಾನೆ. ಹಾಗೆಯೇ ಬಸವಣ್ಣ ತನ್ನೊಂದಿಗಿದ್ದ ಶರಣ ಸಮೂಹದ ಕಾಯಕಗಳನ್ನು ತಿಳಿಸುತ್ತಾ ಸೋಮನಾಥ ಹೇಳುವುದು ಹೀಗೆ, ಕುಂಬಾರ ವೃತ್ತಿಯವನು ಗುಂಡಯ್ಯ, ಹೂವಾಡಿಗ ಪುಷ್ಪದಂತ, ಇಂಡೆಗಟ್ಟುವ ರೇಕವ್ವೆ, ಬಾಣಸಿಗಳು ಚಂಗಳವ್ವೆ, ತಳಿಗೆ ಇಡುವವನು ಕರಿಕಾಲ ಚೋಳ, ರಮಣೀಯವಾದ ಓಗರಗಳನ್ನು ಬಡಿಸುವನು ಚೆನ್ನಯ್ಯ, ಬೊಂಬೆಯಾಡಿಸುವನು ಮಲಹರ, ಪಾಠಕನು ಶ್ರೀಪತಿ ಪಂಡಿತ, ಆದಿವೈಣಿಕ ಮಾದಿರಾಜಯ್ಯ ಕರಣಿಕ, ಕರ್ಮಸಂಕರನು ಕೇಶಿರಾಜ, ದಂಡನಾಯಕನು ಜಗದೇವ, ಅಂಕಕಾರನು ಏಣಾದಿನಾಥ, ಸುಂಕದ ಬಂಕಯ್ಯ, ಸುರಗಿ ಹಿಡಿಯುವವನು ಚೌಡಯ್ಯ, ದಾದಿ ಬೆಜ್ಜಮಹಾದೇವಿ, ತಳವಾರ ವೃತ್ತಿಯವನು ಶಿವರಾತ್ರಿ ಸಂಗಯ್ಯ, ಮಡಿವಾಳ ಮಾಚಿದೇವಯ್ಯ, ಬೊಮ್ಮಯ್ಯ, ಕಣ್ಣಪ್ಪರು ಬೇಟೆಗಾರರು. ಕಮ್ಮಾರನು ಇಳೆಹಾಳ ಬೊಮ್ಮಯ್ಯ(ಪಾ.ಸೋ.೨-೯೩೧-೧೦೦೦) ಹಾಗೆಯೇ ಭೀಮಕವಿಯು ಕೂಡ ಮೇಲಿನ ಎಲ್ಲಾ ಶರಣರ ಕಾಯಕವನ್ನು ತನ್ನ ಪುರಾಣದಲ್ಲಿ (ಭೀ.ಸಂ.೮.ಪ.೩೩-೪೮) ವಿವರಿಸಿದ್ದಾನೆ.

ಆ ಕಾಲದಲ್ಲಿ ವೇಶ್ಯೆಯರಂತೆಯೇ ಮಿಂಡಜಂಗಮ ವೃತ್ತಿಯವರು ಇದ್ದರೆಂಬುದನ್ನು ಪಾಲ್ಕುರಿಕೆ ಸೋಮನಾಥ ಹೇಳುತ್ತಾನೆ. "ವಿವಿಧ ವೇಶ್ಯಾಗೃಹಗಳಲ್ಲಿ ಭೋಗಿಸುವ ಮಿಂಡಜಂಗಮರು ಹನ್ನೆರಡು ಸಾವಿರವೆ"(ಪಾ.ಸೋ.೨-೩೭೯) ಭೀಮಕವಿಯು ಮಿಂಡಜಂಗಮರು ವೇಶ್ಯೆಯರ ಮನೆಗಳಲ್ಲಿ ಭೋಗಿಸುತ್ತಿದ್ದರು ಎಂಬುದನ್ನು(ಭೀ.೬.೩೩) ಹೇಳಿದ್ದಾನೆ. ಹಾಗೆಯೇ ಮೊಸರು ಮಾರುತ್ತಿರುವ ಕಾಟಕಿ ಎಂಬ ಗೊಲ್ಲತಿಯನ್ನು ಈ ಪುರಾಣಗಳಲ್ಲಿ ಹೇಳಲಾಗಿದೆ. ಹಾಗಾಗಿ ಪಶು ಸಂಗೋಪನೆಯನ್ನು ವೃತ್ತಿಯಾಗಿಸಿಕೊಂಡು ಹಾಲಿನ ಉತ್ಪನ್ನಗಳನ್ನು ಮಾರುತ್ತಿದ್ದರು ಎಂಬುದು ಈ ಗೊಲ್ಲತಿಯ ಕಥೆಯಿಂದ ತಿಳಿಯುತ್ತದೆ. ಭಿಕ್ಷುಕ ವೃತ್ತಿಯನ್ನು ಅರಿಯಮ ಎಂಬ ಶಿವಭಕ್ತ ಮಾಡುತ್ತಿದ್ದನು. ಹೀಗೆ ಒಂದು ಸಾಮಾಜಿಕ ಜೀವನದಲ್ಲಿ ಮನುಷ್ಯ ಜೀವಿಯ ವ್ಯಾಪ್ತಿಯಲ್ಲಿ ಬರುವ ಎಲ್ಲಾ ವಿಧದ ವೃತ್ತಿಗಳನ್ನು ಆ ಕಾಲದಲ್ಲಿ ಮಾಡುತ್ತಿದ್ದರು ಎಂಬ ಅಂಶಗಳನ್ನು ಕನ್ನಡ ಹಾಗೂ ತೆಲುಗು 'ಬಸವಪುರಾಣ'ಗಳಲ್ಲಿ ಸ್ಪಷ್ಟವಾಗಿ ತಿಳಿಸಿಕೊಟ್ಟಿದ್ದಾರೆ.

**೩.೪. ರಾಜಕೀಯ ಸಂಗತಿಗಳು :**

ಈ ಕಾಲದ ರಾಜಕೀಯ ಪರಿಸ್ಥಿತಿಗಳನ್ನು ತಿಳಿಯುವ ಮೊದಲು 'ಬಸವಪುರಾಣ'ಗಳಲ್ಲಿ ನಿರೂಪಿಸಿರುವ ಕಥೆಯ ಹಿನ್ನೆಲೆಯಲ್ಲಿ ಇದರ ಭೌಗೋಳಿಕ ವ್ಯಾಪ್ತಿಯನ್ನು ತಿಳಿಯಬೇಕು. ಈ ಪುರಾಣಗಳಲ್ಲಿ ಚಿತ್ರಿಸಿರುವ ಶರಣರಲ್ಲಿ ತಮಿಳುನಾಡಿನ ಪುರಾತನರು, ಕರ್ನಾಟಕ, ಆಂಧ್ರಪ್ರದೇಶ ಮತ್ತು ಮಹಾರಾಷ್ಟ್ರ ರಾಜ್ಯಗಳ ಹಲವು ಪ್ರದೇಶಗಳಲ್ಲಿ ವಾಸಮಾಡುವವರಾಗಿದ್ದರು. ಆದ್ದರಿಂದ ಇಂದಿನಂತೆ ಅಂದು ಭೌಗೋಳಿಕ ಎಲ್ಲೆಗಳು ಇರಲಿಲ್ಲ. ಹಾಗಾಗಿ ಈ ಪುರಾಣಗಳಲ್ಲಿ ಪ್ರಸ್ತಾಪಿಸಲ್ಪಟ್ಟ ರಾಜರು ಸಾಮಾನ್ಯವಾಗಿ ಈ ಮೇಲಿನ ನೆರೆಯ ರಾಜ್ಯಗಳ ಭೌಗೋಳಿಕ ಪರಿಸರದಲ್ಲಿ ಆಳ್ವಿಕೆ ಮಾಡುತ್ತಿದ್ದವರಾಗಿದ್ದಾರೆ.

**ಅ. ರಾಜರು :** ಈ ಪುರಾಣಗಳಲ್ಲಿ ರಾಜರ ಬಗೆಗೆ ಪ್ರಮುಖವಾಗಿ ಪ್ರಸ್ತಾಪಿಸಲ್ಪಟ್ಟಿವೆ. ಪ್ರಮುಖ ರಾಜನೆಂದರೆ ಕಲಚೂರಿಯ ಬಿಜ್ಜಳ. ಇವನು ಒಂದು ರೀತಿಯ ಈ ಪುರಾಣಗಳಲ್ಲಿ ಪ್ರತಿನಾಯಕನಂತೆ ಚಿತ್ರಿಸಲ್ಪಟ್ಟಿದ್ದಾನೆ. ಹಾಗೆಯೇ ಪುರಾಣದಲ್ಲಿ ಕಂಡುಬರುವ ಇತರೆ ಕೆಲವು ರಾಜರೆಂದರೆ

**ಕರಯೂರ ಚೋಳ :** ಇವನು ದ್ರಾವಿಡ ಭೂಮಿಯಲ್ಲಿ ರಾಜ್ಯವನ್ನಾಳುತ್ತಿದ್ದ ಪ್ರಮುಖ ರಾಜನಾಗಿದ್ದನು(ಪಾ.ಸೋ.೪-೨೧೭) ಭೀಮಕವಿಯಲ್ಲಿ(ಭೀ.೨೧.೦೧) ಇವನ ಪ್ರಸ್ತಾಪವಿದೆ.

**ನರಸಿಂಗ ನಯನಾರ :** ಇವನೊಬ್ಬ ರಾಜ. ಧರೆಯಲ್ಲಿ ಅತ್ಯಂತ ಭಕ್ತಿವಂತನಾಗಿ ಪರಮೇಶ್ವರನನ್ನು ಭಜಿಸುತ್ತಿರುತ್ತಾನೆ(ಪಾ.ಸೋ. ೪-೧೦೬೧). ಭೀಮಕವಿಯಲ್ಲೂ ಕೂಡ ಇವನ ವಿಚಾರ(ಭೀ.೨೩.೭೭) ಪ್ರಸ್ತಾಪಿಸಲ್ಪಟ್ಟಿದೆ.

**ಏಣಾದಿನಾಥ :** ಇವನು ಏಲಾಪುರದ ರಾಜ. ಅತ್ಯಂತ ಪರಾಕ್ರಮಿ ರಾಜನಾಗಿರಬಹುದು. ಏಕೆಂದರೆ ಇವನು ತನ್ನೆದುರು ಮಲೆತವರನ್ನು ಯುದ್ಧಗಳಲ್ಲಿ ಸೋಲಿಸಿ ಅವರಿಂದ ಕಪ್ಪ

ಕಾಣಿಕೆಗಳನ್ನು ಪಡೆಯುತ್ತಿದ್ದನು ಎಂದು ಪಾಲ್ಕುರಿಕೆ ಸೋಮನಾಥ(ಪಾ.ಸೋ.೪–೧೮೫೧) ಹಾಗೂ ಭೀಮಕವಿ ಇಬ್ಬರೂ(ಭೀ.೨೬–೨೯) ಹೇಳಿದ್ದಾರೆ.

**ಚೇದಿವಲ್ಲಭ** : ಇವನು ಅತ್ಯಂತ ನಿಷ್ಠ ಶಿವಭಕ್ತನಾಗಿದ್ದನು. ವಿಭೂತಿ ರುದ್ರಾಕ್ಷಿಗಳನ್ನು ಧರಿಸಿದವರನ್ನೆಲ್ಲರನ್ನು ಶಿವನೆಂಬ ಭಕ್ತಿಯುಕ್ತಿಯಲ್ಲಿ ಕಾಣುತ್ತಿರುತ್ತಾನೆ. ಇದನ್ನೇ ನೆಪವಾಗಿಸಿಕೊಂಡ ಕೆಲ 'ಪರರಾಷ್ಟ್ರ ಪತಿಗಳು' ಶಿವಭಕ್ತರಂತೆ ವೇಷಧಾರಿಗಳಾಗಿ ಇವನಲ್ಲಿಗೆ ಬರುತ್ತಾರೆ. ಇವರು ಕಪಟಲಾಂಛನ ಧಾರಿಗಳು ಎಂದು ಅರಿತ ಚೇದಿರಾಜ ಅವರನ್ನು 'ದಾರುಣಾಂಚಿತನಿಸಾತ ಕ್ರೂರಶಸ್ತ್ರ ಧಾರೆಗಳಲಿ ಜರ್ಜರಿತನಾಗೆ" ಮಾಡುತ್ತಾನೆ. ಇದರಿಂದ ಇವನೊಬ್ಬ ಅತ್ಯಂತ ಪರಾಕ್ರಮಿ ರಾಜ, ಜೊತೆಗೆ ಶಿವನ ಆರಾಧಕನು ಎಂದು ತಿಳಿಯುತ್ತದೆ. ಈ ಎಲ್ಲಾ ಸಂಗತಿಗಳನ್ನು ಸೋಮನಾಥ (ಪಾ.ಸೋ.೪–೧೮೭೩ ರಿಂದ ೧೮೮೮) ಹಾಗೂ ಭೀಮಕವಿಯರು(ಭೀ.೨೬–೩೨–೩೫) ವಿವರಿಸಿದ್ದಾರೆ.

**ಕರಯೂರ ಚೋಳ** : ಇವನು ಈಶ್ವರನ ಪರಮಭಕ್ತ ಹಾಗೂ ಪರಾಕ್ರಮಿ ರಾಜ. ಇವನು ಅನ್ಯ ರಾಜರ ಮೇಲೆ ಆಕ್ರಮಣ ಮಾಡಲು ತನ್ನ ಸೈನಿಕರನ್ನು ಕಳಿಸುತ್ತಾನೆ. ಸೈನಿಕರು ಸುಮಾರು ಮೂವತ್ತು ಚೀಲಗಳಲ್ಲಿ ವೈರಿಗಳ ತಲೆಗಳನ್ನು ಕತ್ತರಿಸಿ ತುಂಬಿಕೊಂಡು ಬಂದಿರುತ್ತಾರೆ. ಅವುಗಳನ್ನು ವೀಕ್ಷಿಸುತ್ತಿರುವಾಗ ಒಂದು ತಲೆಯ ಕೆಂಜೆಡೆಗಳು ಶಿವನ ಜಡೆಗಳನ್ನು ಹೋಲುತ್ತಿರುವುದನ್ನು ಕಾಣುತ್ತಾನೆ. ತಕ್ಷಣವೇ ತನ್ನ ತಲೆಯನ್ನು ಕತ್ತರಿಸಿ ಆ ವೈರಿಯ ತಲೆಯ ಪಕ್ಕಕ್ಕಿಡುತ್ತಾನೆ. ಆಗ ಪರಮೇಶ್ವರ ಪ್ರತ್ಯಕ್ಷನಾಗಿ ಪ್ರಾಣ ನೀಡುತ್ತಾನೆ.

**ವಿಕ್ರಮ ಚೋಳ** : ಇವನು ಕೂಡ ಶಿವಭಕ್ತ ರಾಜನಾಗಿದ್ದನು. ಇವನು ಚಿನ್ನದ ಗುಡಿಯನ್ನು ಕಟ್ಟಿಸಿ ಲಿಂಗ ಪ್ರತಿಷ್ಠಾಪಿಸಿ ಅನುರಾಗ ಲೀಲೆಯಿಂದ ಅಲ್ಲಿ ಪೂಜಿಸುತ್ತಿರುತ್ತಾನೆ.(ಪಾ.ಸೋ.೪–೨೦೧೫, ಭೀ.೨೬–೬೭)

**ಕುಲೋತ್ತುಂಗ ಚೋಳ** : ಇವನು ಪರಮ ಶಿವಭಕ್ತನಾಗಿದ್ದನು. ಇವನ ಆಸ್ಥಾನದಲ್ಲಿ ಪಿಳ್ಳೆನೈನಾರ ಎಂಬ ಶಿವಭಕ್ತ ಸಹಸ್ರದ್ವಯ ಜನರ ಓಲಗದಲ್ಲಿ ಬೌದ್ಧಗುರುವನ್ನು ವಾದದಲ್ಲಿ ಸೋಲಿಸಿ ಎರಡು ಸಹಸ್ರ ಬೌದ್ಧರನ್ನು ಶಿವಭಕ್ತರನ್ನಾಗಿ ಮಾಡುತ್ತಾನೆ. ಈ ವಿವರವು ಸೋಮನಾಥನಲ್ಲಿ (ಪಾ.ಸೋ.೪–೨೯೫) ಹಾಗೂ ಭೀಮಕವಿಯಲ್ಲಿ(ಭೀ.೪೯–೧೭) ವಿವರಿಸಲ್ಪಟ್ಟಿದೆ.

**ನಿಡುಮಾರ** : ನಿಡುಮಾರ ಎಂಬುವನು ಕೂಡ ಒಬ್ಬ ರಾಜ. ಇವನು ನಿಷ್ಠಾವಂತ ಶೈವಮಾರ್ಗಿ. ತನ್ನ ದೇಶದಲ್ಲಿ ಜೈನರ ಪ್ರಾಬಲ್ಯ ಹೆಚ್ಚಾಗಿದ್ದು, ತ್ರಿಪುಂಡ್ರವನ್ನು ಧರಿಸಿದ ಒಬ್ಬ ಶಿವಭಕ್ತನೂ ಕಾಣುತ್ತಿಲ್ಲ. ಇದಕ್ಕೇನು ಮಾಡುವುದೆಂದು ಚಿಂತಿಸುತ್ತಿರುತ್ತಾನೆ. ಅದೇ ಸಮಯಕ್ಕೆ ಸದ್ಭಕ್ತನಾದ ಜ್ಞಾನ ಸಂಬಂಧಿ ಎಂಬುವನು ಪಾಂಡ್ಯದೇಶದಲ್ಲಿರುವ ಜೈನರೆಲ್ಲರನ್ನು ಸೋಲಿಸಿ ಶೂಲಕ್ಕೇರಿಸುತ್ತಾನೆ. ಇದನ್ನು ತಿಳಿದ ನಿಡುಮಾರ ತನ್ನ ದೇಶದಲ್ಲಿದ್ದ ಜೈನರೆಲ್ಲರನ್ನೂ ಕರೆಸುತ್ತಾನೆ. "ಇಷ್ಟುದಿನ ನಮ್ಮ

ನಾಡಿನ ಪ್ರಜೆಗಳನ್ನು ಅಜ್ಞಾನ ಬೋಧನೆಯಿಂದ ಹಾಳು ಮಾಡಿದಿರಿ ಇನ್ನು ಮುಂದೆ ಹಾಗೆ ನಡೆಯಕೂಡದು. ಪಾಂಡ್ಯ ದೇಶದಲ್ಲಿ ಜ್ಞಾನಸಂಬಂಧಿಯು ಶಿವನೇ ಕರ್ತನೆಂದು ಜೈನರೆಲ್ಲರನ್ನು ನಾಶಮಾಡಿದ್ದಾನೆ. ಹಾಗಾಗಿ ಇನ್ನು ಮೇಲೆ ನೀವೆಲ್ಲ ಶಿವಮತವನ್ನು ಸ್ವೀಕರಿಸಿ. ಇಲ್ಲದಿದ್ದರೆ ನಿಮಗೆ ಶೂಲವೇ ಗತಿ" ಎಂದು ನುಡಿಯುತ್ತಾನೆ. ಆಗ ಶಿವಭಕ್ತರಾಗಿ ಬಂದವರನ್ನು ರಕ್ಷಿಸುತ್ತಾ ಉಳಿದೆಲ್ಲ ಜೈನರನ್ನು ಶೂಲಕ್ಕೇರಿಸುತ್ತಾನೆ. ಈ ಸಂಗತಿಗಳು ಸೋಮನಾಥ(ಪಾ.ಸೋ.೬–೪೧೫) ಹಾಗೂ ಭೀಮಕವಿಯರಲ್ಲಿ(ಭೀ.೪೬–೪೩–೫೨) ನಿರೂಪಿತಗೊಂಡಿವೆ.

**ಆ. ಪ್ರಧಾನಿ :**

ಪ್ರಧಾನಿ ಹುದ್ದೆಗೆ ಆಯ್ಕೆ ಮಾಡಿಕೊಳ್ಳುವಾಗ ಅಂದಿನ ರಾಜರು ಉತ್ತಮ ವ್ಯಕ್ತಿತ್ವ ಮತ್ತು ಬುದ್ಧಿವಂತರನ್ನು ಆಯ್ಕೆಮಾಡಿಕೊಳ್ಳುತ್ತಿದ್ದರು. ರಾಜ್ಯದ ಸಕಲ ಆಡಳಿತವು ಆ ಪ್ರಧಾನಿಯ ವ್ಯಾಪ್ತಿಯಲ್ಲಿ ಬರುತ್ತದೆ. ಹಾಗಾಗಿ ಪ್ರಧಾನಿ ಹುದ್ದೆ ರಾಜ್ಯಾಡಳಿತದಲ್ಲಿ ಅತ್ಯಂತ ಪ್ರಮುಖವಾದುದಾಗಿತ್ತು. ರಾಜನಿಗೆ ಪ್ರತಿಹಂತದಲ್ಲೂ ಸಲಹೆ ಸೂಚನೆಗಳನ್ನು ನೀಡುವುದು, ರಾಜ್ಯ ಪರಿಪಾಲನೆಯಲ್ಲಿ ವಹಿಸಬೇಕಾದ ಎಲ್ಲಾ ಕ್ರಮಗಳು ಪ್ರಧಾನಿಯ ವ್ಯಾಪ್ತಿಗೆ ಒಳಪಡುತ್ತಿದ್ದವು. ಬಿಜ್ಜಳನ ಮೊದಲ ಭಂಡಾರಿ ಹಾಗೂ ದಂಡನಾಯಕನಾಗಿದ್ದ ಬಲದೇವನು ತೀರಿಹೋದ ನಂತರ ಈತನ ವಂಶದವರಾರಾದರೂ ಇವನ ನಿಯೋಗವನುಳಿಸುವವನು ಇದ್ದಾನೆಯೇ? ಎಂದು ಬಿಜ್ಜಳ ಕೇಳುತ್ತಾನೆ. ಇಲ್ಲಿ ಪ್ರಧಾನಿಯ ಹುದ್ದೆ ವಂಶಪಾರಂಪರರ್ಯವಾಗಿ ಬರುತ್ತಿತ್ತು ಎಂಬ ಸೂಚನೆಯೂ ಇಲ್ಲಿದೆ. ಆಗ ಅಲ್ಲಿದ್ದವರು. ಬಲದೇವನ ಅಳಿಯ ಬಸವಣ್ಣ ಈ ಹುದ್ದೆಗೆ ತಕ್ಕನಾದವನು ಎಂದು ಸೂಚಿಸುತ್ತಾರೆ. ಅದರಂತೆ ಬಸವಣ್ಣನನ್ನು ಕರೆಸುತ್ತಾನೆ. ಬಿಜ್ಜಳ ಪ್ರಧಾನಿಗೆ ರಾಜರಂತೆಯೇ ವೈಭವವಾಗಿ ಮೆರವಣಿಗೆಯ ಮೂಲಕ ಕರೆತರುತ್ತಿದ್ದರೆಂಬುದು 'ಬಸವಪುರಾಣ'ದಲ್ಲಿ ಬಸವಣ್ಣನ ಮೆರವಣಿಗೆಯ ಸಂದರ್ಭವನ್ನು ನೋಡಿದಾಗ ತಿಳಿಯುತ್ತದೆ. ಅರಮನೆಗೆ ಬಂದ ಬಸವಣ್ಣನನ್ನು

"ಧರಣಿಪತಿಯು ಸಕಳನಿಯೋಗಂ
ಪುರಜನಂಗಳು ಕೀರ್ತಿಸುತ್ತಂ
ಕರಮತಿಶಯವೆನುತ್ತ ರಾಯಂ ಬಸವಮಂತ್ರಿಯನು
ಕರೆದು ಮನ್ನಣೆವೆತ್ತ ಪನ್ನಿ
ಬ್ಬರು ಮಹಾಮಾತ್ಯರೊಳಗಗ್ರೇ
ಶ್ವರನೆನಲು ಮಿಗೆ ಪಿರಿಯ ಗದ್ದುಗೆಯಲ್ಲಿ ಕುಳ್ಳಿರಿಸಿ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೫,ಪ.೬೫)

ಪ್ರಧಾನಮಂತ್ರಿಗೆ ರಾಜನಂತೆಯೇ ಹಿರಿಯ ಗದ್ದುಗೆ(ಸಿಂಹಾಸನ) ಇರುತ್ತಿತ್ತು. ಜೊತೆಗೆ ಪ್ರಧಾನಿಗಾಗಿಯೇ ಅರಮನೆಯಲ್ಲಿ ಒಂದು ನಿವಾಸವಿರುತ್ತಿತ್ತು ಎಂಬುದನ್ನು ಕವಿಗಳು ಸೂಚಿಸಿದ್ದಾರೆ. "ಇತ್ತ ಶಿವಗಣ ಸಹಿತ ಸಮ್ಮುದವೆತ್ತು ತಾನೈತಂದು ಬಲದೇವೋತ್ತಮನ ಪಿರಿಯರಮನೆಯೆ

ತನ್ನರಮನೆಯಾಗಿ"(ಭೀ.೫-೭೦) ಹೀಗೆ ಬಸವಣ್ಣ ೭೦೦ ಮದ್ದಾನೆ, ೯೦ ಸಾವಿರ ಕುದುರೆ, ಒಂದು ಲಕ್ಷದ ತೊಂಬತ್ತೆಂಟು ಸಾವಿರ ಕಾಲಾಳುಗಳೊಂದಿಗೆ ಹನ್ನೆರಡು ಮಂದಿ ಭಂಡಾರಿಗಳೊಳಗೆ ಹಿರಿಯ ಭಂಡಾರಿಯಾಗಿ ನೇಮಕವಾಗುತ್ತಾನೆ. ಜೊತೆಗೆ ಮಂತ್ರಿಪಟ್ಟಕೆ, ಮಂಡಳಗಳಿಗೆ, ತಂತ್ರಗಳಿಗೆ ನಿಜಾಪ್ತ ಜನಕೆ, ಮೂಲ ಭಂಡಾರವದಕೆ ಭೂಪತಿಯ ರಾಜ್ಯಕ್ಕೆ ಇನ್ನೇನು ನೀನಲ್ಲದೊಡೆಯರಿರುವರೇ (ಪಾ.ಸೋ.೨-೩೭) ಎಂಬ ಮಾತಿನಲ್ಲಿ ಬಸವಣ್ಣ ಮೇಲಿನ ಎಲ್ಲಾ ಹುದ್ದೆಗಳನ್ನು ಹೊಂದಿದ್ದನು ಎಂಬುದು ತಿಳಿಯುತ್ತದೆ.

ಹಾಗೆಯೇ ರಾಜ್ಯಾಡಳಿತದಲ್ಲಿ ಸಚಿವರು, ಅಮಾತ್ಯರು, ಮಾಂಡಲೀಕರು, ಸಾಮಂತರು, ದಂಡನಾಯಕರು ಇದ್ದರೆಂದು(ಭೀ.೫-೧೪) ಕವಿಗಳು ಸೂಚಿಸುತ್ತಾರೆ. ಮಂಗಳ ಪಾಠಕರು, ಕೈವಾರಿಗಳು (ಭೀ.೫.೩೮), ಕವಿಗಳು, ಗಮಕಿಗಳು, ಗಾಯಕರು(ಭೀ.೬೦-೩೦) ಇದ್ದರು ಚಾಮರ ಬೀಸುವ ವಿಳಾಸಿನಿಯರು ಅರಮನೆಯಲ್ಲಿರುತ್ತಿದ್ದರು (ಭೀ೬೦.೨೫,೨೬,೨೯) ದ್ವಾರಪಾಲಕರು(ಭೀ.೩೪-೪೨) ಅರಮನೆಯ ಮುಖ್ಯ ದ್ವಾರಗಳಲ್ಲಿ ಕಾವಲು ಕಾಯಲು ಇರುತ್ತಿದ್ದರು. ಹಾಗೆಯೇ ಪುರೋಹಿತ ಸಾಮವೇದಿ(ಪಾ.ಸೋ.೨-೯೬೩) ಮಂಡಲೇಶ್ವರ ಮಲ್ಲರಸ(ಪಾ.ಸೋ.೩-೧೯೦೩) ದಳವಾಯಿ(ಪಾ.ಸೋ.೪-೧೮೫೯) ಮುಂತಾದವರು ರಾಜ್ಯಾಡಳಿತದಲ್ಲಿ ಪ್ರಮುಖ ಪಾತ್ರವಹಿಸಿದ್ದರು.

**ಇ. ಅನ್ಯದೇಶ ಸಂಬಂಧಗಳು :**

'ಬಸವಪುರಾಣ'ಗಳಲ್ಲಿ ವಿವರಿಸಿರುವ ರಾಜ್ಯ ಮತ್ತು ಅಂತರಾಜ್ಯಗಳ ಮಾಹಿತಿಯನ್ನು ಗಮನಿಸಿದರೆ ಆ ಕಾಲದಲ್ಲಿ ಇಲ್ಲಿ ಉಲ್ಲೇಖಿಸಲ್ಪಟ್ಟ ಎಲ್ಲಾ ದೇಶಗಳೊಂದಿಗೆ ಸಂಬಂಧವನ್ನು ಹೊಂದಿದ್ದರು ಎಂದು ತಿಳಿಯುತ್ತದೆ. ರಾಜಕೀಯವಾಗಿ ಆರ್ಥಿಕವಾಗಿ ಅಂದರೆ ವ್ಯಾಪಾರ ಮತ್ತು ವಾಣಿಜ್ಯಕ್ಕೆ ಸಂಬಂಧಿಸಿದಂತೆ ಪರಸ್ಪರರ ಸಂಬಂಧ ಇದ್ದಿರಬೇಕು ಎನ್ನಿಸುತ್ತದೆ. ಈ ಪುರಾಣಗಳಲ್ಲಿ ಹೆಸರಿಸ್ಪಟ್ಟ ಪ್ರಮುಖ ದೇಶಗಳೆಂದರೆ, ಚೋಳ, ಪಾಂಡ್ಯ, ತುಳುವ, ಮಲಯ, ಮಲಯಾಳ, ಕೊಂಕಣ, ಕರ್ಣಾಟ, ಕಾಂಬೋಜ, ಕನ್ನೋಜ, ಕೇರಳ, ದ್ರಾವಿಳ, ಮಾಳ, ಬಾಹ್ಲಿಕ, ಸೂರಸೇನ, ಖರ್ಪರ, ಬಂಗಾಳ, ವಂಗ, ಕಲಿಂಗ, ನೇಪಾಳ, ಕುರು, ತುರುಷ್ಕ, ಕಾಲವಾಂಧ್ರ, ಸಿಂಹಳ, ಮಾಳವ, ಲಾಳ, ಸಿಂಧು, ಗುರ್ಜರ, ಮತ್ಸ್ಯ, ಕುರಂಗ, ಮಗದ, ಪಾಂಚಾಳ, ಗೌಳ ವಾರಣಾಸಿ ಮುಂತಾದವು.

**ಈ. ನ್ಯಾಯ ಮತ್ತು ಶಿಕ್ಷೆ :**

ರಾಜ್ಯದ ಸುಭಿಕ್ಷ ಆಡಳಿತಕ್ಕೆ ಮತ್ತು ಸುಗಮವಾಗಿ ಪರಿಪಾಲನೆ ಮಾಡಬೇಕೆಂದರೆ ಅಲ್ಲಿನ ನ್ಯಾಯವ್ಯವಸ್ಥೆಯು ಉತ್ತಮವಾಗಿರಬೇಕು. ಸರಿತಪ್ಪುಗಳ ಅರಿವಿನ ಜೊತೆ ಉತ್ತಮ ನ್ಯಾಯ, ತಪ್ಪುಗಳಿಗೆ ಸರಿಯಾದ ಶಿಕ್ಷೆ ನೀಡುವ ಮೂಲಕ ರಾಜ್ಯದಲ್ಲಿ ಶಾಂತಿ ಕಾಪಾಡುವುದು ರಾಜರ ಧರ್ಮ. ಹಾಗಾಗಿ ಅನ್ಯಮಾರ್ಗದಲ್ಲಿ ನಡೆಯುವವರಿಗೆ ಮತ್ತು ರಾಜ್ಯದಲ್ಲಿ ಅರಾಜಕತೆ ಕೋಲಾಹಲವನ್ನು

ಉಂಟುಮಾಡುತ್ತಾ ರಾಜ್ಯದ ಜನತೆಯ ಹಿತಾಸಕ್ತಿಗೆ ಕೇಡು ಬಯಸುವವರಿಗೆ ಉಗ್ರ ಶಿಕ್ಷೆಗಳನ್ನು ಹಿಂದೆ ನೀಡುತ್ತಿದ್ದರು. ಇಲ್ಲಿ ಮುಖ್ಯವಾಗಿ ಬಿಜ್ಜಳನ ರಾಜ್ಯಾಡಳಿತದಲ್ಲಿ ನ್ಯಾಯ ಮತ್ತು ಶಿಕ್ಷೆಯ ಪರಿಪಾಲನೆ ಹೇಗೆ ನಡೆಯುತ್ತಿತ್ತು ಎಂಬುದನ್ನು 'ಬಸವಪುರಾಣ'ಗಳು ತಿಳಿಸುತ್ತವೆ. ಇಲ್ಲಿನ ಕೆಲವು ಮುಖ್ಯ ನ್ಯಾಯಪಂಚಾಯತಿಗಳು ಮತ್ತು ಅವರಿಗೆ ನೀಡಿದ ಶಿಕ್ಷೆಗಳ ವಿವರವನ್ನು ಇಲ್ಲಿ ತಿಳಿಸಲಾಗಿದೆ.

ಅರಮನೆಯ ಕೆಲ ವಿಪ್ರರು ಭಂಡಾರದ ಹಣವೆಲ್ಲವನ್ನು ಮಿಂಡಜಂಗಮರಿಗೆ ಕೇಳಿದಷ್ಟೂ ನೀಡುತ್ತಿದ್ದಾನೆಂದು ಬಸವಣ್ಣನ ಮೇಲೆ ದೂರು ನೀಡುತ್ತಾರೆ. ಆಗ ಬಿಜ್ಜಳನು ಬಸವಣ್ಣನನ್ನು ಕರೆಸಿ ನ್ಯಾಯ-ಅನ್ಯಾಯಗಳನ್ನು ತೀರ್ಮಾನಿಸುವಾಗ ಅಲ್ಲಿ ನಡೆದ ಸರಿ-ತಪ್ಪುಗಳನ್ನು ಪರೀಕ್ಷಿಸದೆಯೇ ನಿರ್ಧಾರಗಳನ್ನು ತೆಗೆದುಕೊಳ್ಳುತ್ತಾನೆ. ಬಸವಣ್ಣನ ಮೇಲೆ ಕೋಪಗೊಂಡು

ಮಾಯರ್ಥ ಮೊಪ್ಪಿಂಚಿ ಪೊಮ್ಮು
ದಪ್ಪೇಮಿ! ಸಾಲುಂ ಬ್ರಧಾನಿತನಂಬು
ದಂಡಿಂಪ ರಾ ದನುತಲಂಪುನ ನಿಟ್ಲು
ಬಂಡಾರಮೆತಯುಂ ಬಾಡು ಸೇಸಿತಿವಿ
ಪರಧನಂ ಬಪಹರಿಂಪನಿಬಾಸ ಯಂಡ್ರು
ಪರಧನಂ ಬೆಟ್ಲೊಕೋ ಬಸವ; ಕೈಕೊಂಟಿ
ಮೇಯು ಮಾಟಲು ನೇಲ ವೆಱತುಮು ನೀಡು
ಮೇಯಾರ್ಥ ಮೊಪ್ಪಿಂಚಿ ನೀಯಂತ ಸುಂಡು

(ಗೂ.ವೆಂ.ಸು.(ಸಂ),ಬ.ಪು., ತೃ.ಆ.,ಸಾಲು-೧೯-೨೬)

(ನಾನು ನೀಡುರುವ ಪದವಿಯನ್ನು ಹಿಂದಿರುಗಿಸಿ ಹೋಗು, ತಪ್ಪಿಲ್ಲ. ನಾನು ಪ್ರಧಾನಿ ಪಟ್ಟವನ್ನು ಶಿಕ್ಷಿಸಲಾಗದೆಂದು ನನ್ನ ಭಂಡಾರದ ಹಣವೆಲ್ಲವನ್ನು ಹಾಳು ಮಾಡಿರುವೆ. ಪರಧನವನ್ನು ಅಪಹರಿಸುವುದಿಲ್ಲ ಎಂದು ಹೇಳಿದ ನಿನ್ನ ಭಾಷೆಯನ್ನು ಮೀರಿ ಏಕೆ ಅಪಹರಿಸಿದೆ ಬಸವಣ್ಣ. ನಿನ್ನೊಡನೆ ಹೆಚ್ಚು ಮಾತುಗಳೇಕೆ ನಮ್ಮ ಪದವಿಯನ್ನು ಹಿಂದಿರುಗಿಸಿ ನಿನ್ನ ಪಾಡಿಗೆ ನೀನಿರು)

ಇದೇ ವಿಚಾರವನ್ನು ಭೀಮಕವಿಯು(ಭೀ.೧೦.೭,೮) ಹೇಳುತ್ತಾನೆ. ಬಿಜ್ಜಳ ತೆಗೆದುಕೊಂಡ ಈ ನಿರ್ಧಾರಕ್ಕೆ ಬಸವಣ್ಣ ನಸುನಗುತ್ತ ನಡೆದ ಸಂಗತಿಯೆಲ್ಲಾ ತಿಳಿಸುತ್ತಾನೆ. ಶಿವಭಕ್ತರು ಪರಧನಕ್ಕೆ ಆಸೆಪಡುವವರಲ್ಲ ಎಂದು ಭಂಡಾರದ ಹಣವನ್ನು ಲೆಕ್ಕಮಾಡಿಸುತ್ತಾನೆ. ಹಿಂದಿನದಕ್ಕಿಂತ ಮೂರು ಪಟ್ಟು ಹೆಚ್ಚಿರುವುದನ್ನು ಗಮನಿಸಿದ ರಾಜ ತಪ್ಪಿನ ಅರಿವಾಗಿ ಬಸವಣ್ಣನಲ್ಲಿ ಕ್ಷಮೆ ಬೇಡುತ್ತಾನೆ. ಜೊತೆಗೆ ಯಾವುದೇ ನಿಖರ ಮಾಹಿತಿಯಿಲ್ಲದೆ ಸುಮ್ಮನೇ ಅಪವಾದ ಮಾಡುವ ಚಾಡಿಕೋರರನ್ನು ಎಚ್ಚರಿಸುತ್ತಾ, ಮುಂದೆ ಈ ರೀತಿ ಚಾಡಿ ಹೇಳುವವರಿಗೆ ಉಗ್ರ ಶಿಕ್ಷೆಯನ್ನು ಪ್ರಕಟಿಸುತ್ತಾನೆ. ಆ ಶಿಕ್ಷೆ ಎಂದರೆ, ಬಸವಣ್ಣನ ಮೇಲೆ ಇನ್ನು ಮುಂದೆ ಯಾರಾದರು ಸುಳ್ಳು ಅಪವಾದಗಳನ್ನು

ಮಾಡಿದರೆ ಅಂತಹ ನಾಯಿಗಳಿಗೆ "ನಾಲಗೆ ಸೀಳಿಸಿ ಸುಣ್ಣವನ್ನು ಇಟ್ಟು ಕಾಸಿರುವ ಮರಳನ್ನು ಬಾಯಿಯೊಳಗೆ ಸುರಿಸುವೆ" ಎನ್ನುತ್ತಾನೆ. (ತ್ರೈ.ಆ.,ಸಾಲು-೭೩-೭೬) ಈ ಸಂಗತಿಯು ಭೀಮಕವಿಯಲ್ಲೂ(೩-೧೯) ಮೇಲಿನ ರೀತಿಯಲ್ಲೇ ವಿವರಿಸಲ್ಪಟ್ಟಿದೆ.

ಮಡಿವಾಳ ಮಾಚಯ್ಯನ ಕಥೆಯಲ್ಲಿ ಭಕ್ತರ ಮಡಿಬಟ್ಟೆಗಳನ್ನು ಮುಟ್ಟಿ ಮೈಲಿಗೆ ಮಾಡುವವರನ್ನು ಹಿರಿದು ಕೊಲ್ಲುವೆಂಬ ಭಾಷೆಯನ್ನು ಪಾಲಿಸುತ್ತಿದ್ದ ಮಾಚಯ್ಯ. ಒಮ್ಮೆ ಒಗೆದ ಬಟ್ಟೆಗಳನ್ನು ತೆಗೆದುಕೊಂಡು ದಾರಿಯಲ್ಲಿ ಹೋಗುವಾಗೊಬ್ಬನ ಕೈ ತಾಕುತ್ತದೆ. ಒಡನೆಯೆ ಅವನ ಶಿರವನ್ನು ಕಡಿಯುತ್ತಾನೆ. ಮಾಚಯ್ಯನ ಈ ವಿಷಯವನ್ನು ಬಿಜ್ಜಳಗೆ ಹೇಳಿ ನ್ಯಾಯತೀರ್ಮಾನವನ್ನು ಬಸವಣ್ಣನ ಸಮ್ಮುಖದಲ್ಲಿ ನಡೆಸುತ್ತಾರೆ. ಅನ್ಯಾಯವಾಗಿ ಕೊಲೆಗೈದನೆಂದು ಕೋಪಗೊಂಡ ಬಿಜ್ಜಳ ಆಕ್ರೋಶಭರತವಾಗಿ ಎಲ್ಲಾದರೂ ಇಂಥ ಅವಿವೇಕನಿರುವನೇ ಹೀಗೆ ಮುಟ್ಟಿದವರನ್ನೆಲ್ಲ ಕೊಲ್ಲುತ್ತಾ ಹೋದರೆ ಪರದೇಶಿಗಳಾರು ಇನ್ನು ಇಲ್ಲಿಗೆ ಬರುವುದಿಲ್ಲ. ಶಿವಭಕ್ತಿಯ ನೆಪದಲ್ಲಿ ನೀವು ಕೊಬ್ಬಿದ್ದೀರಿ. ಅರಸನಾಗಿ ನಾನಿದ್ದರೂ ಎಲ್ಲಾ ತೀರ್ಮಾನಗಳನ್ನು ನೀವೇ ತೆಗೆದುಕೊಳ್ಳುವುದು ಸರಿಯೇ? ಸೀರೆಯನ್ನು ಮುಟ್ಟಿದರೆ ಮುದುರುವುದೇನು? ಶಿವಭಕ್ತರಿಗಿದು ಉಚಿತವೇ ಎಂದು ಪ್ರಶ್ನಿಸುತ್ತಾನೆ. ಈ ತಪ್ಪಿಗೆ ಶಿಕ್ಷೆಯಾಗಿ "ಈ ಅಸಗನನ್ನು ಅಲ್ಲಿಯೇ ಕೊಲ್ಲಿರಿ ಹೋಗಿ, ನುಂಗಿದುದನ್ನೆಲ್ಲ ಕಕ್ಕಲು ಬನ್ನಿ" ಎಂದು ಉಗ್ರಶಿಕ್ಷೆಯನ್ನು ಪ್ರಕಟಿಸುತ್ತಾನೆ. ನಂತರ ಬಸವಣ್ಣ ಬಿಜ್ಜಳನಿಗೆ ತಿಳಿಹೇಳಿ ಸತ್ತವರನ್ನು ಬದುಕಿಸುತ್ತಾರೆ. ತಪ್ಪುಮಾಡಿದ ಅಂದಿನ ಕಾಲದವರಿಗೆ ಈಗಿನಂತೆ ಗಲ್ಲುಶಿಕ್ಷೆಯಂತೆ ಕೊಲ್ಲಿಸುವ ಶಿಕ್ಷೆಯನ್ನು ವಿಧಿಸುತ್ತಿದ್ದರು ಎಂಬುದು ತಿಳಿಯುತ್ತದೆ.

'ಬಸವಪುರಾಣ'ಗಳಲ್ಲಿ 'ಎಳೆಹೂಟೆ' ಎಂಬ ಶಿಕ್ಷೆಯೊಂದನ್ನು ಕವಿಗಳು ಹೇಳಿದ್ದಾರೆ. ಶಿವನಾಗಮಯ್ಯನ ಕಥೆಯಲ್ಲಿ ಬಿಜ್ಜಳ ಮತ್ತು ಬಸವಣ್ಣರು ವಾದವಿವಾದಗಳಲ್ಲಿ ತೊಡಗುತ್ತಾರೆ. ವಿಪ್ರಕುಲ, ಶಿವಕುಲಗಳ ಕುರಿತು ತೀವ್ರ ಚರ್ಚೆಯಾಗುತ್ತದೆ. ಆಗ ಬಿಜ್ಜಳ ಶಿವಭಕ್ತರನ್ನು ಚಿವುಟಿದರೆ ಹಾಲು ಬರುತ್ತವೆಯೋ, ಬೇರೆಯವರನ್ನು ಚಿವುಟಿದರೆ ರಕ್ತವು ಬರುತ್ತದೇನು? ಎಂದು ವ್ಯಂಗ್ಯ ಮಾತಾಡುತ್ತಾನೆ. ಇದಕ್ಕೆ ಸಿಟ್ಟಿನಿಂದ ಅಷ್ಟೇ ಖಾರವಾಗಿ ಪ್ರತಿಕ್ರಿಯಿಸುತ್ತಾ ಬಸವಣ್ಣ ಕೇಳುವುದು ಹೀಗೆ

"ಜನವಜೆಯೆ ಶಿವನಾಗಮಯ್ಯನ
ತನುವಿನಲಿ ತೋಱುವೆನು ಹಾಲನ
ವನಿಸುರರೊಳೀ ಸೋಮಯಾಜಿಯೆನಿಪ್ಪನಂ ಕೊಯ್ದು
ಇನಿತು ನೀರಂ ತೋಱಿರೇ ಧಿ
ಕ್ಕನೆ ಇದಕೆ ಆಱದಡೆ ನಿಮ್ಮುವ
ನಿನಿಬರಂ ಪಟ್ಟಣದ ಸುತ್ತೆಳೆಹೂಟೆ ಹೂಡಿಸುವೆ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೫೬,ಪ.೮೦)

ಇಲ್ಲಿ 'ಎಳೆಹೂಟೆ' ಎಂಬ ಶಿಕ್ಷೆಯೆಂದರೆ ಎತ್ತುಗಳಂತೆ ನೊಗಹೂಡಿ ಎಳೆಸುವುದು ಎಂಬರ್ಥವನ್ನು ಹೊಂದಿದೆ. ಬಸವಣ್ಣನ ಈ ಮಾತಿನಿಂದ ರಾಜನಿಗೆ ಪ್ರತಿಯಾಗಿ ಮಾತಾಡುವ ಮತ್ತು ತಪ್ಪಿಗೆ ಶಿಕ್ಷೆಯನ್ನು ವಿಧಿಸುವ ರೀತಿಯಲ್ಲಿ ಕವಿಗಳು ಇಲ್ಲಿ ಚಿತ್ರಿಸಿರುವುದನ್ನು ಕಾಣುತ್ತೇವೆ.

ಬಸವಣ್ಣ ಜಗದೇವನಿಗೆ 'ತಪ್ಪುದಂಡ'ವಾಗಿ ಕೊಡುವ ಶಿಕ್ಷೆಯು ಈ ಪುರಾಣಗಳಲ್ಲಿ ವ್ಯಕ್ತವಾಗಿದೆ. ಆರೋಗಣೆಗೆಂದು ಬಸವಣ್ಣನನ್ನು ಆಹ್ವಾನಿಸಿ ಅವನು ಬರುವ ಮುಂಚೆಯೇ ವಿಪ್ರರಿಗೆ ಪಾದ ತೊಳೆದು ದಾಸೋಹ ನೀಡಿದ್ದರಿಂದ ಬಸವಣ್ಣ ಕೋಪಗೊಳ್ಳುತ್ತಾನೆ. ಆಗ ತನ್ನ ತಪ್ಪಿನ ಅರಿವಾಗಿ ಇದಕ್ಕೆ ಶಿಕ್ಷೆಯಾವುದೆಂದು ಪರಿಪರಿಯಾಗಿ ಬೇಡುತ್ತಾನೆ ಜಗದೇವ. ಆಗ ಬಸವಣ್ಣ "ಹೆದರಿದಿರು ಇನ್ನು ಕೆಲವು ದಿನಗಳಿಗೆ ಶಿವದ್ರೋಹವಾಗುತ್ತದೆ. ಆಗ

"ಮಡಿಸಾ ದ್ರೋಹಿಯ ನಮಗೊಡಂ
ಬಡಿಕೆಯಾಯಿತು ನಿನ್ನ ಕೆಲಸಕೆ
ಮೃಡನೊಲಿದು ತಾ ಮೆಚ್ಚುವನು ನಿಜ ನಿರ್ಣಯಕ್ಕಿಂತು"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೫೯,ಪ.೬೦)

ಪಿಳ್ಳೆನೈನಾರ ಎಂಬ ಶಿವಭಕ್ತನು ಜೈನರೊಡನೆ ವಾದ ವಿವಾದದಲ್ಲಿ ತೊಡಗಿ ತಾನು ಜಯಿಸಿ ಹದಿನೆಂಟು ಸಾವಿರ ಜೈನರನ್ನು ಶೂಲಕ್ಕೇರಿಸಿದ ವಿವರ 'ಬಸವಪುರಾಣ'ಗಳಲ್ಲಿ ಬಂದಿದೆ(ಭೀ.೨೦.೩೮).

ಹೀಗೆ ವೀರಶೈವ ಧರ್ಮಾನುಸಾರಿಯಾಗಿ ಶಿವಮತವನ್ನು ವಿರೋಧಿಸುವವರಿಗೆ ಮತ್ತು ಶಿವಭಕ್ತರಿಗೆ ಉಂಟಾಗುವ ಕೆಲವು ವೈಮನಸ್ಸುಗಳಿಗೆ ನ್ಯಾಯ ತೀರ್ಮಾನಗಳು, ಶಿಕ್ಷೆಗಳು ವಿಧಿಸುವುದನ್ನು ಈ ಪುರಾಣಗಳಲ್ಲಿ ಕಾಣಬಹುದು. ಇಂತಹ ಅನೇಕ ಉದಾಹರಣೆಗಳು ಈ ಪುರಾಣಗಳಲ್ಲಿವೆ. ಅವು ಕಿನ್ನರಿ ಬ್ರಹ್ಮಯ್ಯನ ಕಥೆಯಲ್ಲಿ, ನರಸಿಂಗ ನಯನಾರನ ಕಥೆಯಲ್ಲಿ, ನಿಡುಮಾರನ ಕಥೆಯಲ್ಲಿ, ಹಾವಿನಹಾಳ ಕಲ್ಲಯ್ಯನ ಕಥೆಯಲ್ಲಿ, ನ್ಯಾಯ ಮತ್ತು ಶಿಕ್ಷೆಗೆ ಸಂಬಂಧಿಸಿದ ವಿವರಗಳಿವೆ. ಈ ಎರಡೂ ಪುರಾಣಗಳಲ್ಲಿನ ಉಗ್ರವಾದ ಶಿಕ್ಷೆ ಎಂದರೆ ಬಿಜ್ಜಳ ಹರಳಯ್ಯ ಮತ್ತು ಮಧುವಯ್ಯರ ಕಣ್ಣುಗಳನ್ನು ಕೀಳಿಸಿದ್ದು. ಇದೊಂದು ಅವಿವೇಕಯುತವಾದ ನ್ಯಾಯತೀರ್ಮಾನವಾಗಿದೆ. ತಪ್ಪಿಲ್ಲದ ಈ ಇಬ್ಬರು ಅಮಾಯಕರ ಕಣ್ಣುಗಳನ್ನು ಕೀಳಿಸಿದ ಬಿಜ್ಜಳ ಕೊನೆಗೆ ತಾನೇ ನಾಶವಾಗುತ್ತಾನೆ. ಹಾಗಾಗಿ ಯಾವತ್ತೂ ನ್ಯಾಯ ಸತ್ಯದ ಕಡೆಗೆ ಇರಬೇಕು ಎಂಬುದು ಇಲ್ಲಿನ ತಾತ್ಪಾರ್ಯ. ಇಲ್ಲಿನ ಬಹುತೇಕ ನ್ಯಾಯ ತೀರ್ಮಾನಗಳಲ್ಲಿ ವೀರಶೈವಧರ್ಮದ ಪ್ರತಿಪಾದನೆಯಿದೆ. ಯಾಕೆಂದರೆ ಇಲ್ಲಿ ರಾಜನಾದವನಿಗೆ ತನ್ನ ರಾಜ್ಯದ ಸರ್ವ ಆಡಳಿತ ನ್ಯಾಯ, ಶಿಕ್ಷೆ ವಿಧಿಸುವ ಎಲ್ಲಾ ಹಕ್ಕು ಇರುತ್ತದೆ. ಆದರೆ ಇಲ್ಲಿನ ರಾಜನಿಗೆ ಸ್ವತಂತ್ರವೇ ಇಲ್ಲ. ಒಂದು ರೀತಿ ಗೊಂದಲದ ತೀರ್ಮಾನಗಳು ಕಂಡುಬರುತ್ತವೆ. ದೃಢನಿರ್ಧಾರಗಳಿಲ್ಲದ ರಾಜನ ತೀರ್ಮಾನಗಳು ಶಿವಧರ್ಮದ ಪ್ರಭಾವದಿಂದ ಕಾರ್ಯರೂಪಕ್ಕೆ ಬಾರದೆ ತನ್ನ ತೀರ್ಮಾನಗಳನ್ನು ಹಿಂದಕ್ಕೆ

ಪಡೆಯುತ್ತಾನೆ. ಕೊನೆಗೆ ಶಿವಧರ್ಮವೇ ಗೆಲ್ಲುತ್ತದೆ. ಈ ಎಲ್ಲಾ ರೀತಿಯ ವಿವರಗಳು, ವಿಶ್ಲೇಷಣೆಗಳನ್ನು ಕವಿಗಳು ಸೃಷ್ಟಿಸಿರುವುದು ಶಿವಧರ್ಮದ ಉದ್ಧಾರಕ್ಕಾಗಿಯೇ ಎಂಬುದು ಮೇಲ್ನೋಟಕ್ಕೆ ತಿಳಿಯುತ್ತದೆ.

**೫.೫. ವಿನೋದಾವಳಿಗಳು :**

ಮನರಂಜನೆಗಾಗಿ ಅನೇಕ ವಿದಧ ಆಟಗಳು, ಸಂಗೀತ, ಗೋಷ್ಠಿಗಳು ಹಿಂದಿನ ಕಾಲದಿಂದಲೂ ನಡೆಯುತ್ತಾ ಬಂದಿವೆ. ಮನಸ್ಸಿನ ಉಲ್ಲಾಸಕ್ಕೆ ಸಂಭ್ರಮಕ್ಕೆ ಈ ರೀತಿಯ ಆಟಗಳು ತುಂಬಾ ಮುಖ್ಯವಾಗುತ್ತವೆ. ಮುಖ್ಯವಾದ ಕೆಲವು ಮನರಂಜನೆಯ ಅಂಶಗಳನ್ನು ಮುಂದೆ ವಿವರಿಸಲಾಗಿದೆ.

**ಅ. ನೃತ್ಯಗಳು**

ಮನರಂಜನೆಯ ಮುಖ್ಯ ಪ್ರಕಾರ ನೃತ್ಯಗಳು. ಈ ನೃತ್ಯಗಳನ್ನು ರಾಜರು ಹಿಂದೆ ದೇವಸ್ಥಾನಗಳ ಮುಂಭಾಗಗಳಲ್ಲಿ, ಅರಮನೆಗಳ ಮುಂಭಾಗಗಳಲ್ಲಿ ಏರ್ಪಡಿಸುತ್ತಿದ್ದರು. ಮತ್ತು ಹಬ್ಬ ಹರಿದಿನಗಳಲ್ಲಿ ಜಾತ್ರೆ, ಮೆರವಣಿಗೆಗಳಲ್ಲಿ ನೃತ್ಯಗಳನ್ನು ಏರ್ಪಡಿಸುತ್ತಿದ್ದರು. ಈ ನೃತ್ಯಗಳು ಹಲವು ತೆರನಾಗಿದ್ದು, ನೃತ್ಯ ಮಾಡುವವರಿಗೂ ಮತ್ತು ನೋಡುಗರಿಗೂ ಸಂತೋಷವನ್ನು ನೀಡುತ್ತಿದ್ದವು. ಈ ರೀತಿಯ ನೃತ್ಯಗಳು 'ಬಸವಪುರಾಣ'ಗಳಲ್ಲಿ ಅಲ್ಲಲ್ಲಿ ವರ್ಣಿತವಾಗಿರುವುದು ಕಂಡುಬರುತ್ತವೆ.

ಬಸವಣ್ಣ ಮತ್ತು ಗಂಗಾಂಬಿಕೆಯ ಮದುವೆಯ ಸಂದರ್ಭದಲ್ಲಿ ಪುರ ಬೀದಿಗಳೆಲ್ಲ ಶೃಂಗಾರಗೊಂಡು ಜನರೆಲ್ಲ ಸಂತೋಷಭರಿತರಾಗಿ,

ಕೋಲಾಟಮುನು ಬಾತ್ರಗೊಂಡ್ಲಿ ಪೇರಣಿಯಂ
ಗೇಳಿಕ ಜೋಕಯು ಲೀಲ ನಟಿಂಪಂ
ಬಾಯಕ ಚಾಂಗು ಬಳಾ ಯನು ಶಬ್ದ
ಮಾಯತಿ ನಾಕಸಂ ಬಂದಿ ಘೂರ್ಣಿಲ್ಲು

(ಗೂ.ವೆಂ.ಸು.(ಸಂ),ಬ.ಪು.,ಪ್ರ.ಆ.,ಸಾಲು-೧೦೫೭-೬೦)

(ಕೋಲಾಟವಾಡುವ ಪಾತ್ರಗಳು, ಮೆರವಣಿಗೆಗಳು, ಕೇಳಿಕೆ, ಜೋಕುಗಳ ಲೀಲೆಯಿಂದ ನಟಿಸುತ್ತಾ ಕುಣಿದಾಡುತ್ತ ಚಾಂಗುಭಲಾ ಎಂಬ ಶಬ್ದಗಳು ಆಗಸದಲ್ಲಿ ಪ್ರತಿಧ್ವನಿಸುತ್ತಿರಲು) ಭೀಮಕವಿಯೂ ಈ ಸಂತೋಷದ ಸಂಭ್ರಮವನ್ನು ಕುರಿತು ಹೇಳುತ್ತಾ,

"ರೀತಿಯಲಿ ಆನಂದಗೀತಸ
ಮೇತ ಶಂಕರಗೀತತತಿಯೊಳು
ಖ್ಯಾತರುದ್ರನ ಮಹಿಮೆಯಂಕಿಸಿ ಪಾಡುವರು ಕೆಲರು
ಗೀತ ಜತಿಗಳ ಮೇಳವಕೆ ಕೆಲ
ರೋತು ಕುಣಿವರು ಚಪ್ಪಳಿಕ್ಕಿ ಪು
ರಾತನರ ತತ್ವಾರ್ಥಮಂ ವಿಸ್ತರಿಸುವರು ಕೆಲರು"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೪,ಪ.೮)

ಹೀಗೆ ಆಡುತ್ತಾ, ಹಾಡುತ್ತಾ ಸಂಭ್ರಮಿಸುತ್ತಿದ್ದರೆಂದು ಇಬ್ಬರು ಕವಿಗಳು ಹೇಳಿದ್ದಾರೆ. ಹಾಗೆಯೇ ಬಸವಣ್ಣ ಭಂಡಾರಿಯಾಗಲು ಬಿಜ್ಜಳನ ಅರಮನೆಗೆ ಬರುವಾಗ ಸೋಮನಾಥ ಹೇಳುವ ನೃತ್ಯಗಾರರೆಂದರೆ ನಂದಿಕೋಲಿನವರು, ಕೋಲಾಟವಾಡುವವರು, ಹೊನ್ನಗಿರ್ಗಿಟೆ, ಕೇಳಿಕೆಗಳನ್ನಾಡುವ ಸೊನ್ನಲಿಗೆಪುರದವರು ಎಲ್ಲರೂ ಸೇರಿ ಜೋಕೆ ಪ್ರತಿ ಜೋಕೆಗಳಾಡುತ್ತಾ ಕುಣಿಯುತ್ತಿದ್ದರೆಂದು ಸೋಮನಾಥ ಹೇಳುತ್ತಾನೆ(ಪಾ.ಸೋ.೨-೧೩೪-೧೫೦) ಹಾಗೆಯೇ ಭೀಮಕವಿಯು ಕೂಡ ಈ ಸಂದರ್ಭದ ಸನ್ನಿವೇಶವನ್ನು ತುಂಬಾ ವಿಸ್ತಾರಗೊಳಿಸಿದ್ದಾನೆ.

"ಮೇಲೆ ಕೂಡಲಸಂಗಮೇಶನ
..ಮೇಳದವರ ರಾಗರಸದ ಸು
ಧಾಲಹರಿಯ ವಹಣಿಯೊಳೋಲಾಡುವ ಬಿಜ್ಜಳನ
ಓಲಗದವರ ಚಿತ್ರದಾಟದ
ತಾಳಧರಿಗಳ ಕಹಳೆಕಾಜಿರ
ನಾಲಿಸುವ ಕಂಸಾಳಗಿತ್ತಿಯರತ್ತಲೊತ್ತರಿಸಿ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೫,ಪ.೪೩)

ವೇಶ್ಯೆಯ ಮನೆಗೆ ಹೋದ ಮುಗ್ದಸಂಗಯ್ಯ ಅವಳ ಮನವನ್ನು ಪರಿವರ್ತಿಸಿ ಲಿಂಗ ಪೂಜೆಮಾಡುತ್ತಾನೆ. ಆಗ ಆ ವೇಶ್ಯೆ ತನ್ನ ಸಖಿಯರಿಗೆ ಹೇಳುತ್ತಾ ಅಕ್ಕಮಾದೇವಿ ನೀನು ಮದ್ದಲೆಗಳನ್ನು ತೆಗೆದುಕೋ, ಸಕಳವ್ವೆ, ಸಂಗವ್ವೆ ನೀವು ಕಹಳೆಯನ್ನು ಊದಿರಿ, ಪಿಳ್ಳಂಗೋವಿಯನೂದು ನೀ ಗುಡ್ಡವ್ವೆ, ಚಿಕ್ಕಪಾಳವ ಹಿಡಿ ಬಾಲರುದ್ರವೆ, ಚಟ್ಟನೆ ನರ್ತಿಸುವ ಶಿವದೇವಿ, ಮಹೇಶ್ವರಿ ವೀರಭದ್ರಲಿಂಗವ್ವೆ, ನೀವೆಲ್ಲ ಕೇಳಿಕೆಯಾಡಿ (ಪಾ.ಸೋ.೬.೩-೩೮೩-೯೩) ಎಂದು ಹೇಳುತ್ತಾ ಆ ಕಾಲದ ವಿವಿಧ ನೃತ್ಯದ ಮಾದರಿಯನ್ನು ಕವಿಗಳು ಇಲ್ಲಿ ನಿರೂಪಿಸಿದ್ದಾರೆ. ಈ ವಿವರಗಳು ಭೀಮಕವಿಯಲ್ಲಿ ಸಂಧಿ ೧೧, ಪದ್ಯ ೪೧ರಿಂದ ೪೬ರವರೆಗೆ ವಿವರಿಸಲ್ಪಟ್ಟಿದೆ. ಹಾಗೆಯೇ ನಾಟ್ಯಮಿತ್ತಂಡಿಯ ಕಥೆಯಲ್ಲಿ ನಾಟ್ಯಮಿತ್ತಂಡಿಯ ತಾಂಡವ ನೃತ್ಯವನ್ನು ಬಲು ಸೊಗಸಾಗಿ ಚಿತ್ರಿಸಿದ್ದಾರೆ. "ಬೊಬ್ಬೆಯ ಹಾಕುತಾರುತ ಗದ್ದಲಿಸಲು ಉಬ್ಬಿಯಾಳತಿಗೈಯೆ ತಾಳದ ಲಯಕೆ ಕ್ರೀಡೆಯಾಡಲು ಜತಿಗೀತೆಗಳೊಡನೆ ತಾಂಡವವಾಡುವ"(ಪಾ.ಸೋ.೩-೧೨೩೧)

ಕಲಕೇತ ಬೊಮ್ಮಯ್ಯ ಇವನೊಬ್ಬ ಹಾಸ್ಯಗಾರ. ಇವನು ನೃತ್ಯವನ್ನು ಮಾಡುತ್ತಾ ಪುರಜನರನ್ನು ರಂಜಿಸುತ್ತಿರುತ್ತಾನೆ. ಇವನ ವೇಷಭೂಷಣ ಮತ್ತು ನಾಟ್ಯವಾಡುವ ರೀತಿಯನ್ನು ಭೀಮಕವಿ ಹೇಳುವುದು ಹೀಗೆ.

"ಮುಂದಲೆಯ ಮುಡಿ ನಡುಗೆ ಭಸಿತವ
ನೊದಲಳಿಕದೊಳಿಟ್ಟು ಕಿವಿಯಲಿ

ಕೆಂದಳಿರನಳವಡಿಸಿ ಕಾಗಿನ ಕಪ್ಪಡವನುಟ್ಟು
ಅಂದುಗೆಯನೆಡದಡಿಯೊಳೊಡರಿಚಿ
ಒಂದು ಕಾಲಲಿ ಗೆಜ್ಜೆಯಿಂ ಬಿಗಿ
ದಂದದಿಂದೊಲೆದೊಲೆದು ನಡೆವುತ ಗಹಗಹಸಿ ನಗುತ"

"ಗಿಲಿಕೆ ಘಲಿಲೆಂದುಲಿಯೆ ದಕ್ಷನ
ತಲೆಯ ಕೋಡಿನ ತೆಱದಿ ತಗರಿನ
ಬಲಿದ ಕೊಂಬಂ ತನ್ನೆಡದ ಕೈಯಲಿ ಪಿಡಿದುಕೊಂಡು
ಬಲಿಹರಣ ಕಾರಣಕವತರಿಸಿ
ಬೆಳೆದವನ ನೆಟ್ಟೆಲುವಿನಂದದಿ
ಬೆಳಗುದುಗೆಯಂ ಬಲದ ಕರದಲಿ ಪಿಡಿದು ತಿರುಪುತ್ತ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೨೮,ಪ.೩,೪)

ನಾಟ್ಯವಾಡುತ್ತಿದ್ದನು ಎಂದು ಭೀಮಕವಿ ಹೇಳುತ್ತಾನೆ.

**ಆ. ನಾಟಕೋತ್ಸವಗಳು :**

ಬಸವಾದಿ ಶರಣರನೇಕರು ಆ ಕಾಲದಲ್ಲಿ ನಾಟಕಗಳನ್ನು ಆಡುತ್ತಿದ್ದರು ಎಂಬುದನ್ನು ಸೋಮನಾಥ ಮತ್ತು ಭೀಮಕವಿಯರು ಹೇಳುತ್ತಾರೆ. ನಾಟಕದ ಪ್ರಸ್ತಾಪವನ್ನು ಹೇಳುತ್ತಾ ಸೋಮನಾಥ ಹೀಗೆ ಹೇಳುತ್ತಾನೆ. ಅಲ್ಲದೆ ಸಾಂಗಭಾಷಾಂಗ ಕ್ರಿಯಾಂಗ ಪಟುನಾಟಕಗಳನ್ನು (ಪಾ.ಸೋ.ಚ.ಆ.,ಸಾಲು-೧೨೩೫) ನಟಿಸುತ್ತಿದ್ದರು ಎನ್ನುತ್ತಾನೆ. ಭೀಮಕವಿಯೂ ನಾಟಕವಾಡುತ್ತಿದ್ದರು ಎಂಬುದನ್ನು ಸೋಮನಾಥನಂತೆಯೇ "ಸರಸ ಭಾಷಾಂಗ ಕ್ರಿಯಾಂಗೋತ್ಕರದ ನಾಟಕ ಗದ್ಯಪದ್ಯವಿಸರ"(೨೪.೨೦) ಎಂದು ಹೇಳುತ್ತಾನೆ.

ಇಲ್ಲಿ 'ಭಾಷಾಂಗ' ಎಂದರೆ 'ಮಾತು', ಕ್ರಿಯಾಂಗ ಎಂದರೆ 'ನಟನೆ' ಎಂಬರ್ಥವಿದೆ. ಹಾಗಾಗಿ ನಾಟಕಗಳು ಸಂಭಾಷಣೆಗಳಿಂದ ಕೂಡಿರುತ್ತಿದ್ದವು. ಅದೂ ಗದ್ಯಪದ್ಯ ಮಿಶ್ರಿತವಾದ ಸಂಭಾಷಣೆಯಿಂದ ಕೂಡಿರುವಂತದ್ದು ಎಂದು ಕವಿಗಳು ಹೇಳಿದ್ದಾರೆ. ಜೊತೆಗೆ 'ಒನಕೆವಾಡು' ಎಂಬ ಪ್ರಾಚೀನ ಹಾಡುಗಬ್ಬವನ್ನು ಕೂಡ ಪರಿಚಯಿಸಿದ್ದಾರೆ.

'ಏಕಾಂತ ರಾಮಯ್ಯನ ಕಥೆ'ಯಲ್ಲಿ, ಜೈನರೊಂದಿಗೆ ವಾದಮಾಡುತ್ತ ರಾಮಯ್ಯ ತನ್ನ ಶಿರವನ್ನು ಕಡಿದುಕೊಳ್ಳುತ್ತೇನೆಂದು ಪ್ರತಿಜ್ಞೆಗೈದಿರುತ್ತಾನೆ. ಏಕಾಂತರಾಮಯ್ಯ ಬೀದಿಬೀದಿಗಳಲ್ಲಿ ವಿವಿಧ ನಾಟಕ ಮಹೋತ್ಸವಗಳನ್ನು ಆಡಿದ್ದನ್ನು(ಭೀ.೫೧-೪೧) ತಿಳಿಸುತ್ತಾನೆ. ಮೇಲಿನ ಸನ್ನಿವೇಶದಿಂದ ಆ ಕಾಲದಲ್ಲಿಯೂ ಬೀದಿಗಳಲ್ಲಿ ಬೀದಿನಾಟಕಗಳನ್ನು ಆಡುತ್ತಿದ್ದರು; ಆ ನಾಟಕ ಮೇಳಗಾರರು ತಾಳವನ್ನು ಹಿಡಿಯುತ್ತಿದ್ದರು ಎಂಬುದನ್ನು ಮನಗಾಣಬಹುದು.

ಬೊಂಬೆನಾಟಕಗಳನ್ನು ಆ ಕಾಲದಲ್ಲಿ ಆಡುತ್ತಿದ್ದರು ಎಂಬುದಕ್ಕೆ 'ಬಸವಪುರಾಣ'ಗಳಲ್ಲಿ ನಿದರ್ಶನವಿದೆ. ಇಂದು ಈ ಬೊಂಬೆಯಾಟ ಅಥವಾ ತೊಗಲುಗೊಂಬೆಯಾಟಗಳು ಕಾಲಾಂತರದಲ್ಲಿ ಕಣ್ಮರೆಯಾಗುತ್ತಿವೆ. 'ಬಸವಪುರಾಣ'ಗಳ ರಚನಾ ಕಾಲದಲ್ಲಿ ಈ ಬೊಂಬೆಯಾಟಗಳು ಹೆಚ್ಚು ಪ್ರಸಿದ್ಧಿಯನ್ನು ಪಡೆದಿದ್ದವು. ಸೋಮನಾಥನು ಮಡಿವಾಳ ಮಾಚಯ್ಯನ ಕಥೆಯಲ್ಲಿ "ಪ್ರಕಟಿತ ಕಪಟ ನಾಟಕ ಸೂತ್ರಗಳನು ವಿಕೃತಿ ಪ್ರಕೃತಿಯಾಡಿಸುವ ಸೂತ್ರಿಕನವ"(ಪಾ.ಸೋ.೪-೧೩೯-೪೦) ಎಂದೂ ಭೀಮಕವಿಯು

"ಚಿತ್ರಮಾಗಲು ಕಪಟನಾಟಕ
ಸೂತ್ರದಿಂ ವಿಕೃತಿ ಪ್ರಕೃತಿ ಚಾ
ರಿತ್ರಗತಿಗಳನಾಡಿಸುವ ತತ್‌ಸೂತ್ರಿಕನು ತಾನೆ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೨೦,ಪ.೩೧)

ಎಂದು ಹೇಳುವ ಮೂಲಕ ಬೊಂಬೆಗಳಿಗೆ ದಾರಗಳನ್ನು ಕಟ್ಟಿ ಆಡಿಸುವುದನ್ನು ಹೇಳಿದ್ದಾರೆ. ಹೀಗೆ 'ಬಸವಪುರಾಣ'ಗಳಲ್ಲಿ ನಾಟಕ ಮತ್ತು ಅದರ ಪ್ರದರ್ಶನದ ವಿವರಗಳು ನಿರೂಪಿತಗೊಂಡಿವೆ.

**ಇ. ಹಾಡುಗಾರಿಕೆ :**

ವಿವಿಧ ಜಾನಪದ ಗೀತೆಗಳು, ಶಿವಭಕ್ತಿ ಗೀತೆಗಳನ್ನು ಆ ಕಾಲದಲ್ಲಿ ಹಾಡುತ್ತಿದ್ದರು. ಹಾಡುವುದಕ್ಕಾಗಿಯೇ ವಿಶೇಷ ಹಾಡುಗಾರರು, ಹಾಡುಗಾರ್ತಿಯರು ಇರುತ್ತಿದ್ದರೆಂಬುದು ಈ ಪುರಾಣಗಳಿಂದ ತಿಳಿಯುತ್ತದೆ. ಹಾಗೆಯೇ ಗದ್ಯ ಮತ್ತು ಪದ್ಯ ಕಾವ್ಯಗಳನ್ನು ವಾಚಿಸುವ ಗಮಕಿಗಳೂ ಇದ್ದರೆಂಬುದನ್ನು ಸೋಮನಾಥ ತಿಳಿಸುತ್ತಾನೆ.(ಪಾ.ಸೋ.ಚ.ಆ.,ಸಾಲು-೧೪೨೧-೨೫) ಹಾಗೆಯೇ ಬಸವಣ್ಣನ ಮದುವೆಯ ಸಂದರ್ಭದಲ್ಲಿ ಹಾಡುತ್ತಿದ್ದ ಹಾಡುಗಳನ್ನು ಭೀಮಕವಿ ಹೇಳುತ್ತಾ "ಆನಂದಗೀತೆ, ಶಂಕರಗೀತೆ, ಶಿವನ ಮಹಿಮೆಯನ್ನು ಕುರಿತು ಹಾಡುವ ಹಾಡುಗಳನ್ನು ಹಾಡುತ್ತಿದ್ದರು ಎನ್ನುತ್ತಾನೆ. ಜೊತೆಗೆ ಅಡಿಗಡಿಗೆ ತಾಳವ ಹಾಕುತ್ತಾ ಭೂಮಿಗೆ ಸಾಷ್ಟಾಂಗವಿಡುತ ವಿವಿಧ ರಾಗಗಳಲ್ಲಿ ಮಹಾಭಕ್ತರ ಚರಿತೆಗಳನ್ನು ನಾದಭರಿತವಾಗಿ ತಿರುಪಾಡುಗಳಲ್ಲಿ ಹಾಡುತ್ತಿದ್ದರು(ಪಾ.ಸೋ.೪-೧೭೧೧-೨೦) ಎಂದು ಸೋಮನಾಥ ಹೇಳುತ್ತಾನೆ.

**ಈ. ಸಂಗೀತ :**

ಪಾಲ್ಕುರಿಕೆ ಸೋಮನಾಥ ಮತ್ತು ಭೀಮಕವಿ ಇಬ್ಬರೂ ಸಂಗೀತ ಪ್ರಿಯರು. ಇವರ ಸಂಗೀತದ ವಿವರಗಳು, ವಾದ್ಯ, ರಾಗಗಳ ಪರಿಚಯ ನೀಡಿರುವುದನ್ನು ಗಮನಿಸಿದರೆ ಇವರಿಗೆ ಸಂಗೀತದಲ್ಲಿ ವಿಶೇಷ ಆಸಕ್ತಿ ಹೊಂದಿ ಇದರಲ್ಲಿ ತುಂಬಾ ಪರಿಣಿತಿಯನ್ನು ಪಡೆದಿದ್ದರು ಎನ್ನಿಸುತ್ತದೆ.

ಭೀಮಕವಿಯು ಸ, ರಿ, ಗ, ಮ, ಪ, ದ, ನಿ ಎಂಬ ಸಪ್ತಸ್ವರ ನಿಯಮದಿಂ ಪಾಡೆ(೯-೩೨) ಎನ್ನುತ್ತಾ ಸಪ್ತ ಸ್ವರಗಳನ್ನು ಪರಿಚಯಿಸುತ್ತಾನೆ. ಸಕಲೇಶ ಮಾದರಸನು ಬತ್ತೀಸಾದಿ

ರಾಗಗಳಿಗೆ(೩೨ ರಾಗಗಳಿಗೆ) ಒಳಪಡುವಂತೆ ದಂಡಿಗೆಯನ್ನು ರಚಿಸಿದನೆಂದು ಸೋಮನಾಥ(೩-೧೩೧೭) ಭೀಮಕವಿ(೧೮-೬) ಹೇಳುತ್ತಾರೆ. ವೀಣೆಯಲ್ಲಿನ ವಿವಿಧ ರೀತಿಗಳನ್ನು ಸೋಮನಾಥ ಉಲ್ಲೇಖಿಸಿರುವುದು ಹೀಗೆ; 'ರಾಗವನು ವೀಣೆಯಲ್ಲಿ ಧ್ವನಿಸುವ ರಾವಣಹಸ್ತವ ಬ್ರಹ್ಮವೀಣೆಯನು ಲಾವಣ್ಯವೀಣೆ, ಕೈಲಾಸ ವೀಣೆಯ, ಆಕಾಶವೀಣೆ, ಪಿನಾಕವೀಣೆಯ, ವಿವೇಕಿಸಿ ಸಾರಂಗವೀಣೆ, ಗೌರಿ ವೀಣೆಯು, ಕಿನ್ನರ ವೀಣೆ'(ತೃ.ಆ.,ಸಾಲು-೩-೧೩೨೦)

ಮುಂದುವರೆದು ಸಪ್ತಸ್ವರಗಳನ್ನು ನುಡಿಸುವ ಶೃತಿಗಳಿಪ್ಪತ್ತೆರಡು, ನಾರಾಟಕಾವುಳವೆಂಬ ಧ್ವನಿ, ಗಮಕ ಸಪ್ತಕ, ಮಂದ್ರಮಧ್ಯತಾರಗಳ ವಿವರಗಳನ್ನು ನೀಡುತ್ತಾನೆ. ಸೋಮನಾಥ ವಿವಿಧ ರಾಜ್ಯಗಳ ರಾಗಗಳನ್ನು ಪರಿಚಯಿಸುತ್ತಾನೆ.(ತೃ.ಆ.ಸಾ.೧೮೮೧-೯೦) ಭೀಮಕವಿಯೂ ಕೂಡ ಅವೇ ರಾಜ್ಯಗಳ ರಾಗಗಳನ್ನು ಪರಿಚಯಿಸುವುದು ಹೀಗೆ.

ಧರೆಯೊಳಿವು ಮೊದಲಾಗಿ ಸೊಗಸುವ
ಹಿರಿಯ ರಾಗಂಗಳು ಮೆಱೆವ ಮಲ
ಹರಿ ಲಳಿತೆ ಧನ್ನಾಸಿ ಮಂಗಳಕೌಸಿ ದೇಶಾಕ್ಷಿ
ಕುರುಜೆ ಗುಜ್ಜರಿ ದೇಶಿ ವೇಳಾ
ವುರಿಯು ತೊಂಡಿಯು ಚಿತ್ರವೇಳಾ
ವುರಿಯು ಕಂಭಾವರಿಯು ಮಧುಮಾಧವಿಯು ಕಾಂಬೋಜಿ

(ಎಸ್.ವಿದ್ಯಾಶಂಕರ(ಸಂ),ಸಂ-೧೮.ಪ-೧೬)

ಮಾಳವಶ್ರೀ ಮೇಘರಂಜಿ ವ
ರಾಳಿ ಸಿಂಧುವರಾಳಿ ನಾಗವ
ರಾಳಿ ದೇವಕ್ರಿಯೆಯು ಸಾಳಗ ನಾಟಿ ಭೂಪಾಳಿ
ಗೌಳ ಪಂಚಕ ಮುಂಬಹುಳಿ ಬಂ
ಗಾಳಮುಂ ಗುಂಡಾಕ್ರಿಯೆಯು ಮೇಣ್
ಓಳಿಯಿಂ ಫಳಮಂಜರಿಯು ರಾಮಾಕ್ರಿಯೆಗಳೆಲ್ಲ

(ಎಸ್.ವಿದ್ಯಾಶಂಕರ(ಸಂ),ಸಂ-೧೮.ಪ-೧೭)

ಹೀಗೆ ಇವುಗಳಲ್ಲಿ ಸ್ತ್ರೀರಾಗಗಳು ಮತ್ತು ಪುರುಷ ರಾಗಗಳನ್ನು ಕುರಿತು ಉಲ್ಲೇಖಿಸುತ್ತಾನೆ.

ಸಾಂಸ್ಕೃತಿಕ ಸಂಗತಿಗಳಲ್ಲಿ ಈ ಅಧ್ಯಾಯದ ಆರಂಭದಿಂದ ಅಂದರೆ ಸಾಮಾಜಿಕ ಸಂಗತಿಗಳು, ಧಾರ್ಮಿಕ ಸಂಗತಿಗಳು, ಆರ್ಥಿಕ ಸಂಗತಿಗಳು, ರಾಜಕೀಯ ಸಂಗತಿಗಳು ಮತ್ತು ವಿನೋದಾವಳಿಗಳ ಈ ಎಲ್ಲಾ ಸಂಗತಿಗಳು 'ಬಸವಪುರಾಣ'ಗಳ ರಚನಾ ಕಾಲದ ಜನ ಜೀವನದ ಒಟ್ಟು ಸಂಗತಿಗಳಾಗಿವೆ. ಈ ಎಲ್ಲಾ ಸಂಗತಿಗಳನ್ನು ಗಮನಿಸಿದಾಗ ಹಿಂದಿನ ಕಾಲದಲ್ಲಿಯೂ ಇಂದಿನಂತೆ ಎಲ್ಲಾ ಸಕಲ ಭಾಗ್ಯಗಳೂ ಇದ್ದವು. ಅಂದಿನ ಸಾಮಾಜಿಕ ಬದುಕು ಇಂದಿನಂತೆಯೇ ಇತ್ತು

ಎಂಬುದು ತಿಳಿಯುತ್ತದೆ. ಜೊತೆಗೆ ಆ ಕಾಲದ ಶರಣರ ಬದುಕು ಇಂದಿನ ನಾಗರಿಕರಿಗೆ ಮಾರ್ಗದರ್ಶನದಂತಿದೆ. ಅವರು ತಾವು ನೆಚ್ಚಿಕೊಂಡ ಕಾಯಕಕ್ಕೆ ತಮ್ಮನ್ನು ಸಂಪೂರ್ಣವಾಗಿ ಒಪ್ಪಿಸಿಕೊಂಡು ದುಡಿಯುತ್ತಿದ್ದರು. ಶಿವಶರಣರ ಹಿತದೃಷ್ಟಿಯೇ ಅವರ ಪರಮಧ್ಯೇಯವಾಗಿತ್ತು. ಈ ಹಿನ್ನಲೆಯಲ್ಲಿ ಇಬ್ಬರೂ ಕವಿಗಳು ಶಿವಧರ್ಮದ ಅಂಶಗಳನ್ನು ಪ್ರತಿಯೊಂದು ಆಶ್ವಾಸ, ಸಂಧಿಗಳಲ್ಲಿ ಹೇಳಿದ್ದಾರೆ. ಇಲ್ಲಿನ ಸಾಂಸ್ಕೃತಿಕ ಬದುಕು ಕೂಡ ಶಿವಧರ್ಮದ ಹಿನ್ನೆಲೆಯ ಬದುಕಾಗಿ ಚಿತ್ರಣಗೊಂಡಿದೆ. ಇಲ್ಲಿ ಬರುವ ಪಾತ್ರಗಳು, ಸನ್ನಿವೇಶಗಳು ಕೂಡ ಶಿವಮಯವಾಗಿದೆ. ಪಾತ್ರಗಳೆಂದರೆ ಶಿವಭಕ್ತರು, ಸನ್ನಿವೇಶಗಳೆಂದರೆ ಶಿವಾಲಯ, ಶಿವಗೋಷ್ಠಿ, ಶಿವಭಕ್ತರ ಮನೆಗಳು ಈ ಆವರಣಗಳಲ್ಲಿಯೇ ಇಡೀ ಪುರಾಣಗಳು ಚಿತ್ರಣಗೊಂಡಿವೆ. ಹಾಗಾಗಿ ಇಲ್ಲಿ ಬರುವ ಎಲ್ಲಾ ಸಂಗತಿಗಳು ವೀರಶೈವ ಧರ್ಮ ಮತ್ತು ವೀರಶೈವ ನೀತಿಗನುಗುಣವಾಗಿ ರಚನೆಗೊಂಡಿರುವುದನ್ನು ಬಸವಪುರಾಣಗಳ ಈ ಸಾಂಸ್ಕೃತಿಕ ಅಧ್ಯಯನದಿಂದ ತಿಳಿಯಬಹುದಾಗಿದೆ.

# ಅಧ್ಯಾಯ – ೬

# ಕನ್ನಡ–ತೆಲುಗು 'ಬಸವಪುರಾಣ'ಗಳಲ್ಲಿನ ಕಾವ್ಯಸೌಂದರ್ಯ

# ಅಧ್ಯಾಯ – ಆರು

## ಕನ್ನಡ–ತೆಲುಗು 'ಬಸವಪುರಾಣ'ಗಳಲ್ಲಿನ ಕಾವ್ಯಸೌಂದರ್ಯ

ಯಾವುದೇ ಒಂದು ಕೃತಿಯು ಉತ್ಕೃಷ್ಟವಾದ ಕಾವ್ಯವಾಗಬೇಕೆಂದರೆ ಅದರ ಸೌಂದರ್ಯ ಮುಖ್ಯವಾಗುತ್ತದೆ. ಕಾವ್ಯ ರಚನೆಗೆ ಆಯ್ಕೆಮಾಡಿಕೊಂಡ ಛಂದಸ್ಸು, ಆ ಛಂದೋಬಂಧದಲ್ಲಿ ಕವಿಯ ನೈಜ ಅಥವಾ ಕಲ್ಪನೆಯ ಕಥೆಯನ್ನು ಅಡಕ ಮಾಡುವಾಗ ಬಳಸುವ ವರ್ಣನೆಗಳು, ಅಲಂಕಾರಗಳು, ರಸಗಳು ಒಂದೊಕ್ಕೊಂದು ಬೆಸೆದು ಕಟ್ಟಿದಾಗ ಆ ಕಾವ್ಯ ಅತ್ಯಂತ ಸುಂದರ, ಸುಭಗತೆಯಿಂದ ಕೂಡಿರುತ್ತದೆ. ಕಥೆಯ ವಸ್ತುವಿಷಯವನ್ನು ಕುರಿತು ಹೇಳುವಾಗ ಅಲಂಕಾರಗಳನ್ನು ತುಂಬಿ ಓದುಗರ ಮನಸ್ಸನ್ನು ಅಹ್ಲಾದಗೊಳಿಸುವಂತೆ ರಚನೆ ಮಾಡಿದರೆ ಆ ಕಾವ್ಯ ಅತ್ಯಂತ ಪರಿಣಾಮಕಾರಿಯಾಗಿರುತ್ತದೆ. ಕವಿಗಳು ತಮ್ಮ ಕಥೆಗೆ ಯಾವ ಛಂದಸ್ಸು ಹೆಚ್ಚು ಸೂಕ್ತವಾಗುತ್ತದೆ ಎಂಬುದನ್ನು ಗಮನಿಸಿಯೇ ಆಯ್ಕೆಮಾಡಿಕೊಂಡಿರುತ್ತಾರೆ. ತಾವು ಆಯ್ಕೆಮಾಡಿದ ಛಂದಸ್ಸಿನಲ್ಲಿ ತಮ್ಮ ಕಾವ್ಯ ಪ್ರೌಢಿಮೆ, ಪಾಂಡಿತ್ಯಗಳನ್ನು ತುಂಬಿ ರಸವತ್ತಾದ ಕಾವ್ಯವನ್ನು ರೂಪುಗೊಳಿಸುತ್ತಾರೆ. ಮೀಮಾಂಸಕನಾದ ಭಾಮಹನು ಹೇಳುವಂತೆ ಹೆಣ್ಣು ಅಲಂಕಾರಗಳಿಲ್ಲದೆ ಹೇಗೆ ಶೋಭಿಸುವುದಿಲ್ಲವೋ ಕಾವ್ಯವೂ ಹಾಗೆಯೇ ವರ್ಣನೆಗಳು, ಅಲಂಕಾರ, ರಸಗಳಿಲ್ಲದೆ ಶೋಭಿಸುವುದಿಲ್ಲ ಎಂಬುದು ತಿಳಿದ ಸಂಗತಿ. ಹಾಗಾಗಿ ಯಾವುದೇ ಒಂದು ಕಾವ್ಯದ ರಚನೆಗೆ ಛಂದಸ್ಸು, ವರ್ಣನೆಗಳು, ಅಲಂಕಾರಗಳು, ರಸ ಧ್ವನಿ ಮೊದಲಾದ ಅಂಶಗಳು ಅತ್ಯಂತ ಪ್ರಮುಖ ಸಾಧನಗಳಾಗಿವೆ. ಈ ಹಿನ್ನೆಲೆಯಲ್ಲಿ 'ಬಸವಪುರಾಣ'ಗಳನ್ನು ರಚನೆ ಮಾಡಿದ ಪಾಲ್ಕುರಿಕೆ ಸೋಮನಾಥ ಮತ್ತು ಭೀಮಕವಿಯರು ತಮ್ಮ ಪುರಾಣ ರಚನೆಗೆ ಆಯ್ದುಕೊಂಡ ಛಂದಸ್ಸು, ಬಳಕೆ ಮಾಡಿರುವ ವರ್ಣನೆಗಳು, ಅಲಂಕಾರಗಳು, ರಸಗಳನ್ನು ಬಳಸಿಕೊಂಡು ಹೇಗೆ ತಮ್ಮ ಕಾವ್ಯಶಿಲ್ಪವನ್ನು ಕಟ್ಟಿದ್ದಾರೆ ಎಂಬುದನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

### ೬.೧. ಛಂದಸ್ಸು :

**ದೇಶಿ ಚಿಂತನೆ :**

ಮಾರ್ಗ (ಚಂಪೂ) ಸಾಹಿತ್ಯವು ಅತ್ಯಂತ ಪ್ರಬಲವಾಗಿ ಬೆಳೆಯುತ್ತಿದ್ದಂತಹ ಸಂದರ್ಭದಲ್ಲಿ ಪಾಲ್ಕುರಿಕೆ ಸೋಮನಾಥನು ಪುರಾಣ ರಚನೆಯನ್ನು ಕೈಗೊಂಡಿದ್ದನು. ಈ ಸಂದರ್ಭದಲ್ಲಿ ಅವನು ತಾನು ಆಯ್ದುಕೊಂಡ ವಸ್ತುವಿಷಯಕ್ಕೆ ಚಂಪೂ ಪ್ರಕಾರವು ಸಮಂಜಸವಾದುದಲ್ಲ ಎಂದು ಮನಗೊಂಡು ದೇಸಿ ಛಂದಿಸ್ಸಿನಲ್ಲಿ ಪುರಾಣ ರಚನೆ ಮಾಡಬೇಕೆಂದು ನಿರ್ಧರಿಸುತ್ತಾನೆ. ಕಾರಣ ತಾನು ರಚನೆ ಮಾಡಲು ಆಯ್ದುಕೊಂಡ ವಸ್ತು ಸಾಮಾನ್ಯ ವ್ಯಕ್ತಿಗಳಾಗಿದ್ದುದರಿಂದ ಈ ಪುರಾಣವನ್ನು ಸಾಮಾನ್ಯ ಜನರೂ ಓದಿ ಅರ್ಥಮಾಡಿಕೊಳ್ಳಬೇಕು. ಪ್ರತಿಯೊಬ್ಬರಿಗೂ ಬಸವಣ್ಣನಾದಿಯಾಗಿ ಸಕಲ ಶರಣರ ಚರಿತ್ರೆಯನ್ನು ತಿಳಿಯಬೇಕು ಎಂಬುದು ಅವನ ಆಶಯವಾಗಿತ್ತು. ಈ ಹಿನ್ನೆಲೆಯಲ್ಲಿ ಬಹು ಹಿಂದಿನಿಂದಲೂ ಕವಿಗಳಿಂದ ವಿದ್ವಾಂಸರಿಂದ 'ಮುದಿಸೂಳೆ'ಯೆಂದು ತಿರಸ್ಕರಿಸಲ್ಪಟ್ಟ ದೇಸಿ ಛಂದವಾದ ದ್ವಿಪದಿಯನ್ನು ಆಯ್ದುಕೊಳ್ಳುತ್ತಾನೆ. ತನ್ನ ಇಡೀ ಪುರಾಣವನ್ನು ದ್ವಿಪದಿಯಲ್ಲಿಯೇ ರಚಿಸುತ್ತಾನೆ. ಹನ್ನೆರಡನೆಯ ಶತಮಾನದ ಭವ್ಯ ಪರಂಪರೆಯನ್ನು ಆ ಕಾಲದ ಸಾಮಾಜಿಕ, ಆರ್ಥಿಕ, ಧಾರ್ಮಿಕ, ರಾಜಕೀಯ ಪರಿಸ್ಥಿತಿಗಳನ್ನು ಧರ್ಮ ಧರ್ಮಗಳ ನಡುವೆ ನಡೆದ ಧಾರ್ಮಿಕ ಸಂಘರ್ಷಗಳನ್ನು ದೇಸಿ ಚಿಂತನೆ, ದೇಸಿ ಮಾತುಗಳ ಮೂಲಕ ಕಟ್ಟಿಕೊಡುತ್ತಾನೆ. ಸಂಸ್ಕೃತ ಭೂಯಿಷ್ಠ ಭಾಷೆಯನ್ನು ಸಂಪೂರ್ಣವಾಗಿ ತಿರಸ್ಕರಿಸಿದ್ದರೂ ಅಲ್ಲಲ್ಲಿ ಕೆಲವು ಪದಗಳು ಸೇರಿರುವುದುಂಟು. ಆದರೆ ಹೆಚ್ಚು ಕಾವ್ಯ ರಚನೆಗೊಂಡಿರುವುದು ದೇಸಿಯ ನೆಲೆಯಲ್ಲಿ. ಸಂದರ್ಭ, ಸನ್ನಿವೇಶಗಳು, ಸಂಪ್ರದಾಯಗಳು ಪ್ರತಿಯೊಂದನ್ನು ದೇಸಿ ಚಿಂತನೆಯಲ್ಲಿ ಕಟ್ಟಿದ್ದಾನೆ ಪಾಲ್ಕುರಿಕೆ ಸೋಮನಾಥ. ಇಲ್ಲಿ ಬಳಸಿರುವ ವರ್ಣನೆಗಳಲ್ಲಿ ಅಲಂಕಾರಗಳಲ್ಲಿ ಸಾಕಷ್ಟು ದೇಸಿ ಸೊಗಡಿನ ಮಾತು-ಕತೆಗಳೇ ಹೆಚ್ಚಾಗಿರುವುದನ್ನು ಕಾಣುತ್ತೇವೆ.

ಭೀಮಕವಿಯೂ ಇದಕ್ಕೆ ಹೊರತಾಗಿಲ್ಲ. ಹನೆರಡನೆಯ ಶತಮಾನದಲ್ಲಿ ಬಾಳಿದ ಬಸವಣ್ಣ ಮತ್ತು ಶರಣ ಸಮುದಾಯವು ಮಾರ್ಗ ಪದ್ಧತಿಯಿಂದ ದೂರವಾಗಿದ್ದರು. ವಚನಕಾರರು ಪಂಪಾದಿಗಳ ಚಂಪೂ ಶೈಲಿಯ ಪ್ರಕಾರವನ್ನು ತಿರಸ್ಕರಿಸಿ ಸರಳವಾದ ಭಾಷೆಯಲ್ಲಿ ವಚನಗಳನ್ನು ರಚಿಸಿದ್ದರು. ಇದರಿಂದ ಪ್ರೇರಣೆಗೊಂಡ ಹರಿಹರ, ರಾಘವಾಂಕ ಮುಂತಾದ ಕೆಲವು ಕವಿಗಳು ಕೂಡ ಪಂಡಿತರ ಪರಮಾಪ್ತವಾದ ಚಂಪೂವನ್ನು ತಿರಸ್ಕರಿಸಿ ದೇಸಿ ನೆಲೆಯಲ್ಲಿ ಕಾವ್ಯಗಳನ್ನು ರಚನೆ ಮಾಡಿದ್ದರು. ರಗಳೆ, ಷಟ್ಪದಿಗಳು ಈ ಹಿನ್ನೆಲೆಯಲ್ಲಿ ಬೆಳಕಿಗೆ ಬಂದವು. ಇಂತಹ ಸಂದರ್ಭದಲ್ಲಿ ಪುರಾಣ ರಚನೆಗೆ ತೊಡಗಿದ ಭೀಮಕವಿಯೂ ಸಹ ದೇಸಿ ಛಂದೋಬಂಧಗಳಲ್ಲಿ ಪುರಾಣ ರಚನೆ ಮಾಡಬೇಕೆಂದು ನಿರ್ಧರಿಸುತ್ತಾನೆ.

ತಾನು ರಚಿಸ ಹೊರಟ ಪುರಾಣವು ತೆಲುಗಿನಲ್ಲಿದ್ದು, ಈಗಾಗಲೇ ಸಿದ್ಧವಾಗಿದ್ದ ಪುರಾಣ. ಹಾಗಾಗಿ ಸಹಜವಾಗಿಯೇ ಅದರ ರೂಪ, ಬಂಧ, ಶೈಲಿಗಳನ್ನು ತಿಳಿದು ಅದರಂತೆಯೇ ತಾನೂ

ಕೂಡ ದೇಸಿ ಹಿನ್ನೆಲೆಯಲ್ಲಿಯೇ ಕಾವ್ಯ ರಚನೆ ಮಾಡಬೇಕೆಂದು ನಿರ್ಧರಿಸುತ್ತಾನೆ. ಅದಕ್ಕಾಗಿ ಅವನು ಆರಿಸಿಕೊಂಡದ್ದು ಷಟ್ಪದಿ. ಅದರಲ್ಲೂ ಓದಲು, ವಾಚಿಸಲು ಅತ್ಯಂತ ಸುಭಗತೆಯಿಂದ ಕೂಡಿದ ಭಾಮಿನಿಯನ್ನು ಇದೇ ಮೊದಲಬಾರಿಗೆ ಇಡೀ ಕಾವ್ಯವನ್ನು ಸಂಪೂರ್ಣವಾಗಿ ಒಂದೇ (ಭಾಮಿನಿ) ಷಟ್ಪದಿಯಲ್ಲಿ ರಚನೆ ಮಾಡಿದ ಮೊದಲಿಗನಾಗಿ ಭೀಮಕವಿ ಕನ್ನಡ ಸಾಹಿತ್ಯದಲ್ಲಿ ಹಿರಿಮೆ ಗಳಿಸಿದ್ದಾನೆ.

ಹೀಗೆ ಇಬ್ಬರೂ ಕವಿಗಳು ತಮ್ಮ ತಮ್ಮ ಭಾಷೆಗಳಲ್ಲಿ ಬಸವಣ್ಣ ಮತ್ತು ಇತರೆ ಶಿವಶರಣರ ಬದುಕನ್ನು ದೇಸಿ ನೆಲೆಯಲ್ಲಿ ಚಿಂತಿಸಿ ಅದೇ ವಿಧದಲ್ಲಿ ತಮ್ಮ ಪುರಾಣಗಳನ್ನು ರಚನೆ ಮಾಡಿದ್ದಾರೆ.

**ದ್ವಿಪದಿ (ಜಾನು ತೆಲುಗು) :**

ಪಾಲ್ಕುರಿಕೆ ಸೋಮನಾಥ ತಾನು ಉದ್ದೇಶಿಸಿದ ಕಾವ್ಯ ನಿಯಮಗಳನ್ನು ಕಾವ್ಯ ಛಂದಸ್ಸನ್ನು ಹೇಳುವುದು ಹೀಗೆ

ನುರುತರ ಗದ್ಯ ಪದ್ಯೋಕ್ತುಲಕಂಟೆ
ಸರಸಮ್ಮೈ ಪರಂಗಿನ ಜಾನುಂದೆನುಂಗು
ಚರ್ಚಿಂಪಂಗಾ ಸರ್ವಸಾಮಾನ್ಯ ಮಗುಟಂ
ಗೂರ್ಚೆದ ದ್ವಿಪದಲು ಗೋರ್ಕಿ ದೈವಾಱಂ
ದೆಲುಂಗುಮಾಟ ಲನಂಗವಲದು; ವೇದಮಲು
ಕೊಲಂದಿಯ ಕಾಂಜೂಡುಂಡಿಲ ನೆಟ್ಟುಲನಿನಂ

(ಗೂ.ವೆಂ.ಸು.(ಸಂ),ಬ.ಪು.ಪ್ರ.ಆ.ಸಾ.೧೬೫-೧೭೦)

(ಕಠಿಣವಾದ ಗದ್ಯ ಪದ್ಯೋಕ್ತಿಗಿಂತ (ಚಂಪೂ) ಸರಸವಾಗಿ ಮೆರೆಯುವ ಜಾನು ತೆಲಗು ಇದು ವಿಚಾರಿಸಲು ಸರ್ವ ಸಮ್ಮತವಾಗಿ, ಸಾಮಾನ್ಯವೆನಿಸಿದ ದ್ವಿಪದಿಗಳಾಗಿದ್ದು, ಇವು ಕೇವಲ ತೆಲುಗು ಮಾತುಗಳೆನಬಹುದೇ? ವೇದಗಳಿಗೆ ಸಮಾನವಾಗಿ ನೋಡಬೇಕು)

ಅತ್ಯಂತ ಕಠಿಣವಾಗಿರುವ ಪಾಂಡಿತ್ಯ ಪ್ರೌಢಿಮೆಯನ್ನು ಒಳಗೊಂಡಿರುವ ಚಂಪೂವಿಗಿಂತ (ಗದ್ಯಪದ್ಯೋಕ್ತಿಗಿಂತ) ಸರಸವಾಗಿ, ಸುಲಲಿತವಾಗಿ ಮೆರೆಯುವಂತಹ ಜಾನು ತೆಲುಗುವನ್ನು ಆಯ್ದುಕೊಂಡಿದ್ದೇನೆಂದು ಕವಿ ಹೇಳುತ್ತಾನೆ. 'ಜಾನು ತೆಲುಗು' ಎಂದರೆ ನಮ್ಮ ಕನ್ನಡದ 'ಜಾಣ್ನುಡಿ' ಎಂದು ನಾವು ಕರೆಯುವ ದೇಸಿ ನುಡಿ ಎಂಬ ಅರ್ಥವಿದೆ. ಇಂತಹ ಸುಲಲಿತವಾದ ಛಂದದಲ್ಲಿ ಓದುಗರ ಮನಸ್ಸಿಗೆ ಹಿತವೆಸಗುವಂತಹ ಪದಗಳಿಂದ, ವರ್ಣನೆಗಳಿಂದ ತಾನು ಕಾವ್ಯವನ್ನು ರಚಿಸಿದ್ದೇನೆಂದು ಸೋಮನಾಥ ಹೇಳಿದ್ದಾನೆ. ತಾನು ಬರೆಯುತ್ತಿರುವುದು ಪಂಡಿತ, ಪಾಮರರನ್ನು ಒಪ್ಪಿಸುವುದಕ್ಕಲ್ಲ. ಬದಲಾಗಿ ಒಂದು ಕಾಲದ ಸಾಮಾಜಿಕ ಕ್ರಾಂತಿಯನ್ನು ಪಸರಿಸಿದ ಮಹಾನ್ ವ್ಯಕ್ತಿಗಳ ಜೀವನ ದರ್ಶನವನ್ನು ನೀಡಬೇಕಾಗಿರುವುದು ಸಾಮಾನ್ಯ

ಪ್ರಜೆಗಳಿಗಾಗಿ, ಅವರ ಒಳಿತಿಗಾಗಿ ಎಂಬುದು ಸೋಮನಾಥನ ನಿಲುವು. ಈ ಬಂಧವನ್ನು ಒಪ್ಪದೇ ಮೊದಲಿಸುವಂತಹವರಿಗೆ ಹೇಳುವ ಮಾತುಗಳು ಗಮನಾರ್ಹವಾದುದು. ಇಲ್ಲಿರುವುದು ಕೇವಲ ತೆಲುಗು ಪದಗಳೆಂದು ಭಾವಿಸಬೇಡಿ. ಅದು ವೇದಕ್ಕೆ ಸಮನಾದ ಭಾಷೆ ಎಂಬುದನ್ನು ಒತ್ತಿ ಹೇಳುತ್ತಾನೆ ಸೋಮನಾಥ.

ಪ್ರಾಚೀನ ಕಾಲದಿಂದಲೂ ಪಂಡಿತರಿಂದ ತಿರಸ್ಕರಿಸಲ್ಪಟ್ಟ ಈ ಗೇಯ ರಚನೆಯನ್ನು ಸರ್ವಜನಾದರಣೆಯಾಗುವ ಹಾಗೆ ಮಾಡಿ, ಸಾರಸ್ವತ ಲೋಕಕ್ಕೆ ಗೌರವ ತಂದುಕೊಟ್ಟು ಕಾವ್ಯ ರಚನೆ ಮಾಡಿದ ಮೊದಲಿಗರು ಪಾಲ್ಕುರಿಕೆ ಸೋಮನಾಥ. ದ್ವಿಪದ ಕವಿತ್ವಕ್ಕೆ ಈತನೇ ಆದಿಕವಿ. ಈ ದ್ವಿಪದಿ ಪ್ರಕಾರವು ಗೇಯ ಪ್ರಧಾನವಾಗಿ ಹಾಡಲು ಸುಲಭವಾಗುತ್ತದೆ. ಹಿಂದೆ ಇದನ್ನು ಜಾನಪದ ಹಾಡುಗಳಲ್ಲಿ ಬಳಸುತ್ತಿದ್ದುದ್ದನ್ನು ಮನಗೊಂಡು ಸೋಮನಾಥನು ಈ ಪ್ರಕಾರವನ್ನು ಆಯ್ದುಕೊಳ್ಳುತ್ತಾನೆ. ಹಾಡಿನ ರೂಪದಲ್ಲಿದ್ದರೆ ಸುಲಭವಾಗಿ ಜನರಿಗೆ ಅರ್ಥವಾಗುತ್ತದೆ ಮತ್ತು ಬಹುಕಾಲ ಅವರ ಮನದಲ್ಲಿ ಉಳಿಯುತ್ತದೆ ಎಂಬುದು ಸೋಮನಾಥನ ನಿಲುವು. ಜೊತೆಗೆ ಹಾಡಿನ ರೂಪದಲ್ಲಿ ಶರಣರ ಕಥೆಗಳನ್ನು ನಿರೂಪಿಸಿದರೆ ಆ ಮೂಲಕ ಶೈವ ಮತ ಪ್ರಸಾರವನ್ನು ಹೆಚ್ಚು ಪರಿಣಾಮಕಾರಿಯಾಗಿ ಮಾಡಬಹುದು ಎಂಬುದು ಮತ್ತೊಂದು ಆಶಯವೂ ಇತ್ತು. ಪಾಲ್ಕುರಿಕೆ ಸೋಮನಾಥನ ಪುರಾಣವನ್ನು ಗಮನಿಸಿದಾಗ ಇದರಲ್ಲಿನ ದೇಸಿಯತೆ, ದೇಸಿ ಛಂದಸ್ಸು, ದೇಸಿ ವರ್ಣನೆಗಳು, ದೇಸಿ ರಚನಾ ವಿಧಾನ, ಅಲಂಕಾರಗಳಲ್ಲಿನ ದೇಸಿಯತೆ, ದೇಸಿಯ ಜೀವನ ಚಿತ್ರಣ ಮುಂತಾದ ಅಂಶಗಳು ಓದುಗರ ಕಣ್ಣಿಗೆ ಕಟ್ಟುವಂತೆ ರಚನೆಗೊಂಡಿವೆ. ಸೋಮನಾಥನ ದೇಸಿ ವರ್ಣನೆಗಳು ಮುಖ್ಯ ಭಾಗವಾಗಿವೆ. ಲಾಕ್ಷಣಿಕರು ಹೇಳುವ ಅಷ್ಟಾದಶ ವರ್ಣನೆಗಳಲ್ಲಿನ ಕೆಲವನ್ನು ತನ್ನ ಪುರಾಣದಲ್ಲಿ ತಂದಿದ್ದಾನೆ. ಇಂತಹ ವರ್ಣನೆಗಳಲ್ಲಿ ತನ್ನ ಬುದ್ಧಿಗೆ ತಕ್ಕಂತೆ ಸ್ವತಂತ್ರವಾಗಿ ವರ್ಣಿಸಿರುವುದನ್ನು ಕಾಣುತ್ತೇವೆ. ಭಾಷೆ ಮತ್ತು ರಚನಾ ವಿಧಾನದಲ್ಲಿಯೂ ಆತನು ದೇಸಿಯತೆಯನ್ನು ಮೆರೆದಿದ್ದಾನೆ. ತತ್ಸಮ, ತದ್ಭವ ರೂಪಗಳು, ಸಮಾಸಗಳು, ಸಂಜ್ಞಾ ಪದಗಳು, ವಾಕ್ಯರಚನೆಯಲ್ಲಿನ ವ್ಯವಹಾರ ಗುಣ, ವಾಕ್ಯರಚನಾ ವಿಧಾನ ಮುಂತಾದವುಗಳೆಲ್ಲ ಅತ್ಯಂತ ಸೂಕ್ಷ್ಮವಾಗಿ ದೇಸಿಯತೆಯ ತಂತ್ರಗಳನ್ನು ಬಳಸಿದ್ದಾನೆ ಸೋಮನಾಥ. ಹಾಗಾಗಿ 'ಬಸವಪುರಾಣ'ವು ಅತ್ಯಂತ ಸೋಪೋಜ್ಞತೆಯಿಂದ ಕೂಡಿದುದಾಗಿದ್ದು, ರಸವತ್ತಾದ ಪುರಾಣವಾಗಿ ರೂಪಗೊಂಡು ಜನರ ಹೃದಯದಲ್ಲಿ ನೆಲೆಗೊಂಡಿದೆ. ತೆಲುಗು 'ಪಾಂಡಿತಾರಾಧ್ಯಚರಿತೆ'ಯ ಪೀಠಿಕೆಯಲ್ಲಿ ತೆಲುಗು ವಿದ್ವಾಂಸರಾದ ಡಾ. ಚಿಲಕೂರಿ ನಾರಾಯಣರಾವು ಅವರು ಸೋಮನಾಥನ 'ದ್ವಿಪದ' ಕುರಿತು ಹೇಳಿದ ಮಾತುಗಳನ್ನು ಗಮನಿಸಬಹುದು. "ಕನ್ನಡಿಗರಿಗೆ ತ್ರಿಪದಿ ಹೇಗೋ ತೆಲುಗರಿಗೆ ದ್ವಿಪದಿ ಜಾತಿಯ ಛಂದಸ್ಸು ಬಹು ಹಿಂದಿನಿಂದಲೂ ಬಳಕೆಯಲ್ಲಿದೆ. ಅದು ತೆಲುಗರ ಜೀವನದಲ್ಲಿ ಸೇರಿಕೊಂಡುಬಿಟ್ಟಿದೆ. ತೆಲುಗಿನಲ್ಲಿ ದ್ವಿಪದ ಕಾವ್ಯವೆಂಬುದು ಹಾಡು ರೂಪವಾಗಿ ಹಿಂದಿನಿಂದಲೂ ಇದು ಕಾಣುತ್ತದೆ. ಒಂಬತ್ತನೆಯ ಶತಮಾನದವನಾದ ಗುಣಗ

ವಿಜಯಾದಿತ್ಯನ ಶಾಸನದಲ್ಲಿ ದ್ವಿಪದ ವಿಶೇಷವಾದ ತರುವೋಜವು ಕಾಣಿಸುತ್ತದೆ. ನನ್ನಯ್ಯ ಕವಿಯೂ ಕೂಡ ತರುವೋಜವನ್ನು ಬಳಸಿದ್ದಾನೆ. ಇದರ ಪ್ರಚಾರ ಅಂದಿನಿಂದ ಇಂದಿನವರೆಗೂ ಜಾನಪದ ಹಾಡುಗಳಲ್ಲಿ, ಬೀಸುವ, ಕುಟ್ಟುವ ಹಾಡುಗಳಲ್ಲಿ, ಲಾಲಿ ಹಾಡುಗಳಲ್ಲಿ, ಮದುವೆ ಹಾಡುಗಳಲ್ಲಿ, ತೆಲುಗಿನವರ ಜೀವನದಲ್ಲಿನ ಸಮಸ್ತ ವಿಷಯಗಳಲ್ಲಿಯೂ ಕಾಣಿಸಿಕೊಂಡಿದೆ. ಅವರ ಆನಂದ, ನೋವು, ಕೋಪ ಕರುಣೆ, ಕಣ್ಣೀರು, ಉತ್ಸಾಹಗಳೇ ಮುಂತಾಗಿ ಎಲ್ಲದರಲ್ಲಿಯೂ ಇದೆ. ಇಂತಹ ಸರ್ವ ಸಾಮಾನ್ಯವಾದ ದ್ವಿಪದ ಛಂದಸ್ಸು ಆಂಧ್ರವಾಙ್ಮಯವು ಕೇವಲ ಸಂಸ್ಕೃತ ಪಂಡಿತರ ಕೈಯಲ್ಲಿ ಬಿದ್ದಿದ್ದರಿಂದ ಕೆಲವು ದಿನ ಅಜ್ಞಾತವಾಗಿ ಜನರಲ್ಲಿಯೇ ಮೌಖಿಕವಾಗಿ ಉಳಿದಿತ್ತು. ಅದಕ್ಕೊಂದು ಉನ್ನತಿಯನ್ನಿತ್ತು ಮೇಲೆ ತಂದವರಲ್ಲಿ ಮೊದಲನೆಯವನು ಪಾಲ್ಕುರಿಕೆ ಸೋಮನಾಥನು" (ಆಚಾರ್ಯ ತಿಮ್ಮವಜ್ಜಲ ಕೋದಂಡ ರಾಮಯ್ಯ, ಪಾಲ್ಕುರಿಕೆ ಸೋಮನಾಥನ ವೀರಶೈವ ಸಿದ್ಧಾಂತಮು, ದ್ವಿತೀಯ ಸಂಪುಟ, ಪುಟ-೫೫-೫೬)

ಹೀಗೆ ಸರ್ವಜನಾದರಣೆಯನ್ನು ಪಡೆದಂತಹ ಈ ದ್ವಿಪದವು ಅಂಶ ಛಂದಸ್ಸಾಗಿದೆ. ಎರಡು ಪಾದಗಳಲ್ಲಿ ರಚನೆಗೊಂಡಿರುವ ಇದರ ಪ್ರತಿ ಪಾದವು ಮೂರು ವಿಷ್ಣುಗಣಗಳು ಕೊನೆಯಲ್ಲಿ ಬ್ರಹ್ಮಗಣವನ್ನು ಹೊಂದಿರುವ ಘಟಕವಾಗಿದೆ. ಸೋಮನಾಥನಿಗಿಂತ ಹಿಂದೆ ಕ್ವಚಿತ್ತಾಗಿ ಬಳಕೆಗೊಂಡ ಈ ದ್ವಿಪದಿಯಲ್ಲಿ ಪ್ರಾಸ, ಯತಿಗಳು ಇರುತ್ತಿರಲಿಲ್ಲ. ಮೊದಲ ಬಾರಿಗೆ ಸೋಮನಾಥನು ತನ್ನ ದ್ವಿಪದ ರಚನೆಯಲ್ಲಿ ಪ್ರಾಸ, ಯತಿಗಳಿಗೆ ಸ್ಥಾನ ನೀಡಿದ್ದಾನೆ. ದ್ವಿತೀಯಾಕ್ಷರ ಪ್ರಾಸವಿರುವ ಇವನ ರಚನೆಯಲ್ಲಿ ಪಾದದ ಎರಡು ಗಣಗಳ ನಂತರ ಹಾಗೂ ಕೊನೆಯಲ್ಲಿ ಯತಿ ಬರುತ್ತದೆ. ಈ ವಿಧವಾಗಿ ದೇಸಿಯ ಛಂದೋ ರೀತಿಗಳನ್ನು ಅನುಸರಿಸಿ ಅದರ ಅನುಕೂಲತೆಗಳನ್ನು ಎತ್ತಿ ತೋರಿಸಿ ಮಹಾಕಾವ್ಯದ ಯೋಗ್ಯತೆಯನ್ನು ಪಾಲ್ಕುರಿಕೆ ಸೋಮನಾಥನು ನೀಡಿದ್ದಾನೆ. ಸೋಮನಾಥನ ನಂತರದ ತೆಲುಗು ಸಾಹಿತ್ಯದಲ್ಲಿ ದ್ವಿಪದ ಸಾಹಿತ್ಯ ಹಲವು ಕವಿಗಳಿಂದ ರಚಿಸಲ್ಪಟ್ಟು ವಿಶಿಷ್ಟ ದೇಸಿ ಛಂದೋ ಪ್ರಕಾರವಾಗಿ ಬೆಳೆಯಿತು. ಹಾಗೂ ಅಪರೂಪದ ಸಾಹಿತ್ಯ ಪ್ರಕಾರವಾಗಿಯೂ ರೂಪು ಪಡೆಯಿತು.

**ಷಟ್ಪದಿ (ವರ್ಣಕ) :**

ಪಾಲ್ಕುರಿಕೆ ಸೋಮನಾಥನ ಪ್ರಭಾವದಿಂದ ಕಾವ್ಯ ರಚನೆಗೆ ಕೈಹಾಕಿದ ಭೀಮಕವಿಯು ಸೋಮನಾಥನನ್ನು ಪ್ರತಿಯೊಂದು ಅಂಶದಲ್ಲಿಯೂ ಅನುಸರಿಸಿದ್ದಾನೆ. ಕಾವ್ಯ ವಸ್ತುವಿನಿಂದ ಹಿಡಿದು ರಚನಾ ಶೈಲಿ, ನಿರೂಪಣಾ ವಿಧಾನ, ಪಾತ್ರ ಪೋಷಣೆ, ವರ್ಣನೆ, ಅಲಂಕಾರಗಳಲ್ಲಿ ಎಲ್ಲಿಯೂ ಸೋಮನಾಥನನ್ನು ಬಿಟ್ಟಿಲ್ಲ. ಹಾಗಾಗಿ ಸ್ವಾಭಾವಿಕವಾಗಿಯೇ ಭೀಮಕವಿಯೂ ಕೂಡ ತನ್ನ ರಚನೆಗೆ ದೇಸಿಯ ಛಂದೋಬಂಧವನ್ನು ಆಯ್ಕೆಮಾಡಿದ್ದಾನೆ. ಕನ್ನಡದಲ್ಲಿ ಅವಜ್ಞೆಗೆ ಒಳಗಾಗಿದ್ದ ವರ್ಣಕವನ್ನು ಮುನ್ನಲೆಗೆ ತರಬೇಕೆಂಬ ಉದ್ದೇಶದಿಂದ ವಸ್ತುಕ ಕಾವ್ಯವನ್ನು ತಿರಸ್ಕರಿಸುತ್ತಾನೆ. ಈ ಹಿನ್ನೆಲೆಯಲ್ಲಿ ತನ್ನ ಪುರಾಣ ರಚನೆಗೆ ಆಯ್ದುಕೊಂಡ ಛಂದಸ್ಸನ್ನು

ಭೀಮಕವಿ ಕಥಾರಂಭದಲ್ಲಿ ತಿಳಿಸಿರುವುದು ಹೀಗೆ:

"ಪ್ರಾಸಯತಿ ಗಣ ಗದ್ಯ ಪದ್ಯ ಸ
ಮಾಸಯುತ ವಸ್ತುಕದ ಮುಂದೆ ವಿ
ಳಾಸಮೇ ಸಾಮಾವನ್ಯಮೀ ವರ್ಣಕ ಕವಿತೆಯೆಂದು
ಓಸರಿಸದಿರಿ ಬಜೆಯ ಕನ್ನಡ
ಭಾಷೆಯೆಂದೆನಲಾಗದಿಳೆಗಿದು
ಲೇಸೆನಿಪ ವೇದ ಪ್ರಮಾಣವೆನಿಪ್ಪುದೆಂತೆನಲು"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂಧಿ.೧.ಪ.೨೧)

ಸೋಮನಾಥನು ಹೇಳಿದಂತೆಯೇ ಭೀಮಕವಿಯೂ ಕೂಡ ವರ್ಣಕದ ಶ್ರೇಷ್ಠತೆಯನ್ನು ಹೇಳುತ್ತಾ ತಾನು ವರ್ಣಕ ಕಾವ್ಯವನ್ನು ರಚಿಸುತ್ತಿದ್ದೇನೆಂದು ಹೇಳುವನು. ಜೊತೆಗೆ ಇದು ವೇದ ಭಾಷೆಗೆ ಸಮಾನವಾದುದು ಎಂಬ ಮಾತನ್ನು ಸ್ಪಷ್ಟವಾಗಿ ಹೇಳಿದ್ದಾನೆ. ಭೀಮಕವಿಯು ಹೇಳುವ 'ವರ್ಣಕ ಕವಿತೆಯೆಂದು ಓಸರಿಸದಿರಿ' ಎಂಬ ಮಾತು ಆ ಕಾಲದಲ್ಲಿ ವರ್ಣಕ ಕಾವ್ಯವನ್ನು ಹೆಚ್ಚು ಬಳಸುತ್ತಿರಲಿಲ್ಲ. ತಿರಸ್ಕಾರ ಮಾಡಿದ್ದರು ಎಂಬ ಅಂಶ ಸ್ಪಷ್ಟವಾಗುತ್ತದೆ. ಇಂತಹ ತಿರಸ್ಕರಿಸಲ್ಪಟ್ಟ ಪ್ರಕಾರದಿಂದ ಪುರಾಣ ರಚನೆ ಮಾಡಿ ವರ್ಣಕ ಕಾವ್ಯಕ್ಕೆ ಒಂದು ಉನ್ನತ ಗೌರವವನ್ನು ತಂದುಕೊಟ್ಟ ಕೀರ್ತಿ ಭೀಮಕವಿಗೆ ಸಲ್ಲುತ್ತದೆ. ಹಾಗೆಯೇ ಸರಸವಾದ ಮೃದು ಮಧುರವಾದ ಸಮಾಸ ದೇಸಿ ಸರಣಿಯಲ್ಲಿ ಕಿವಿಗಳಿಗೆ ಲಾಲಿತ್ಯವನ್ನು ಉಂಟು ಮಾಡುವಂತೆ ಈ ಪುರಾಣವನ್ನು ರಚಿಸುವೆನೆಂದು ಭೀಮಕವಿ ಹೇಳುತ್ತಾನೆ. "ಭೀಮಕವಿಯ 'ಬಸವಪುರಾಣ'ದ ವೈಶಿಷ್ಟ್ಯ ಅದು ವರ್ಣಕ ಕಾವ್ಯವಾಗಿರುವುದು. ವರ್ಣಕದ ಮುಖ್ಯ ಲಕ್ಷಣಗಳಲ್ಲಿ ಅದರ ಲಯ ಪ್ರಾಧಾನ್ಯವೂ ಒಂದು. ಭೀಮಕವಿಯ ಕೃತಿಯ ಛಂದಸ್ಸು ಭಾಮಿನಿ ಷಟ್ಪದಿಯ ಲಯ ೩;೪, ೩;೪ರ ಗಣ ವಿನ್ಯಾಸದ್ದು. ಆ ಕಾರಣದಿಂದಾಗಿಯೇ ಅದು ಹಾಡುಗಾರಿಕೆಗೆ ಒಪ್ಪವಿಟ್ಟ ರಚನೆ" (ವಿದ್ಯಾಶಂಕರ, ಭೀಮಕವಿ, ಬ.ಪು.ಪ್ರಸ್ತಾವನೆ, ಪುಟ-೩೨) ಹಾಗಾಗಿಯೇ 'ಬಸವಪುರಾಣ' ಇಂದು ಅನೇಕ ಮಠಗಳಲ್ಲಿ, ಪುರಾಣ-ಪ್ರವಚಕರಲ್ಲಿ ಹೆಚ್ಚು ಪಠಸಲಾಗುತ್ತಿದೆ. ಕೆಲವು ವಿಶೇಷ ಸಂದರ್ಭಗಳಲ್ಲಿ ಈ ಪುರಾಣ, ವಾಚನಗಳು ಹಳ್ಳಿ, ಪಟ್ಟಣ, ಮಠಗಳಲ್ಲಿ ನಡೆಯುತ್ತಿರುತ್ತದೆ. ಇದನ್ನು ಓದಿದ, ಕೇಳಿದ ಸರ್ವರಿಗೂ ಒಳ್ಳೆಯದಾಗುತ್ತದೆ ಎಂಬ ಭಾವನೆ ಈಗಲೂ ಜನರಲ್ಲಿ ಬೇರೂರಿದೆ. ಈ ಎಲ್ಲಾ ಕಾರಣಗಳಿಂದಾಗಿ ಬಸವ ಪುರಾಣ ಸಾಕಷ್ಟು ಪ್ರಸಿದ್ಧಿಯನ್ನು ಪಡೆದುಕೊಂಡಿದೆ.

ಈ ಮೇಲಿನ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಬಸವಪುರಾಣ ಕಾವ್ಯಗಳು ಹೊಸದೊಂದು ಪ್ರಕಾರಗಳಿಗೆ ಮೊದಲನೆಯವುಗಳಾಗಿ ತೆಲುಗು ಮತ್ತು ಕನ್ನಡ ಸಾಹಿತ್ಯ ವಲಯಗಳಲ್ಲಿ ಪ್ರಮುಖವಾಗಿ ಗುರುತಿಸಿಕೊಂಡಿವೆ. ಇಂತಹ ಹೊಸ ದೇಸಿ ಅಂಶಗಳೊಂದಿಗೆ ಸಿದ್ಧಗೊಂಡಿರುವ ಈ ಪುರಾಣಗಳ

ಕಾವ್ಯಸೌಂದರ್ಯವನ್ನು ಕವಿಗಳು ಹೇಗೆ ನಿರೂಪಿಸಿದ್ದಾರೆ. ಕಟ್ಟಿ ಬೆಳಿಸಿದ್ದಾರೆ ಎಂಬುದನ್ನು ಮುಂದೆ ವಿಸ್ತೃತವಾದ ವಿವರಣೆಗಳೊಂದಿಗೆ ವಿಶ್ಲೇಷಿಸಲಾಗಿದೆ. ಅಷ್ಟಾದಶ ವರ್ಣನೆಗಳು, ರಸ ನಿರೂಪಣೆಗಳು, ಅಲಂಕಾರ ಪೋಷಣೆಗಳು ಎರಡೂ ಕಾವ್ಯಗಳಲ್ಲಿ ಹೇಗೆ ಮಿಳಿತಗೊಂಡಿವೆ ಎಂಬುದನ್ನು ಚರ್ಚಿಸಲಾಗಿದೆ. ಈ ಮೇಲಿನ ಅಂಶಗಳು ತೆಲುಗು ಮತ್ತು ಕನ್ನಡ ಪುರಾಣಗಳಲ್ಲಿ ವರ್ಣನೆಗೊಂಡ ಬಗೆ ಮತ್ತು ಎರಡೂ ಪುರಾಣಗಳಲ್ಲಿನ ಸಾಮ್ಯತೆ ಭಿನ್ನತೆಗಳನ್ನು ಗುರುತಿಸುವ ಪ್ರಯತ್ನವನ್ನು ಮಾಡಲಾಗಿದೆ.

**೬.೨. ವರ್ಣನೆಗಳು :**

ಪಾಲ್ಕುರಿಕೆ ಸೋಮನಾಥ ಹಾಗೂ ಭೀಮಕವಿಯರು ದೇಸಿ ಛಂದಸ್ಸಿನಲ್ಲಿ ಪುರಾಣ ರಚನೆ ಮಾಡಿದ್ದರೂ ಸಂಸ್ಕೃತ ಕಾವ್ಯಗಳು ಮತ್ತು ಪ್ರಾಚೀನ ಕನ್ನಡ ಚಂಪೂ ಕಾವ್ಯಗಳಲ್ಲಿ ಬಳಕೆಯಾಗುತ್ತಿದ್ದ ಅಷ್ಟಾದಶ ವರ್ಣನೆಗಳನ್ನು ಬಳಸಿಕೊಂಡಿದ್ದಾರೆ. ಒಂದು ಕಾವ್ಯ ಪರಿಪೂರ್ಣತೆಗೆ ಅದರ ರಮ್ಯತೆಗೆ ಅಷ್ಟಾದಶ ವರ್ಣನೆಗಳು ಅತೀ ಮುಖ್ಯವೆಂದು ಪರಿಗಣಿಸಿದ್ದಂತಹ ಪ್ರಾಚೀನ ಕವಿಗಳು ತಮ್ಮ ಎಲ್ಲಾ ಕಾವ್ಯಗಳಲ್ಲಿ ಈ ವರ್ಣನೆಗಳನ್ನು ತಂದಿದ್ದಾರೆ. ಅಷ್ಟಾದಶ ವರ್ಣನೆಗಳಿಲ್ಲದ ಕಾವ್ಯಗಳನ್ನು ಅಪೂರ್ಣ ಕಾವ್ಯಗಳು ಎನ್ನುವ ಅಭಿಪ್ರಾಯವೂ ಕೆಲವರಲ್ಲಿ ಇತ್ತು. ಹಾಗಾಗಿ ಯಾವುದೇ ವಸ್ತು ವಿಷಯದ ಕಾವ್ಯವಾದರೂ ಈ ಹದಿನೆಂಟು ವರ್ಣನೆಗಳಲ್ಲಿ ಕೆಲವಾದರೂ ಬಳಕೆಯಲ್ಲಿ ಮಾಡುತ್ತಾ ಬಂದರು. ಉಭಯಕವಿತ್ವ ಸಮರ್ಥರಾದ ಪಾಲ್ಕುರಿಕೆ ಸೋಮನಾಥ ಮತ್ತು ಭೀಮಕವಿಯರು ಕೂಡ ತಮ್ಮ ಪುರಾಣಗಳಲ್ಲಿ ಸಂದರ್ಭಕ್ಕೆ ಉಚಿತವಾಗಿ ಕೆಲವು ವರ್ಣನೆಗಳನ್ನು ಬಳಕೆ ಮಾಡಿರುವುದು ಕಂಡುಬರುತ್ತದೆ. 'ಬಸವಪುರಾಣ' ಕಾವ್ಯವು ಪ್ರಮುಖವಾಗಿ ಭಕ್ತಿರಸ ಕಾವ್ಯವಾದರೂ ಪೂರಕವಾಗಿ ಅನೇಕ ಅಂಶಗಳು ಇದರಲ್ಲಿ ಹಾಸುಹೊಕ್ಕಾಗಿವೆ. ಸೋಮನಾಥನು ಸ್ವತಂತ್ರವಾಗಿ 'ಬಸವಪುರಾಣಮು'ವನ್ನು ರಚನೆ ಮಾಡಿರುವುದರಿಂದ ಅವನ ವರ್ಣನೆಗಳೆಲ್ಲವೂ ಸ್ವಕಲ್ಪಿತವಾದವುಗಳೇ. ಸ್ವಾನುಭವದಿಂದ ತನ್ನ ಪುರಾಣದಲ್ಲಿ ವರ್ಣನೆಗಳನ್ನು ಮಾಡಿರುವುದು ಕಂಡುಬರುತ್ತದೆ. ಆದರೆ ಭೀಮಕವಿ ಸೋಮನಾಥನ ಪುರಾಣವನ್ನು ಅನುವಾದ ಮಾಡಿದ್ದರಿಂದ ಅವನ ವರ್ಣನೆಗಳಿಗೆ ಮೂಲದಲ್ಲಿ ವರ್ಣನೆಗಳ ಪ್ರಭಾವವೂ ಇದೆ. ಇದರ ಜೊತೆಗೆ ಭೀಮಕವಿಯೂ ಕೂಡ ವರ್ಣನಾಪ್ರಿಯ. ತನ್ನ ಪುರಾಣವನ್ನು ಸಂದರ್ಭಕ್ಕನುಗುಣವಾಗಿ ರಸವತ್ತಾದ ಭಾಗಗಳಲ್ಲಿ ತನ್ನ ಪಾಂಡಿತ್ಯವನ್ನು ಚೆಲ್ಲುವರಿದಿದ್ದಾನೆ. ಇಂತಹ ಸಂದರ್ಭಗಳಲ್ಲಿ ಸೋಮನಾಥನನ್ನು ಮೀರಿಸುವ ಇವನ ಕಾವ್ಯಗುಣ, ವರ್ಣನಾ ಕೌಶಲ್ಯ ಓದುಗರನ್ನು ಬೆರಗುಗೊಳಿಸುತ್ತದೆ. ಸೋಮನಾಥನು ಸ್ವತಂತ್ರ ರಚನಕಾರನಾಗಿ ಕಾವ್ಯಕ್ಕೆ ಎಷ್ಟು ವರ್ಣನೆ ಅವಶ್ಯವಿದೆಯೋ ಅಷ್ಟನ್ನು ಮಾತ್ರ ನೀಡುತ್ತಾನೆ. ಭೀಮಕವಿ ವರ್ಣನೆಗಳ ಜಾಲದಲ್ಲಿ ಮುಳುಗಿ ವರ್ಣಣೆಗಳ ರಸದೌತಣವನ್ನು ನೀಡುತ್ತಾನೆ. ಈ ರೀತಿಯ ಹೆಚ್ಚಿನ ವರ್ಣನೆಗಳನ್ನು ಮಾಡಿರುವುದರಿಂದ ಮೂಲ ಕಾವ್ಯದ ಸ್ವರೂಪಕ್ಕಾಗಲಿ, ಅದರ ಬಂಧಕ್ಕೇನು ಆಭಾಸವಾಗಿಲ್ಲ. ಮೂಲವನ್ನು ಚಚೂತಪ್ಪದೆ

ಪಾಲಿಸುತ್ತಾ ವರ್ಣನೆಗಳನ್ನು ಮಾಡುತ್ತಾನೆ. ಸೋಮನಾಥ ಮತ್ತು ಭೀಮಕವಿಯರು ತಮ್ಮ ಪುರಾಣಗಳನ್ನು ವಾಚ್ಯ ಪ್ರಧಾನವಾಗಿ ರಚಿಸಿದ್ದಾರೆ. ಹಾಗಾಗಿಯೇ ಇವರು ವರ್ಣನೆಗಳ ಮೂಲಕವೇ ವಿಷಯಗಳನ್ನು ಸವಿಸ್ತಾರವಾಗಿ, ಸಂಪೂರ್ಣವಾಗಿ ಮನಸ್ಸಿಗೆ ಉಲ್ಲಾಸವಾಗುವ ರೀತಿಯಲ್ಲಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ.

ಹೀಗೆ ಈ ಇಬ್ಬರ ಕವಿಗಳ ಕಾವ್ಯ ಸೌಂದರ್ಯವು ಅವರ ವರ್ಣನೆಗಳಲ್ಲಿ ಹೇಗೆ ಬೆಸೆದುಕೊಂಡಿದೆ ಎಂಬುದನ್ನು ಮುಂದೆ ವಿಶ್ಲೇಷಿಸಲಾಗಿದೆ.

**ಪ್ರಕೃತಿ ವರ್ಣನೆ :**

ಅಷ್ಟಾದಶ ವರ್ಣನೆಗಳಲ್ಲಿ ಪ್ರಕೃತಿ ವರ್ಣನೆಯು ಅತ್ಯಂತ ಪ್ರಮುಖವಾದ ವರ್ಣನೆಯಾಗಿದೆ. ಕವಿಗಳು ತಮ್ಮ ಕಾವ್ಯದಲ್ಲಿ ಕಥಾನಾಯಕನ ದೇಶ ಪರ್ಯಟನೆ ಮಾಡುವ ಸಂದರ್ಭದಲ್ಲಿ, ಬೇಟೆಯಾಡಲು ಕಾಡಿಗೆ ಹೋದ ಸಂದರ್ಭದಲ್ಲಿ ಪ್ರಕೃತಿ ವರ್ಣನೆಯನ್ನು ಅತ್ಯಂತ ರಮ್ಯವಾಗಿ ಚಿತ್ರಿಸುತ್ತಾರೆ. ಪ್ರಕೃತಿಯಲ್ಲಿ ಕಾಣುವ ಅನೇಕ ವಸ್ತುಗಳಾದ ಗಿರಿಶಿಖರಗಳು, ಹೂದೋಟಗಳು, ದಟ್ಟ ಕಾಡುಗಳು, ರಾಜ್ಯವೈಭವ, ನಗರ ವೈಭವ ಮುಂತಾದವುಗಳನ್ನು ವರ್ಣಿಸುವಾಗ ಈ ವರ್ಣನೆಯನ್ನು ಪ್ರಯೋಗಿಸುತ್ತಾರೆ ಕವಿಗಳು. ಅದೇ ರೀತಿಯಾಗಿ ಪ್ರಕೃತಿ ವರ್ಣನೆಯ ಸಂದರ್ಭಗಳು ಬಸವ ಪುರಾಣಗಳಲ್ಲಿ ಅಲ್ಲಲ್ಲಿ ಕಂಡುಬರುತ್ತವೆ.

ಪ್ರಕೃತಿಯ ಸುಂದರ ಸೊಬಗನ್ನು, ಅದರ ಮನೋಹರತೆಯನ್ನು ಇಬ್ಬರೂ ಕವಿಗಳು ಸಕಲೇಶ ಮಾದರಸನ ಕಥೆಯಲ್ಲಿ ವರ್ಣಿಸಿದ್ದಾರೆ. ಕೈಲಾಸ ಪರ್ವತದ ಅತೀ ರಮ್ಯತೆಯನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತಾ ವರ್ಣನೆಗಳಲ್ಲಿ ಇಬ್ಬರೂ ಸಮಾನತೆಯನ್ನು ತೋರಿದ್ದಾರೆ. ಗಿರಿಶಿಖರ, ವೃಕ್ಷ, ಮೃಗ, ಪಕ್ಷಿ, ಫಲ ಪುಷ್ಪಗಳ ಕಾಂತಿಯನ್ನು ಅವುಗಳ ವೈಭವವನ್ನು ತಮ್ಮ ವರ್ಣನೆಗಳಲ್ಲಿ ಅತ್ಯಂತ ಮನೋಜ್ಞವಾಗಿ ಚಿತ್ರಿಸಿದ್ದಾರೆ. ಕೈಲಾಸ ಪರ್ವತದಲ್ಲಿನ ವೃಕ್ಷಗಳು ಬೆಳೆದು ಹಬ್ಬಿದ ಪರಿಯನ್ನು ಹೇಳುತ್ತಾ, ವೃಕ್ಷಗಳು, ಅಲ್ಲಿನ ಪರ್ವತಗಳು ನಾಟ್ಯವಾಡುತ್ತಿವೆಯೆನೋ ಎಂಬಂತೆ ಕಾಣುತ್ತಿದ್ದವು. ಗುಲ್ಮಂಗಳು (ಪೊದೆಗಳು), ಬಳ್ಳಿಗಳು ನೃತ್ಯವಾಡುತ್ತಿರುವಂತೆ ಕಾಣುತ್ತಿದ್ದವು. ಹಾಗೆಯೇ ಅಲ್ಲಿ ವಾಸಿಸುತ್ತಿದ್ದ ಮೃಗ, ಪಕ್ಷಿಗಳು, ವಾನರ ಗುಂಪುಗಳು ಕೂಡ ಅತ್ಯಂತ ಸಂತೋಷದಿಂದ ನಲಿದಾಡುತ್ತಿದ್ದವು. ಅಲ್ಲಿನ ಪರ್ವತಗಳಿಂದ ಇಳಿದು ಝರಿಯಾಗಿ ಹರಿದು ಬರುತ್ತಿರುವ ನೀರಿನಿಂದ ಆವೃತವಾದ ಮರಗಳು ಜಲ ವೃಕ್ಷಗಳಂತೆ ಕಾಣುತ್ತಿದ್ದವು(ತೃ.ಆ.ಸಾ.೧೯೪೩–೧೯೫೦) ಎಂಬ ಕವಿಯ ಕಲ್ಪನೆಯು ಅದ್ಭುತವಾದದ್ದು. ಹಾಗೆಯೇ ಅಲ್ಲಿನ ವೃಕ್ಷಗಳು ಹಲವು ಬಣ್ಣಗಳಿಂದ ರೂಪ ತಳೆದಿದ್ದವು. ವಿವಿಧ ವರ್ಣಗಳ ಶಿಲೆಗಳು, ಪೊದೆಪೊಟೆರಗಳು ಮತ್ತು ವಿವಿಧ ಆಕಾರಗಳನ್ನು ಹೊಂದಿರುವ ವೃಕ್ಷ ಸಮೂಹ, ಶಿಲೆಗಳ ಸಮೂಹಗಳು ನೋಡುಗರ ಮನ ಸೆಳೆಯುತ್ತಿದ್ದವು. (ಭೀ.ಬ.ಪು.ಸಂ.೧೮, ಪ.೪೨) ಮೇರುಪರ್ವತಗಳು, ಅಲ್ಲಿನ ವೃಕ್ಷಗಳು, ಸೂರ್ಯನ ಕಿರಣಗಳು ನೆಲಕೆ ಬೀಳದ ರೀತಿಯಲ್ಲಿ ಬೆಳೆದು ನಿಂತಿರುವ ಬಗೆ, ಅವುಗಳ ಮೇಲತ್ತಿ

ನೋಡಿದರೆ ಈರೇಳು ಲೋಕಗಳೇ ಕಾಣಿಸುತ್ತವೆ ಎಂಬುದು ಕಲ್ಪನೆಗೂ ಮೀರಿದ್ದು. ಇಂತಹ ಗಿರಿಶಿಖರಗಳಲ್ಲಿ ಗಳಿಗೆಗೊಂದರಂತೆ ಹಣ್ಣು ಬಿಡುವ ಗಿಡಗಳಿವೆ. ಸೂರ್ಯನೊಂದಿಗೆ ಉದಯಿಸಿ, ಸೂರ್ಯನೊಂದಿಗೆ ಅಸ್ತಮಿಸುವ ಬೆಟ್ಟ ಸಾಲುಗಳಿವೆ. ಗಂಗೆಯನ್ನು ಮೈತುಂಬಿಸಿಕೊಂಡು ಜಲಪಾತಗಳನ್ನು ಸೃಷ್ಟಿಸುತ್ತಿರುವ ಪರ್ವತಗಳು ಮತ್ತು ವೃಕ್ಷಗಳಿವೆ. ಅಮೃತವನರಿಸುವ ವೃಕ್ಷಗಳು ಕನಕ ಪರ್ವತಗಳು, ಕನಕ ವೃಕ್ಷಗಳು, ಕನಕ ಪಕ್ಷಿಗಳು, ಲತೆಗಳು ಎಲ್ಲವೂ ಕನಕ ಮಯವಾಗಿತ್ತು ಎಂಬ ವರ್ಣನೆಗಳು ಕೈಲಾಸ ಪರ್ವತದ ಸುಭಗತೆಯನ್ನು ಹೆಚ್ಚಿಸಿವೆ.(ಭೀ.ಬ.ಪು.ಸಂ.೧೮ಪ.೬೨-೬೩) ಅಲ್ಲಿನ ಫಲಪುಷ್ಪ ರಾಶಿಯ ಸೌಂದರ್ಯ ಮತ್ತು ಅಲ್ಲಿ ಕಂಗೊಳಿಸುತ್ತಿದ್ದ ವಿವಿಧ ಹೂರಾಶಿಗಳನ್ನು ಭೀಮಕವಿ ಹೇಳುವುದು ಹೀಗೆ

"ಒಂದರಳು ಇರವತಿಗೆ ಪಡ್ಡಳಿ
ವೊಂದರಳು ಸೇವತಿಗೆ ಚಂಪಕ
ಒಂದರಳು ಸುರಹೊನ್ನೆ ಬಿಂದುಗೆ ಒಂದರಳು ಜಾಜಿ
ಒಂದು ಹೂವೊಂದರಳು ಮಲ್ಲಿಗೆ
ಒಂದು ಹೂಮಂದಾರವುತ್ಪಲ
ಒಂದು ಚೆನ್ನಯ್ದಿಲು ಬಕುಳ ಒಂದೊಂದು ಅರವಿಂದ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೧೮.ಪ.೬೫)

ಆ ಬೆಟ್ಟಗಳ ತಪ್ಪಲಿನಲ್ಲಿ ಬೆಳೆದ ಇರವಂತಿಗೆ, ಸೇವಂತಿ, ಸುರಹೊನ್ನೆ, ಜಾಜಿ, ಮಲ್ಲಿಗೆ ಮುಂತಾದ ಹೂಗಳ ಜೊತೆಗೆ ಹಲವು ಹಣ್ಣುಗಳ ಸಸ್ಯಗಳು ಇದ್ದು, ವನವು ಮತ್ತಷ್ಟು ರಂಗೇರಿತ್ತು. ಹೂವು ಮತ್ತು ಹಣ್ಣುಗಳ ಸುವಾಸನೆಯಿಂದ ಕೈಲಾಸ ಪರ್ವತವು ಘಮಘಮಿಸುತ್ತಿತ್ತು. ಅಲ್ಲಿದ್ದ ಫಲರಾಶಿಯೆಂದರೆ ನೇರಳೆ, ಬೇಲ, ಖರ್ಜೂರ, ದಾಳಿಂಬೆ, ಬಾಳೆ, ಗಜನಿಂಬೆ, ಹಲಸು, ಜಂಭೂಫಲ (ತೃ.ಆ.ಸಾ.೨೦೭೧-೨೦೭೫) ಮುಂತಾದ ಹಣ್ಣುಗಳ ವಿವರವನ್ನು ನೀಡುತ್ತಾರೆ. ಪ್ರಕೃತಿಯ ಸೌಂದರ್ಯವನ್ನು ಒಂದು ಹೊಸ ವಿಧಾನದಲ್ಲಿ, ಹೊಸ ರೂಪಗಳಲ್ಲಿ 'ಬಸವಪುರಾಣ'ಗಳಲ್ಲಿ ವರ್ಣಿಸಿದ್ದಾರೆ. 'ಬಸವಪುರಾಣ'ದ ಆರಂಭದಲ್ಲಿ ರಜತಾದ್ರಿಯ ಸೌಂದರ್ಯವನ್ನು ಭೀಮಕವಿ ಆಶ್ಚರ್ಯಚಕಿತನಾಗುತ ವರ್ಣಿಸಿರುವುದು ಹೀಗೆ.

"ಇಂದುರುಚಿ ಬಲಿದುದೊ ಹರಸ್ಮೇ
ರಂ ದಿವಿಯೊಳಾಕಾರಮಾಯ್ತೊ ಹಿ
ಮಂದಳೆದುದೋ ಕಠಿಣಮಂ ಸುಧೆ ಬೆಳೆದಚಲಮಾಯ್ತೊ
ಕುಂದಚಂದನಮಲ್ಲಿಕಾಹರಿ
ಚಂದನಾಮರಸಿಂಧುಜಲಸಿತ

ವೃಂದರಮೇ ರೂಪಾಯ್ತೊ ಎನೆ ರಜತಾದ್ರಿ ರಂಜಿಪುದು"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೧.ಪ.೩೮)

ರಜತಾದ್ರಿಯ ಚೆಲುವು, ಚಂದಿರನ ಬೆಳದಿಂಗಳ ಬೆಳಕು ಹೆಚ್ಚಾಗಿ ಈ ರೀತಿ ಕಂಗೊಳಿಸುತ್ತಿದೆಯೋ ಅಥವಾ ಶಿವನ ತೇಜಸ್ಸಿನಿಂದ ಈ ರೂಪುಪಡೆದಿದೆಯೋ ಎಂದು ಅನುಮಾನ ವ್ಯಕ್ತಪಡಿಸುತ್ತಾನೆ ಕವಿ. ಹಿಮದಿಂದ ಆವೃತವಾಗಿ ಮಲ್ಲಿಗೆ, ಗಂಧಗಳ ಪರಿಮಳದಿಂದ ತುಂಬಿಕೊಂಡು ಸಿಂಧುವಿನ ನೀರಿನಿಂದಾವರಿಸಿ ಈ ಚೆಲುವಿನ ರೂಪು ಪಡೆದ ರಜತಗಿರಿ ರಂಜಿಸುತ್ತಿತ್ತು ಎನ್ನುವಲ್ಲಿ ಕವಿಯ ಕಲ್ಪನೆಯಲ್ಲಿ ರಜತಾದ್ರಿಯ ಸೌಂದರ್ಯವನ್ನು ಇಂತಹ ಅದ್ಭುತ ಪ್ರತಿಮೆಗಳ ಮೂಲಕ ಅದರ ಚೆಲುವನ್ನು ಚಿತ್ರಿಸಿದ್ದಾನೆ. ಇಷ್ಟಕ್ಕೆ ತೃಪ್ತಿಹೊಂದದ ಭೀಮಕವಿ ಮತ್ತಷ್ಟು ರೂಪಕಗಳ ಮೂಲಕ ರಜತಾದ್ರಿಯನ್ನು ವರ್ಣಿಸುತ್ತಾನೆ.

"ಕಣಿಯೊ ಪರುಷದ ನಿಧಿಯೋ ಚಿಂತಾ
ಮಣಿಯ ನಂದನಮೋ ದಿವಿಜ ಧಾ
ರುಣಿರುಹಂಗಳ ನೆಲೆಯೊ ಕಡವರದಿರವೊ ಶೋಭನದ
ದೊಣೆಯೋ ಸಿದ್ಧರಸದ ಸದನಮೋ
ಪ್ರಣವಮಂತ್ರಾಗಮದ ಕಳೆಗಳೊ
ಪ್ರಣುತಿಸಲ್ಕಿಂತೊಪ್ಪುವಾ ಕಲಧೌತಶೈಲದಲಿ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೧.ಪ.೩೯)

ಹೀಗೆ ಸಕಲ ಸೌಂದರ್ಯದ ಸವಿಯನ್ನು ಉಣಿಸುವ ಕಲಾಶಾಲೆಯಂತೆ ರಜತಾದ್ರಿಯು ಕಾಣಿಸುತ್ತಿದೆ ಎಂದು ಕವಿ ವರ್ಣಿಸುತ್ತಾನೆ.

ಕಪ್ಪಡಿಸಂಗಮದ ವೈಭವವನ್ನು ಅಲ್ಲಿನ ಪುರ ವೈಭವವನ್ನು, ಮಹಿಮೆಯನ್ನು ವರ್ಣಿಸುವಾಗ ಭಕ್ತಿಭಾವ ಉಂಟಾಗುವಂತೆ ಅಲ್ಲಿನ ಸಹಜ ಸುಂದರ ಬದುಕನ್ನು, ನೈಜತೆಯನ್ನು ಪಾಲ್ಕುರಿಕೆ ಸೋಮನಾಥ ವರ್ಣಿಸಿದ್ದಾನೆ. ಕಪ್ಪಡಿಸಂಗಮದ ಸೌಂದರ್ಯವು,

ಬುರಿಯೇಱುಲನ್ನಿಯುಂ ಬುಣ್ಯತೀರ್ಥಮುಲು
ಪರಗಂಗ ಗುಹಾಲೆಲ್ಲ ಹರುನಿವಾಸಮುಲು
ಗಿರುಲನ್ನಿಯುಂ ಹೇಮಗಿರುಲು ದಲಂಪಂ
ದರುಲೆಲ್ಲ ದುದ್ರಾಕ್ಷ ತರುವುಲು ಗಲಯ
ವನಮುಲನ್ನಿಯುಂ ಬುಷ್ಪವಾಟಿಕ ಲಚಟಿ
ಗನು ಲನ್ನಿಯುನು ಭೂತಿಗನುಲು ದೆಲ್ಲಾರ
ಗೊಲಂಕುಲನ್ನಿಯು ನೊಪ್ಪುಜಲಜಾಕರಮುಲು

ಕಲ ಗೋವು ಲನ್ನಿಯುಂ ಗಾಮಧೇನುವುಲು
ಗೋಡೆಲನ್ನಿಯು ನಂದಿಕುಜ್ಜ ಲಾಪುರಮು
ವಾಡ ಲನ್ನಿಯು ರಂಗವಲ್ಲಿ ವೇದಿಕಲು
ನರುಲೆಲ್ಲ ಭಕ್ತಲು ಚಿರಜೀವುಲೆಲ್ಲಂ
ಬರಿಕಿಂಪಂ ಗಾರಣ ಪುರುಷ ರೂಪಮುಲು

(ಗೂ.ವೆಂ.ಸು.(ಸಂ),ಬ.ಪು.,ಪ್ರ.ಆ.ಸಾ.೧೧೪೯–೧೧೫೦)

(ಪುರದ ನದಿಗಳೆಲ್ಲವೂ ಪುಣ್ಯ ತೀರ್ಥಗಳು, ಗುಹೆಗಳೆಲ್ಲವೂ ಶಿವಾಲಯಗಳು, ಗಿರಿಗಳೆಲ್ಲವೂ ಹೇಮಗಿರಿಗಳು, ವೃಕ್ಷಗಳೆಲ್ಲವೂ ರುದ್ರಾಕ್ಷಿ ಮರಗಳು, ವನಗಳೆಲ್ಲವೂ ಹುದೋಟಗಳು, ಕೊಳಗೆಲ್ಲವೂ ಜಲದಿಗಳು, ಇಲ್ಲಿರುವ ಗೋವುಗಳೆಲ್ಲವೂ ಕಾಮಧೇನುಗಳು, ಕರುಗಳೆಲ್ಲವೂ ನಂದಿ ಕರುಗಳು, ಪುರುದ ಕೇರಿಗಳಲ್ಲಿ ರಂಗವಲ್ಲಿಗಳು, ಇಲ್ಲಿನ ಜನರೆಲ್ಲರೂ ಭಕ್ತರು, ಚಿರಂಜೀವಿಗಳು ಪರೀಕ್ಷಿಸಿ ನೋಡಲು ಕಾರಣ ಇವರು ಪುರುಷ ರೂಪಿಗಳು)

ಎಲ್ಲವೂ ಶಿವಮಯವಾಗಿ ಅಲ್ಲಿನ ಜನರೆಲ್ಲರೂ ಶಿವನ ಭಕ್ತರಾಗಿ ಚಿರಂಜಿವಿಗಳಾಗಿದ್ದಾರೆ. ಮತ್ತು ಕಾರಣ ಪುರುಷರಾಗಿದ್ದಾರೆ ಎಂದು ಕವಿ ಹೇಳುತ್ತಾನೆ. ಮುಂದುವರೆದು ಈ ಪುರದಲ್ಲಿನ ಸ್ತ್ರೀಯರೆಲ್ಲರೂ ಪರಮ ಪತಿವ್ರತೆಯರು. ಇಲ್ಲಿನ ಭೂಮಿಯೆಲ್ಲ ನಿಧಿಯನ್ನು ತುಂಬಿಕೊಂಡಿರುವಂತದ್ದು. ಮಾತುಗಳೆಲ್ಲವೂ ತತ್ವಗಳಿಗೆ ಸಮಾನ. ಜನರ ಮಾತುಗಳು ಗೀತವಾದ್ಯಗಳನ್ನು ನುಡಿಸಿದಂತೆ ಮೃದು ಮಧುರವೂ ಆಗಿವೆ. ಇಲ್ಲಿ ದುಷ್ಟನು ಭ್ರಷ್ಟನು, ಕಳ್ಳನು, ಕ್ರೂರನು, ಭಕ್ತಿವಿಹೀನನು ಯಾವೊಬ್ಬನೂ ಇಲ್ಲ. ಅಷ್ಟೊಂದು ಶುದ್ಧಭಕ್ತಿಯನ್ನು ತುಂಬಿಕೊಂಡು ಭಕ್ತಿಗೆ ಹೆಸರಾದಂತಹ ಪುರವದು ಎಂಬುದಾಗಿ ಸೋಮನಾಥ ಕಪ್ಪಡಿಸಂಗಮ ಕ್ಷೇತ್ರದ ವರ್ಣನೆಯನ್ನು ಮಾಡುತ್ತಾನೆ.

ಸೂರ್ಯಾಸ್ತ ವರ್ಣನೆಯನ್ನು ಮಾಡುವಾಗ ಸಂಸ್ಕೃತ ಪಂಡಿತ ಕವಿಗಳಿಗಿಂತ ಕಡಿಮೆಯೇನು ಇಲ್ಲವೆಂಬಂತೆ ಸೋಮನಾಥನು ತನ್ನ ಪುರಾಣದಲ್ಲಿ ವರ್ಣಿಸಿದ್ದಾನೆ. ಬಸವಣ್ಣನ ನಿಜಭಕ್ತಿ ಮಹಿಮಾ ಉಜ್ವಲತೆಯನ್ನು ಹೇಳುವುದು ಹೀಗೆ

ಬಸವನಿ ಬಕ್ತಿ ಪ್ರಭಾಪಟಲಂಬು
ದೆಸಲ ವಸುಂಧರ ದಿವಿ ದೀಟುಕೋನಂಗ
ದಿನಕರುಂಡಾತ್ಮೀಯ ತೇಜಂಬು ದಱುಂಗು
ಡನು ಮದಿ ಲಜ್ಜಿಂಚಿ ಚನಿಯಪರಾಬ್ಧಿಂ
ಬಡಿಯೆನೋ ಯನ್ನಟ್ಲು ಬಾನುಂಡು ಗ್ರುಂಕೆಂ
ಜೆಡಿ ಮಿತ್ರುಂಡರುಗ ರಾಜೀವಮುಲೊ ಮೊಗಿಚೆ
ಭೇರಮಲು ಶಂಖಮುಲೋ ಭೋರನಂ ಜೆಲಂಗೆ
ಮಾರಸಂಹಾರು ನಾಗಾರಾಂತಮುಲ

ನಲರುಚುಂ ಬಂಚಮಹಾಶಬ್ದರಾವ
ಮುಲು ಮ್ರೊಸೆ ಭಕ್ತಸಮೂಹಾಲಯಮುಲ
ಘನಧೂಪಧೂಮ ಸಂಜನಿತ ಮೇಘಮುಲು
ಸೆನಸಿ ಕಪ್ಪಿನ ಮಾಡ್ಕಿಂ ಜೀಕಟುಲ್ ವರ್ವೇ

(ಗೂ.ವೆಂ.ಸು.(ಸಂ),ಬ.ಪು.,ತೃ.ಆ.ಸಾ.೧೮೧-೧೯೨)

(ಬಸವನ ಭಕ್ತಿಯ ಪ್ರಭಾವಲಯವು ಭೂಮಿಯ ಎಲ್ಲಾ ದಿಕ್ಕುಗಳಿಗೂ ಹಬ್ಬಿರಲು ಸೂರ್ಯನು ತನ್ನ ಕಿರಣಗಳ ತೇಜಸ್ಸು ಕುಗ್ಗಿ ನಾಚಿಕೆಯಿಂದ ಪಶ್ಚಿಮದ ಸಮುದ್ರಕ್ಕೆ ಬಿದ್ದನೋ ಎಂಬಂತೆ ಮುಳಿಗಿದ. ಸೂರ್ಯನು ಮುಳುಗಲು ಸುತ್ತಲೂ ಕತ್ತಲಾವರಿಸಿತು. ಭೇರಿಶಂಖಗಳು ಮೊಳಗಿದವು. ಪಂಚ ಮಹಾಶಬ್ದಗಳಾಗಲು ಭಕ್ತಸಮೂಹಾಲಯಗಳಲ್ಲಿರುವ ಘನಧೂಪಧೂಮಗಳು ಸಂದಿಸಿದಂತೆ, ಮೇಘಗಳು ಸೆಣಸಿದಂತೆ ಕತ್ತಲೆ ಪಸರಿಸಿತು)

ಭೂಲೋಕದಲ್ಲಿ ಶಿವಭಕ್ತಿಯನ್ನು ಮೈದುಂಬಿಸಲು ಅವತಾರಿ ಪುರುಷನಾಗಿ ಬಂದ ಬಸವಣ್ಣನು ತನ್ನ ನಿಜಭಕ್ತಿಯನ್ನು, ಶಿವನ ಮೇಲಿನ ಅಸಮಾನ್ಯ ಪ್ರೀತಿಯನ್ನು ತೋರಿಸುತ್ತಾ ತನ್ನಲ್ಲಿಗೆ ಬೇಡಿಬಂದವರಿಗೆ ಕೇಳಿದುದನು ನೀಡುತ್ತಾ ಎಲ್ಲರ ಪ್ರೀತಿಯನ್ನು ಗಳಿಸಿಕೊಳ್ಳುತ್ತಾನೆ. ಭಕ್ತರಿಗಾಗಿಯೇ ತನ್ನನ್ನು ಮೀಸಲಿರಿಸಿಕೊಂಡ ಬಸವಣ್ಣನ ಘನ ಭಕ್ತಿಯು ದಶದಿಕ್ಕುಗಳಿಗೆ ಹಬ್ಬಿ ಖ್ಯಾತಿಗಳಿಸಿದುದನ್ನು ಕಂಡ ದಿನಸುತನಾದ ಸೂರ್ಯನ ತೇಜವೂ ಕುಂದುತ್ತದೆ. ಬಸವಣ್ಣನ ಹಿರಿಮೆಯ ಮುಂದೆ ತಾನು ತೃಣ ಸಮಾನವೆಂದು ಲಜ್ಜೆಯಿಂದ ಸೂರ್ಯನು ಪಶ್ಚಿಮ ಸಮುದ್ರದಲ್ಲಿ ಬಿದ್ದನೋ ಎಂಬಂತೆ ಮುಳುಗುತ್ತಾನೆ. ಸೂರ್ಯರಶ್ಮಿಯ ತೇಜಸ್ಸಿಗಿಂತಲೂ ಬಸವಣ್ಣನ ಭಕ್ತಿ ತೇಜಸ್ಸು ಹಿರಿದು ಎಂಬ ಕವಿಯ ಕಲ್ಪನೆ ಅಸಮಾನ್ಯವಾದುದು. ಸೂರ್ಯನ ಅಸ್ತಮದೊಂದಿಗೆ ಪುರದಲ್ಲಿನ ದೀಪಗಳು ಉರಿದು ಪ್ರಕಾಶಿಸುತ್ತಿರಲು, ಅದರ ಧೂಪದಿಂದ ಆವರಿಸಿದ ಮೇಘಗಳು ಸೆಣಸಿ ಕವಿದಂತೆ ಕತ್ತಲೆ ಪಸರಿಸಿತು ಎಂದು ವರ್ಣಿಸುವ ಕವಿಯು ಕತ್ತಲೆಯ ಭಯಾನಕತೆಯನ್ನು ತೋರ್ಪಡಿಸಿದ್ದಾನೆ. ಸೋಮನಾಥ ಭೀಮಕವಿ ಇಬ್ಬರೂ ಮೇಲಿನ ವರ್ಣನೆಯನ್ನು ಸಮಾನವಾಗಿ ಮಾಡಿದ್ದು ಈ ವರ್ಣನೆಯ ನಂತರ ಭೀಮಕವಿ ಮುಂದುವರೆದು ಕತ್ತಲೆಯ ನಂತರ ಸಂಭವಿಸುವ ಕೆಲ ಘಟನೆಗಳನ್ನು ಹೇಳುತ್ತಾ

"ಹಗಲೊಡೆಯನಸ್ತಮಿಸಲಿನಿಯನ
ನಗಲ್ದ ಪದ್ಮಿನಿಯಿರವನೀಕ್ಷಿಸಿ
ನಗುವವೊಲು ನೆಯ್ದಿಲುಗಳೆಯ್ದೆ ವಿಕಾಸವೆಯ್ದಿದವು
ದುಗುಡವಾಯ್ತು ರಥಾಂಗಮಿಥುನಕೆ
ನೆಗೆವಳಿಕುಳದ ಮೊರಹು ನಿಂದಿತು
ಖಗವಿತಾನಂ ಕೋಟರಂಗಳ ನೆಲೆಗೆ ಸೇರಿದವು"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೧೦.ಪ.೪೭)

ಹೀಗೆ ಇಬ್ಬರೂ ಕವಿಗಳು ಸೂರ್ಯಾಸ್ತದ ಸೌಂದರ್ಯವನ್ನು ಆ ಸಂದರ್ಭದ ಚಿತ್ರಣವನ್ನು ಅತ್ಯಂತ ಮನೋಹರವಾಗಿ ತಮ್ಮ ಕಾವ್ಯಗಳಲ್ಲಿ ವರ್ಣಿಸಿದ್ದಾರೆ.

ಅದೇ ರೀತಿಯಾಗಿ ಸೂರ್ಯೋದಯದ ವರ್ಣನೆಯನ್ನು ಮಾಡುವಾಗ ಸೋಮನಾಥ ಕೇವಲ ಒಂದೇ ಒಂದು ಪದ್ಯದಲ್ಲಿ ಸೂರ್ಯೋದಯವನ್ನು ಹೇಳುತ್ತಾನೆ. ಮುಗ್ಧಸಂಗಯ್ಯನು ಸೂಳೆ ಮನೆಯಲ್ಲಿ ಶಿವಲಿಂಗಾರ್ಚನೆಯನ್ನು ಬೆಳಗಾಗುವವರೆಗೂ ಮಾಡಿ ಮಂಗಳ ಗೀತೆಗಳನ್ನು ಹಾಡಲು "ದಿವಾಕರುಂಡಂತಂ ಚೆಚ್ಚರ ನುದಯಾದ್ರಿಶಿಖರ ಮೆಕ್ಕುಡುನು" (ದಿವಾಕರನಾಗ ಚಚ್ಚರದುದಯಾದ್ರಿ ಶಿಖರವೇರಿದನು) (ಪಾ.ಸೋ.ತೃ.ಆ.ಸಾ.೪೦೪) ಎಂದು ಮಾತ್ರ ಹೇಳುತ್ತಾನೆ. ಆದರೆ ವರ್ಣನಾ ಪ್ರಿಯನಾದ ಭೀಮಕವಿಯು ಸುಂದರವಾದ ಕಲ್ಪನೆಗಳನ್ನು ಜೋಡಿಸುತ್ತಾನೆ. ಮುಗ್ಧಸಂಗಯ್ಯನ ಪೂಜೆಯು ಮಂಗಳಾರತಿಗಳೊಂದಿಗೆ ಮುಗಿಯಲು ಪೂರ್ವದಲಿ

"ಸೂರಿನುತ ಸುಮನೋಹರನ ಪದ
ವಾರಿಯಂ ಮುನ್ನೀಂತೆ ದಿವ್ಯಶ
ರೀರಿಯಾದೆನು ನಿಖಿಳ ಮಹೇಶಪ್ರಸಾದಸುಖ
ಸೇರಿದಡೆ ನಾಂ ಕಾಲು ನಿಲ್ಲದ
ನಾರತಂ ತೊಳಲುವ ಬಳಲ್ಕೆ ನಿ
ವಾರವಹುದಿನ್ನೆಂಬವೊಲು ಬಂದಿನನುದಯವಾದ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೧೧.ಪ.೪೭)

ಮುಗ್ಧಸಂಗಯ್ಯನ ಭಕ್ತಿಯ ಆರ್ಚನೆಯನ್ನು ನಾನೇ ಮುಂಚೆ ನೋಡಬೇಕೆಂಬ ಆತುರದಲ್ಲಿ ಅವನ ಪ್ರಸಾದ ಸುಖವನ್ನುಂಡು ನಿರೋಗಿಯಾಗಬೇಕೆಂಬ ಅವಸರದಲ್ಲಿ ಕಾಲುಗಳು ನಿಲ್ಲದೆ ಬಂದನೋ ಎಂಬಂತೆ ಸೂರ್ಯನು ಉದಯಿಸಿದನು ಎಂಬ ಭೀಮಕವಿಯ ವರ್ಣನೆ ಸಂದರ್ಭಕ್ಕೆ ಸೂಕ್ತವಾದುದಾಗಿದೆ.

ಹೀಗೆ ಉದಯಿಸಿದ ಸೂರ್ಯನ ಕಿರಣಗಳು ಭೂಮಿಗೆ ತಾಕಲು ಜಕ್ಕವಕ್ಕಿ (ಬಿಸಿಲ ಹಕ್ಕಿ)ಗಳು ಅರಚಿದವು. ಪಕ್ಷಿಗಳು ಉಲ್ಲಾಸದಿ ಗಗನಕ್ಕೆ ಹಾರುತ್ತಾ ಆಡುತ್ತಿವೆ. ಅಳಿಲುಗಳು ಮರದ ಪೊಟರೆ, ಪೊದೆಗಳ ಬಿಲಗಳಿಂದ ಹೊರಬಂದವು. ನೆಯ್ದಿಲೆಗಳು ಅರಳಿದವು. ಮುಂಜಾನೆಯ ಹೊಸ ರವಿಕಿರಣಗಳ ಚುಂಬನಕೆ ಚಂದ್ರಮನ ಬೆಳಕು ನಿಧಾನವಾಗಿ ಕರಗಿತು.(ಭೀ.ಬ.ಪು.ಸಂ.೧೧.ಪ.೪೮) ಎಂದು ಬೆಳಗಿನ ಸೂರ್ಯೋದಯಕ್ಕೆ ಭುವಿಯ ಜೀವಿಗಳ ಪ್ರತಿಕ್ರಿಯೆಯನ್ನು ರಮಣೀಯವಾಗಿ ಭೀಮಕವಿ ನಿರೂಪಿಸಿದ್ದಾನೆ.

ಸೂರ್ಯಾಸ್ತದ ವರ್ಣನೆಯನ್ನು ವರ್ಣಿಸಿದ ಕವಿಗೆ ಚಂದ್ರೋದಯದ ರಮಣೀತೆಯನ್ನು ವರ್ಣಿಸುವುದು ಮತ್ತಷ್ಟು ಸಂತಸದ ಸಂಗತಿ. 'ಬಸವಪುರಾಣ'ದಲ್ಲಿ ಚಂದ್ರೋದಯದ ವರ್ಣನೆಯನ್ನು ಸೋಮನಾಥ ವರ್ಣಿಸಿರುವುದು ಹೀಗೆ

"ಮಲಸಂಹರುಂಡು ಜಟಾಮುಕುಟಂಬು ಮೀಂದ
ನಿಲಿಪಿಯು ನಾಕಂದು ನೆಚೆಂಬುಚ್ಚ ಲೇಂಡು
ಭಕ್ತುಲಪಾದ ಸಂಸ್ಪರ್ಶನಂಬುನನು
ವ್ಯಕ್ತಿಗಾ ನಿರ್ಮಲತ್ವಂಬುಂ ಬೋನದುದುನು
ಅನಿ ಯಾತ್ಮಂದಲ ಪೋಸಿ ಯರುದೆಂಚು ಮಾಡ್ಕಿ
ವನಜಾರಿ ಪ್ರಾಜ್ಮುಖಂಬುನ ನುದಯಿಂಚೆ

(ಗೂ.ವೆಂ.ಸು.(ಸಂ),ಬ.ಪು.,ತೃ.ಆ.ಸಾ.೩೬೭–೩೭೨)

(ಮಲಸಂಹರನು ಜಟಾಮುಕುಟದ ಮೇಲೆ ನಿಂತರೂ ನನ್ನ ಕಪ್ಪುಬಣ್ಣ ಹೋಗಲಿಲ್ಲ. ಭಕ್ತರ ಪಾದಗಳ ಸ್ಪರ್ಶದಿಂದ ವ್ಯಕ್ತಿಯಾಗುತ ನಿರ್ಮಲವಾಗುವೆನೆಂದು ಯೋಚಿಸಿ ಬರುವ ರೀತಿಯಲ್ಲಿ ವನಜಾರಿ ಮುಖನಾದ ಚಂದ್ರನು ಉದಯಿಸಿದನು)

ತನ್ನ ಕಪ್ಪು ಮಚ್ಚೆಯು ಮಲಸಂಹರನಾದ ಪರಮೇಶ್ವರನ ಹಣೆಯ ಮೇಲಿದ್ದರೂ ಹೋಗಲಿಲ್ಲ. ಶಿವಭಕ್ತನಾದ ಮುಗ್ಧಸಂಗಯ್ಯನ ಮುಗ್ಧಭಕ್ತಿಯ ಪಾದಗಳ ಸ್ಪರ್ಶದಿಂದಾದರೂ ತನ್ನ ಕಪ್ಪು ಮಸಿಯನ್ನು ಪರಿಹರಿಸಿಕೊಂಡು ಶುಭ್ರನಾಗುವೆನೆಂದು ಯೋಚಿಸಿದ ಚಂದ್ರನು ಮೆಲ್ಲನೆ ಉದಯಿಸಿದ ಎಂದು ಹೇಳುತ್ತಾನೆ ಕವಿ. ಮುಂದುವರೆದು ಭೀಮಕವಿಯು ಸೋಮನಾಥ ಹೇಳಿದ ವರ್ಣನೆಯನ್ನೇ ತಾನೂ ಹೇಳುತ್ತಾ

"ಬಸವನಸದೃಶಕೀರ್ತಿ ಪರ್ಬಿತು
ದೆಸೆದೆಸೆಯೊಳಾ ವಿಷಮನಯನನ
ಲಸಿತ ಸಿತಭಸಿತಾಂಗರಾಗಪ್ರಭೆ ಮುಸುಕಿತೆನಲು
ಹಸನದೀಧಿಸಿ ಮಿಗೆ ರಜತಗಿರಿ
ವಸುಗಳಭಿನವವಾಯಿತೆನಲಾ
ಗಸದೊಳೆಲ್ಲೆಡೆಯೊಳು ಬಲಿದು ಬೆಳದಿಂಗಳಗ್ಗಳಿಸೆ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೧೧.ಪ.೩೭)

ಹೀಗೆ ವರ್ಣನೆಗಳಲ್ಲಿ ಇಬ್ಬರೂ ಕವಿಗಳು ಸರಿಸಮಾನವಾಗಿ ತಮ್ಮ ಪ್ರತಿಭೆಯನ್ನು ತೋರಿಸಿದ್ದಾರೆ. ಸೋಮನಾಥನ ವರ್ಣನಾ ವೈಶಿಷ್ಟ್ಯವನ್ನೇ ಭಾಷಾಂತರ ಮಾಡಿಕೊಂಡು ಸೋಮನಾಥನ ಭಾವದ ಜೊತೆಗೆ ತನ್ನ ಭಾವನೆಗಳನ್ನು ಕೂಡಿಸಿ ವರ್ಣನೆ ಮಾಡಿರುವುದು ಕನ್ನಡ 'ಬಸವಪುರಾಣ'ದಲ್ಲಿ ಕಾಣಬಹುದು. ಸೂರ್ಯೋದಯ, ಸೂರ್ಯಾಸ್ತ, ಚಂದ್ರೋದಯ ವರ್ಣನೆಗಳನ್ನು ಈ ಬಗೆಯಲ್ಲಿ ವರ್ಣಿಸಿದ ಕವಿಗಳು ಓದುಗರ ಹೃದಯವನ್ನು ಹೊಕ್ಕಿದ್ದಾರೆ. ಇಲ್ಲಿನ ಕಾವ್ಯ ಶೈಲಿ, ನಿರೂಪಣಾ ವಿಧಾನಗಳು ಕಥಾ ಸಂದರ್ಭಕ್ಕೆ ಒಪ್ಪುವಂತೆ ಚಿತ್ರಿಸಿದ್ದಾರೆ. ಅತೀ ರಂಜಕತೆಯನ್ನು ವೈಭವವನ್ನು ತೋರಿಸಿದೆ. ಒಂದು ಭಕ್ತಿಪ್ರಧಾನವಾದ ಪುರಾಣಕ್ಕೆ ವರ್ಣನೆಗಳು ಎಷ್ಟು ಅವಶ್ಯವೋ ಅಷ್ಟನ್ನು

ಮಾತ್ರ ಸೇರಿಸಿದ್ದಾರೆ. ಅತಿಯಾದ ವರ್ಣನೆಗಳನ್ನು ಮಾಡುತ್ತಾ ಕಾವ್ಯಬಂಧಕ್ಕೆ ಧಕ್ಕೆಯುಂಟಾಗದಂತೆ ಜಾಗರೂಕತೆಯನ್ನು ವಹಿಸಿದ್ದಾರೆ. ಕವಿಗಳ ಪ್ರಕೃತಿ ಪ್ರೇಮ ಅಸಾಧಾರಣವಾದುದು. ಇವರು ಪ್ರಕೃತಿ ಸೌಂದರ್ಯವನ್ನು ಶ್ರದ್ಧೆ ಮತ್ತು ಭಕ್ತಿಪೂರ್ವಕವಾಗಿ ಸವಿದಿದ್ದಾರೆ ಎಂಬುದಕ್ಕೆ ಅವರು ವರ್ಣಿಸಿರುವ ಮೇಲಿನ ವರ್ಣನೆಗಳೇ ಇದಕ್ಕೆ ನಿದರ್ಶನ. ಇವರ ವರ್ಣನೆಗಳು ಕೇವಲ ಪ್ರತಿಕೃತಿಗಳಾಗಿರದೆ ಪ್ರತಿಮೆಗಳಾಗಿರುತ್ತವೆ. ಔಚಿತ್ಯಪೂರ್ಣ ಅರ್ಥಗರ್ಭಿತವಾಗಿವೆ.

ಪ್ರಕೃತಿ ವರ್ಣನೆಗಳಲ್ಲಿ ಋತುವರ್ಣನೆಯೂ ಒಂದು. ಪ್ರಕೃತಿಯ ಕಾಲಕಾಲದ ಬದಲಾವಣೆಗಳಿಗೆ ಋತುಗಳ ಬದಲಾವಣೆಯೂ ಆಗುತ್ತಿರುತ್ತದೆ. 'ಬಸವಪುರಾಣ'ದಲ್ಲಿ ಋತುವರ್ಣನೆಗಳ ಹೆಚ್ಚಿನ ವಿವರಗಳು ಬಂದಿಲ್ಲ. ನಂದಿಕೇಶ್ವರನ ಅವತಾರದ ಕಥೆಯನ್ನು ಈಶ್ವರನು ಪಾರ್ವತಿಗೆ ಹೇಳುವ ಸಂದರ್ಭದಲ್ಲಿ ಸಂಕ್ಷಿಪ್ತವಾಗಿ ಚಳಿಗಾಲದ ವರ್ಣನೆಯನ್ನು ಮಾಡಲಾಗಿದೆ.

"...ಮದೀಯಾರ್ಂಘ್ರಿ ಕಮಲಂಬುಲಾತ್ಮ
ಲೋ ನಿಡುಕೋನಿ ಭಕ್ತಿಲೋಲತ್ವ ಮೆಸಂಗ
ಬಲುವಿಡಿಂ ನಾಜುನೇಜುಲ ನಟ್ಟನಡುಮಂ
ಜಲಿಕಾಲ ಮೆಲ್ಲಂ ಬುಕ್ಕಿಲಿಬಂಟಿ ನಿಲಿಚಿ"

(ಗೂ.ವೆಂ.ಸು.(ಸಂ),ಬ.ಪು.,ಪ್ರ.ಆ.ಸಾ.೪೦೧-೪೦೪)

"ಹರಿವ ತೊಜೆಗಳ ನಡುವೆ ಧೃತಿಯೋ
ಸರಿಸದುಜೆ ಚಳಿಗಾಲವೆಲ್ಲಂ
ನಿರುತದಿಂ ಕೊರಳುದ್ದ ನೀರೊಳು ನಿಂದು ಕಾಲೊಂದ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೨.ಪ.೧೨)

ಚಳಿಗಾಲದ ಪ್ರಖರತೆಯನ್ನು ಹೇಳುತ್ತಾ ಹರಿವ ತೊರೆಗಳ ನಡುವೆ ನಿಂತಾಗ ಆಗುವಷ್ಟು ಚಳಿಯು ಕೊರಳಿನವರೆಗೆ ವ್ಯಾಪಿಸಿತ್ತು ಎಂದು ಹೇಳುತ್ತಾರೆ. ಹಾಗೆಯೇ ಗ್ರೀಷ್ಮ ಋತುವಿನ ವರ್ಣನೆಯನ್ನು ಮಾಡುವಾಗ ಬಿಸಿಲಿನ ತಾಪವನ್ನು ಹೇಳುತ್ತಾ ಸೋಮನಾಥನು ಹೇಳುವುದು ಹೀಗೆ

"ದಲಂಚಿನ ಡೆಂದಿಂಬು ದಾಪಂಬುಂಬೊಂದಂ
ಬಲಿಕಿನ ನೋರೆಲ್ಲಂ ಬಟಪಟಂಬಗುಲಂ
ಜೂಚಿನ ಜೆಪ್ಪಲು ಸುಜಿಚುಜಿಂ ಗಮರ
ನೇಚಿನಯೆಂಡಲ ನೆಡಪಕ ನಿಲಿಚಿ
ಭುವಿಯ ವಡಂಕ ಸಂಭೋನಿದು ಲಿಂಕ
ರವಿಶಶಿಲೊ ಗ್ರುಂಕ ಗೂರ್ಮಂಬು ದಲಂಕ

ದಿಕ್ಕರೀಂದ್ರಲು ದ್ರುಂಗ ದಿಕ್ಕುಲ ಗ್ರೂಂಗು
ನಕ್ಕುಲಾದ್ರುಲು ಪ್ರಗ್ಗನಹಿಪತಿ ಮ್ರೊಗ್ಗ
ದಿಕ್ಪತುಲೆ ಬೆದರ ನದ್ಧಿವಿಯೆಲ್ಲ ನುದರ
ವಾಕ್ಪತಿ ಯದರ ನದ್ವರಮುಲು ಸೆದರೆ"

(ಗೂ.ವೆಂ.ಸು.(ಸಂ),ಬ.ಪು.,ಪ್ರ.ಆ.ಸಾ.೪೧೧-೪೨೦)

(ನೆನೆದ ಹೃದಯವು ಬಿಸಿಯಾಗಿ, ಬಾಯೆಲ್ಲವೂ ಪಟಪಟನೊಡೆದು ಕಾಯುವ ರೆಪ್ಪೆಗಳು ಸುರಸುರನೆ ಕಮರಿದವು. ಉರಿಯುವ ಬಿಸಿಲಲ್ಲಿ ನಿರಂತರ ನಿಂತು ಭೂಮಿಯು ಕಂಪಿಸಲು ಅಂಬೋನಿಧಿಗಳು ಬತ್ತಿದವು. ಸೂರ್ಯ-ಚಂದ್ರರು ಮುಳುಗಲು ದಿಕ್ಕುಗಳು ನಡುಗಿ, ದೆಸೆಗಳು ಕುಗ್ಗಿ, ಕುಲಗಿರಿಳು ಬಿದ್ದು, ದಿಕ್ಪತಿಗಳು ಅದುರಿದರು. ಭೂಮಿಯಲ್ಲವು ಬೆದರಿ ಚದುರಿತು)

ಮೇಲಿನ ಸಾಲುಗಳಲ್ಲಿ ಬಿಸಿಲಿನ ಉರಿತಾಪದ ಪ್ರಖರತೆಯನ್ನು, ಅದು ಭುವಿಯ ಜೀವರಾಶಿಗಳ ಮೇಲೆ ಮಾಡಿದ ಘೋರ ಪರಿಣಾಮವನ್ನು ಸೋಮನಾಥ ಕವಿಯು ವ್ಯಕ್ತಪಡಿಸಿದ್ದಾನೆ. ಹೃದಯಗಳು ಬೇಯುವಿಕೆ, ಕಣ್ಣಗಳು ಕಮರುವಿಕೆ, ಭುವಿಯ ಕಂಪನ, ದಿಕ್ಕುಗಳ ಕುಗ್ಗುವಿಕೆ ಈ ಪದಗಳು ಬೇಸಿಗೆಯ ಭಯಾನಕತೆಯನ್ನು ಹೇಳುತ್ತವೆ. ಇವೇ ಮಾತುಗಳ ವರ್ಣನೆಗಳಲ್ಲಿಯೇ ಭೀಮಕವಿಯೂ ತನ್ನ 'ಬಸವಪುರಾಣ'ದಲ್ಲಿ ಹೇಳಿದ್ದಾನೆ.(ಸಂಧಿ-೨.ಪದ್ಯ.೧೩,೧೪,೧೫)

ಹೀಗೆ ಒಂದು ವಸ್ತುವನ್ನೋ, ಒಂದು ಸನ್ನಿವೇಶವನ್ನೋ ಕಣ್ಣೆದುರಿಗೆ ನೋಡುತ್ತಿವೆಯೇನೋ ಎಂಬಂತೆ ಇಬ್ಬರೂ ಕವಿಗಳು ಸುಂದರವಾದ ವರ್ಣನೆಗಳನ್ನು ಮಾಡಿದ್ದಾರೆ. ಅವರು ಕೊಡುವ ಸನ್ನಿವೇಶದ ಚಿತ್ರಗಳು ಓದುಗರನ್ನು ಆಕರ್ಷಿಸುತ್ತವೆ. ಇಂತಹ ದರ್ಶನವನ್ನು ಗಂಭೀರವಾಗಿ ಕಾಣಿಸುವ, ಕಟ್ಟುವ ಕಲೆ ಇಬ್ಬರಲ್ಲೂ ಇದೆ. ಗಿರಿಶಿಖರ, ಸೂರ್ಯ, ಚಂದ್ರ, ಋತುಗಳು, ಮೃಗಪಕ್ಷಿಗಳು ಮುಂತಾದುವೆಲ್ಲವನ್ನೂ ತೆರೆದ ಕಣ್ಣಿನಿಂದ ನೋಡಿದ್ದಾರೆ. ಮನುಷ್ಯ ಪ್ರಪಂಚದ ಸೌಂದರ್ಯವನ್ನು ಆಸಕ್ತಿಯಿಂದ ಅನುಭವಿಸಿ ಸ್ವಲ್ಪವೂ ಲೋಪವಿಲ್ಲದಂತೆ ತಮ್ಮ ಪುರಾಣಗಳಲ್ಲಿ ವರ್ಣಿಸಿದ್ದಾರೆ. ಪ್ರಕೃತಿಯ ನೈಜ ಚಿತ್ರಣವನ್ನು ಓದುಗರಿಗೆ ಉಣಬಡಿಸುವುದರಲ್ಲಿ ಇಬ್ಬರು ಕವಿಗಳು ಯಶಸ್ವಿಯಾಗಿದ್ದಾರೆ.

**ಪುತ್ರೋದಯ ವರ್ಣನೆ :**

ಅಷ್ಟಾದಶ ವರ್ಣಗಳಲ್ಲಿ ಕಥಾನಾಯಕನ ಜನನ ಪ್ರಸಂಗವು ಪ್ರಮುಖವಾದ ಭಾಗವಾಗಿದೆ. ಈ ವರ್ಣನೆಯಲ್ಲಿನ ಪ್ರಮುಖ ಅಂಶಗಳೆಂದರೆ ಮಕ್ಕಳಿಲ್ಲದೆ ಪರಿತಪಿಸುವ ದಂಪತಿಗಳ ಚಿತ್ರಣ, ಮಕ್ಕಳ ಫಲಕ್ಕಾಗಿ ವ್ರತನೇಮಗಳ ಆಚರಣೆ ಮಾಡುವುದು, ಪುತ್ರ ಜನನದ ಮುಂದಿನ ಶುಭಸೂಚಕವಾಗಿ ಕನಸುಗಳು ಬೀಳುವುದು, ನಂತರ ಕುಮಾರ ಜನನ ಬಾಲಲೀಲೆಗಳು, ನಾಮಕರಣ, ವಿದ್ಯಾಭ್ಯಾಸ ಮುಂತಾದವು ಪ್ರಮುಖವಾದುವುಗಳಾಗಿವೆ. ಈ ಹಿನ್ನೆಲೆಯಲ್ಲಿ 'ಬಸವಪುರಾಣ'ಗಳಲ್ಲಿ ಮೇಲಿನ ಎಲ್ಲಾ ಅಂಶಗಳನ್ನು ಕವಿಗಳು ಚಿತ್ರಿಸಿರುವುದು ಕಂಡುಬರುತ್ತದೆ.

ಗುರುತರೋನ್ನತವಾದ ಶ್ರೀಗಿರಿಯ ಪಡುವಣ ದಿಕ್ಕಿನಲ್ಲಿರುವ ಕರ್ನಾಟಕ ದೇಶದಲ್ಲಿ ಒಪ್ಪಿರುವಂತಹ ಹಿಂಗುಳೇಶ್ವರ ಬಾಗೇವಾಡಿಯಲ್ಲಿ ಅತ್ಯಂತ ಸದ್ಭಕ್ತಿಶೀಲನು, ಸರ್ವಸಂಪನ್ನನೂ ಆದ ಮಂಡಿಗೆ ಮಾದಿರಾಜಯ್ಯ ಮತ್ತು ಆತನ ಸತಿ ಮಾದಾಂಬೆ ಎಂಬ ದಂಪತಿಗಳು ವಾಸಿಸುತ್ತಿದ್ದರು. ಅನೇಕ ವರ್ಷಗಳುರುಳಿದರೂ ಮಕ್ಕಳಾಗದಿದ್ದಕ್ಕಾಗಿ ಕಡುದುಃಖಿತಳಾಗಿ ಎಲ್ಲಾ ರೀತಿಯ ಪೂಜೆಗಳನ್ನು ಮಾಡಿಸುತ್ತಿದ್ದರು. ಹಲವು ಗ್ರಂಥಗಳನ್ನು ತರಿಸಿ ಪುತ್ರ ಸಂತಾನಕ್ಕಾಗಿ ಮಾಡಬೇಕಾದ ಪೂಜೆಗಳ ವಿವರಗಳನ್ನು ಹುಡುಕಿದರು. ಕೊನೆಗೆ "ನಂದಿಕೇಶ್ವರನ ನೋಂಪಿ ಕಾಮ್ಯಾರ್ಥ ಸಿದ್ಧಿಗೆ ಕಾರಣ" ಎಂಬುದನ್ನು ತಿಳಿದ ಸತಿ-ಪತಿಗಳು ನಂದಿಪೂಜೆಯನ್ನು ಮಾಡಲು ಮುಂದಾಗುತ್ತಾರೆ. ನಂದಿನಾಥ ದೇವಾಲಯಕ್ಕೆ ಬಂದು ಸರ್ವಾಂಗನ್ನೂ ನೆಲಕ್ಕೆ ತಾಗಿಸಿ ಭಕ್ತಿಯಿಂದ ನಮಿಸಿ ಪೂಜಿಸಿದರು. ಒಂಬತ್ತು ಸೋಮವಾರಗಳು ತಪ್ಪದೇ ಬಂದು ನಂದಿಗೆ ಮಜ್ಜನ ಮಾಡಿಸಿ ಸುಂದರವಾಗಿ ಚಂದನ ಕುಸುಮಗಳನ್ನು ಅಲಂಕರಿಸಿ, ಮೆತ್ತನೆಯ ವಸ್ತ್ರಗಳನ್ನು ಮೈತುಂಬಾ ಹೊದಿಸಿ ವಿವಿಧ ಆಭರಣಗಳನ್ನು, ಗೆಜ್ಜೆಗಳನ್ನು ತೊಡಿಸುತ್ತಿದ್ದರು. ಅಕ್ಷತೆಗಳನ್ನು ಅರ್ಪಿಸಿ ಧೂಪ-ದೀಪಗಳನ್ನು ಹಚ್ಚಿ ಪಂಚ ಭಕ್ಷ್ಯವನ್ನು ನೀಡಿ, ಸಕ್ಕರೆಯಲ್ಲಿ ತುಪ್ಪವನ್ನು ಬೆರಸಿ ಪ್ರಸಾದವನ್ನು ಇಡುತ್ತಿದ್ದರು. ಹೀಗೆ ನಿತ್ಯವೂ ಪೂಜೆಗೈಯುತ್ತಾ ಆ ನಂದಿನಾಥನಿಗೆ ಭಕ್ತಿಯಿಂದ ಕೈಮುಗಿದು ಮಾದಾಂಬೆಯು

"ನಂದೀಶ ನಂದೀಶ ನವನಂದಿನಾಥ
ಇಂದುಕಳಾಧರು ನೆಕ್ಕುಡುಂಗುಬ್ಬ
ನಾಯನ್ನ ನಾತಂಡ್ರಿ ನಾಯಾಲಜೇಂಡ
ನೀಯಟ್ಟಿ ಸದ್ಭಕ್ತು ನೀಯಟ್ಟಿ ಪುತ್ರು
ಖ್ಯಾತಿಗಾ ನೊಕ್ಕನಿಂ ಗರುಣಿಂಚಿತೇನಿ
ಪ್ರೀತಿ ಯಲರ್ಪ ನೀ ಪೇರಿಡುದಾನ"

(ಗೂ.ವೆಂ.ಸು.(ಸಂ),ಬ.ಪು.,ಪ್ರ,ಆ.ಸಾ.೬೨೧-೬೨೬)

(ನಂದೀಶ, ನಂದೀಶ ನವನಂದಿನಾಥ ಇಂದು ಕಳಾಧರನೇ, ಎನ್ನಣ್ಣ, ಎನ್ನಪ್ಪ, ಎನ್ನಯ ಬಸವ ನಿನ್ನಂಥ ಸದ್ಭಕ್ತ, ನಿನ್ನಂಥ ಒಬ್ಬ ಪುತ್ರನನ್ನು ಖ್ಯಾತಿಯಿಂದ ಕರುಣಿಸು. ಪ್ರೀತಿಯಿಂದ ನಿನ್ನ ಹೆಸರನ್ನಿಡುವೆನು)

ಎಂದು ಬೇಡಿಕೊಳ್ಳುತ್ತಾಳೆ. ದಂಪತಿಗಳ ನಿತ್ಯನೇಮಕ್ಕೆ ಮತ್ತು ಅವರ ಕೋರಿಕೆಯನ್ನು ಈಡೇರಿಸಲು ನಂದಿನಾಥನು ಶುಭಸೂಚಕವಾದ ಪ್ರಸಾದವನ್ನು (ಹೂವು) ನೀಡುತ್ತಾನೆ. ದೇವರು ನೀಡಿದ ಪ್ರಸಾದವನ್ನು ಭಕ್ತಿಯಿಂದ ನಮಿಸಿ ಹೃದಯಕ್ಕೆ ವದನಕ್ಕೆ ಮುಟ್ಟಿಸಿಕೊಂಡು ತನ್ನ ತಲೆಯಲ್ಲಿ ಮುಡಿದುಕೊಳ್ಳುತ್ತಾಳೆ. ಈ ವರ್ಣನೆಯನ್ನು ಭೀಮಕವಿಯೂ ತನ್ನ 'ಬಸವಪುರಾಣ'ದಲ್ಲಿ ಯಥಾ ರೀತಿಯಲ್ಲಿ ವರ್ಣಿಸಿದ್ದಾನೆ. (ಸಂಧಿ-೨, ಪದ್ಯ-೫೪, ೫೫) ನಂದಿನಾಥನ ಪ್ರಸಾದದಿಂದ ಸಂತೃಪ್ತರಾಗಿ ಸಂತೋಷದಿಂದ ಮನೆಗೆ ಮರಳಿದ ದಂಪತಿಗಳಿಗೆ ಕೆಲದಿನಗಳ ಬಳಿಕ ತಮ್ಮ

ಪ್ರಯತ್ನದ ಫಲ ಕೈಗೂಡಿದ ಶುಭಸೂಚನೆ ಎಂಬಂತೆ ಮಾದಾಂಬಿಕೆಯಲ್ಲಿ ಗರ್ಭ ಚಿಹ್ನೆಗಳಂಕುರಿಸುತ್ತವೆ. ಗರ್ಭವನ್ನು ಧರಿಸಿದ ಮಾದಾಂಬೆಯ ಚಿತ್ರಣವನ್ನು ಇಬ್ಬರೂ ಕವಿಗಳು ಸೊಗಸಾಗಿ ಚಿತ್ರಿಸಿದ್ದಾರೆ. ಗರ್ಭಧರಿಸಿದ ಹೆಣ್ಣಿನ ಅಂಗಾಂಗಳು ವೃದ್ಧಿಸುವಿಕೆ, ಅವಳ ಚೆಲುವು, ಆ ಸಂದರ್ಭದಲ್ಲಿನ ಆಕೆಯ ಬಯಕೆಗಳನ್ನು ಕವಿಗಳು ವರ್ಣಿಸಿದ್ದಾರೆ. ಮಾದಾಂಬೆಯ ಈ ಚಿತ್ರಣವನ್ನು ಭೀಮಕವಿ ಹೇಳುವುದು ಹೀಗೆ

"ಅಮೃತತನುವಿನ ತನಯನುದರದೊ
ಳಯಮರ್ದಿರಲು ಹಸಿವಿಲ್ಲದಾದುದು
ರಮಣಿಗುತ್ತಮ ಭಕ್ತಿರುಚಿಕನು ಬಸುಜೊಳಿಹನಾಗಿ
ಕಮಳವದನೆಗೆ ರುಚಿಯರುಚಿಯಾ
ಯ್ತಮಳಕಾಯದ ಮೂರ್ತಿ ಸುದತಿಯ
ನಿಮಿರ್ದ ಜಠರದೊಳಿರೆ ತನೂಲತೆ ಬೆಳಪು ಬಲಿದಪುದು"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೩.ಪ.೧)

ಬಸವ ಕುಮಾರನು ತಾಯಿಯ ಗರ್ಭದಲ್ಲಿ ದಿನೇ ದಿನೇ ಬೆಳೆಯುತ್ತಿರಲು ಮಾದಾಂಬಿಕೆಗೆ ಹಸಿವೇ ಇಲ್ಲವಾಗುತ್ತದೆ. ರುಚಿಗಳೆಲ್ಲ ಅರುಚಿಗಳಾಗುತ್ತವೆ. ಅವಳ ಚೆಲುವು ಮತ್ತಷ್ಟು ಬಿಳುಪುಗೊಂಡು ಹೆಚ್ಚಾಗುತ್ತದೆ. ಆಕಳಿಕೆಗಳು, ವಾಕರಿಕೆಗಳು ಬರುತ್ತವೆ. ಮೊಲೆತೊಟ್ಟು ಕಪ್ಪಾಗುತ್ತದೆ. ಆಕೆಯ ನಡುವಿನ ಬಡತನ ಹೆಚ್ಚಾಗುತ್ತದೆ. ನಡಿಗೆಯ ವೇಗ ಕಡಿಮೆಯಾಯಿತು ಎಂದು ಕವಿ ಹೇಳಿರುವುದು ಮಗುವಿನ ಬೆಳವಣಿಗೆಯನ್ನು ಸೂಚಿಸುತ್ತದೆ. ಹೀಗೆ ಸೊಂಪಾಗಿ, ಇಂಪಾಗಿ ಬೆಳೆಯುತ್ತಿರುವ ಮಗುವಿಗೆ ತಾಯಿಯ ಗರ್ಭಶಯವೇ ತನ್ನ ಸುಖಸಮಾದಿಗೆ ತಾಣವಾಗಿದೆ ಎಂದು ಹೇಳುತ್ತಾರೆ ಕವಿಗಳು. ತಾಯಿ ಗರ್ಭದಿಂದ ಬಸವಣ್ಣ ಜನಿಸುವ ರೀತಿಯನ್ನು ಭೀಮಕವಿ ಹೀಗೆ ಹೇಳುತ್ತಾನೆ.

"ಪ್ರೀತಿಯಲಿ ಪುತ್ರನು ಕರಂಭೋ
ಜಾತಮುಕುಳಿತನಾಗಿ ಮೆಲ್ಲನೆ
ಮಾತೆಯುದರದೊಳುದಯಿಸಲು ಅಧೋದಯದೊಳಾಗ
ಆ ತನಯನೊಳಗಿಹ ಶಿವಂ ವಿ
ಖ್ಯಾತಗುರ್ವಾಕಾರಮಂ ತಾ
ಳ್ದಾತನಂಗದ ಮೇಲೆ ಲಿಂಗಸಂಗವಂ ಮಾಡಿ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೩.ಪ.೨೪)

ಸೋಮನಾಥನು ಕೂಡ ಇದೇ ರೀತಿಯಾಗಿ ಬಸವಣ್ಣನ ಜನನದ ಸಂದರ್ಭವನ್ನು ವರ್ಣಿಸಿದ್ದಾನೆ. (ಪಾ.ಸೋ.ಪ್ರ.ಆ.ಸಾ.೭೫೭-೭೬೨) ಹುಟ್ಟಿದ ಮಗುವಿಗೆ ಮುನ್ನಿನ ನೇಮದಂತೆ 'ಬಸವಾ' ಎಂಬ ಹೆಸರನ್ನಿಡುವರು. ದಿನದಿಂದ ದಿನಕ್ಕೆ ಬೆಳೆದ ಬಾಲಕ ಬಸವಣ್ಣನ ಬಾಲಲೀಲೆಗಳನ್ನು ಕವಿಗಳು ವೀರಶೈವಾಚಾರ ನೀತಿ, ಧರ್ಮಕ್ಕನುಗುಣವಾಗಿ ವರ್ಣಿಸಿದ್ದಾರೆ.

ಬಸವಣ್ಣನ ಬಾಲಲೀಲೆಗಳೆಲ್ಲವೂ ವೀರಶೈವ ಮಾರ್ಗ ನೀತಿಗೆ ಸಂಬಂಧಿಸಿದವು ಎಂಬುದು ಅವನು ಆಡುವ ಲೀಲೆಗಳು ತೋರುತ್ತವೆ. ಹಿಂದೆ ಕತ್ತಲೆಯಿದೆ; ತನದೆಷ್ಟು ತೇಜವೆನ್ನುವಂತೆ ದೀಪವನ್ನು ಕಂಡು ನಗುವನು. ಮೊಲೆಹಾಲು ಕುಡಿಯುವ ಬಾಲಕ ಶಿವಸುಖಾಮೃತವನ್ನು ಸವಿಯುವನೆಂಬಂತೆ ಹಸ್ತಗಳನ್ನು ಚೀಪುತ್ತಿರುತ್ತಾನೆ. ಗಲಿಬಿಲಿ ಸಂಸಾರಗಳನ್ನು ಒಪ್ಪದವನಂತೆ, ನಲಿವಿನಿಂದ ಕೈಕಾಲುಗಳನ್ನು ಆಡಿಸುತ್ತಾನೆ. ಮಾಯಾ ಪ್ರಪಂಚಗಳು ಬಳಿ ಬರದಂತೆ ಕಾಲುಗಳನ್ನು ಝಾಡಿಸುತ್ತಿರುತ್ತಾನೆ. ಶಿವನ ಅಪ್ಪಣೆಯ ಮೇರೆಗೆ ಶಿವಧರ್ಮವನ್ನು ಪಸರಿಸಲು ಬಂದ ಕೆಲಸಗಳು ತಡವಾಗುತ್ತಿವೆಯೇನೋ ಎಂಬಂತೆ ಹೆದರಿ ಬೆಚ್ಚುತ್ತಿರುತ್ತಾನೆ. ಭವಸ್ತುತಿಯ ಆನಂದ ಭಾಷ್ಪಗಳನ್ನು ಉಗುಳುವ ರೀತಿ ಕಣ್ಣುಗಳಲ್ಲಿ ನೀರುಕ್ಕಿಸುತ್ತಾನೆ. ಭವಬಾಧೆಗಳನ್ನು, ಹಿಂಸೆಯನ್ನು ತಾಳುತ ಮೊರೆಯಿಡುವ ಭವಿಗಳನಾಲಿಸುವಂತೆ ಆಲಿಸುತ್ತಾನೆ. ಶ್ರೀಮಂತರ ಕಾಲ ಮೇಲೆ ಬಿದ್ದು ಮೊರೆಯಿಡುವಂತೆ ನೆಲದ ಮೇಲೆ ಬೋರಲಾಗಿ ಬೀಳುವನು. ಭೂಮಿಯಲ್ಲಿ ಮರೆತ ನಿರ್ಮಲವಾದ ಶಿವಭಕ್ತಿ ತಲೆ ಎತ್ತುವಂತೆ ತಾ ತಲೆಯನೆತ್ತುವನು. ಪದ್ಮಾಸನವನ್ನು ಅಭ್ಯಾಸಿಸುವಂನಂತೆ ಕುಳಿತುಕೊಳ್ಳುತ್ತಾನೆ. ತಾನು ನಂದಿ ಎಂಬ ಭಾವವನ್ನು ತಳೆಯುತ್ತಾನೆ. ವೀರ ಮಹೇಶ್ವರಾಚರಗಳೆಲ್ಲ ರಾಶಿಯಾಗುತ ನಿಲ್ಲುವಂತೆ ನಿಲ್ಲುವನು. ಆದಿಮಾರ್ಗವು ತಪ್ಪದಂತೆ ಪಾದಗಳನ್ನು ಇಡುತ್ತಿದ್ದನು. ಶಿಭಕ್ತರು ಕುಣಿವಂತೆ ಕುಣಿದಾಡುವನು. ಬಾಲಕನಾಗಿ ವಿನೋದವಾಡುವ ಪ್ರಾಯದಲ್ಲಿ ಶಿವಾರ್ಚನೆಯನ್ನು ಮಾಡುತ್ತಿದ್ದನು. ಬುದ್ಧಿಯು ಬೆಳೆಯುವ ಈ ಚಿಕ್ಕಪ್ರಾಯದಲ್ಲಿ ಸಿದ್ಧಭಕ್ತರ ಶಿವನಂತೆ ಕಾಣುವನು.(ಪಾ.ಸೋ.ಪ್ರ.ಆ.ಸಾ.೮೧೧-೮೪೮) ಭೀಮಕವಿಯು ಇದೇ ರೀತಿಯಲ್ಲಿ ಬಸವಣ್ಣನ ಬಾಲಲೀಲೆಗಳನ್ನು ತನ್ನ 'ಬಸವಪುರಾಣ'ದಲ್ಲಿ ವರ್ಣಿಸಿದ್ದಾನೆ.(ಭೀ.ಸಂ-೩.ಪ.೩೪-೪೧) ಬಸವಣ್ಣನ ವಿದ್ಯಾಭ್ಯಾಸವನ್ನು ಕುರಿತು ಸೋಮನಾಥ ಹೇಳುವುದು "ಸರ್ವವಿದ್ಯೆಗಳು ಸಹಜವಾಗಿ ಬಂತು" ಎಂದು ಮಾತ್ರ ಹೇಳಿದರೆ ಭೀಮಕವಿಯು ಬಸವಣ್ಣನು ಕಲಿತ ಎಲ್ಲಾ ವಿದ್ಯೆಗಳ ಸಮಗ್ರ ಮಾಹಿತಿಯನ್ನು ಕೊಡುತ್ತಾನೆ.

"ಬರೆಹ ವಾಚನ ಗಣಿತ ಶಬ್ದಾ
ರ್ಥ ರಸ ಭಾವೋಕ್ತಿ ಪ್ರವೀಣತೆ
ಭರತ ಛಂದೋ ವ್ಯಾಕರಣ ಸಂಗೀತ ಸಾಹಿತ್ಯ
ಹರರಹಸ್ಯಾಗಮ ಪುರಾಣೋ
ತ್ತರ ಸಕಳ ವೇದಾದಿ ಕಲೆಗಳು
ಸ್ಮರಿಸಲೊಡನೆ ಮುಖೋದ್ಗತಂ ಬಸವಂಗದೇವೊಗಳ್ವೆ"

(ಎಸ್.ವಿದ್ಯಾಶಂಕರ(ಸಂ).ಬ.ಪು.ಸಂ.೩.ಪ.೪೨)

ಹೀಗೆ ಬಸವಣ್ಣನು ಕಲಿತ ಸಮಗ್ರ ವಿದ್ಯೆಗಳನು ಪರಿಚಯಿಸುವುದರ ಮೂಲಕ ಬಸವಣ್ಣ ಸರ್ವ ವಿದ್ಯೆಗಳಲ್ಲಿಯೂ ಪಾಂಡಿತ್ಯಗಳಿಸಿದ್ದನು ಎಂಬುದನ್ನು ಭೀಮಕವಿ ಸೂಚಿಸುತ್ತಾನೆ. ಈ

ರೀತಿಯಾಗಿ ಎರಡೂ ಬಸವಪುರಾಣಗಳಲ್ಲಿ ಪುತ್ರೋದಯದ ವರ್ಣನೆಗಳನ್ನು ಸೋಮನಾಥ ಭೀಮಕವಿಯರು ಮಾಡಿದ್ದಾರೆ.

**ವಿವಾಹ :**

ಶೃಂಗಾರ ಭರಿತವಾದ ರಸ ನಿರೂಪಣೆಯನ್ನು ಕವಿಗಳು ವಿವಾಹ ವರ್ಣನೆಗಳಲ್ಲಿ ಮಾಡುತ್ತಾರೆ. ವಿವಾಹವು ಒಬ್ಬ ವ್ಯಕ್ತಿಯ ಜೀವನದಲ್ಲಿ ಅತೀ ಮುಖ್ಯಘಟ್ಟ. ಇಂತಹ ಮಹತ್ವದ ಘಟ್ಟವನ್ನು ಬಸವಣ್ಣನ ಮದುವೆಯ ಸಂದರ್ಭದಲ್ಲಿ ಕವಿಗಳು ನಿರೂಪಿಸಿದ್ದಾರೆ. ಮುಂಜಿ ಮಾಡಿಸಿಕೊಂಡು ಬ್ರಾಹ್ಮಣತ್ವಕ್ಕೆ ಬಂದಿಯಾಗಲು ಇಷ್ಟವಾಗದೆ ಬಸವಣ್ಣ ತಂದೆಯ ಮುಂಜಿ ಕಾರ್ಯವನ್ನು ಧಿಃಕ್ಕರಿಸಿ ಮನೆ ಬಿಟ್ಟು ಹೊರಡುತ್ತಾನೆ. ಹುಟ್ಟುತ್ತಲೇ ಕಂಜೆಡೆ ಮುಡಿಗಳ ನಡುವೆ ರುದ್ರಾಕ್ಷ ಭೂಷಣನಾಗಿ ಹುಟ್ಟಿದ ಬಸವಣ್ಣ ಚಿಕ್ಕವಯಸಿದ್ದಾಗಿನಿಂದಲೂ ಶಿವಧರ್ಮವನ್ನು ಮನಸಾರೆ ಇಷ್ಟಪಟ್ಟು ಪೂಜಿಸುತ್ತಿರುವುದರಿಂದ ಸಹಜವಾಗಿಯೇ ಬ್ರಾಹ್ಮಣ್ಯತ್ವವನ್ನು ವಿರೋಧಿಸಿ ತಂದೆ-ತಾಯಿಗಳನ್ನು ಬಿಟ್ಟು ಹೊರಡುತಾನೆ. ಈ ಸಂದರ್ಭದಲ್ಲಿ ಮುಂಜಿ ಕಾರ್ಯಕ್ಕೆಂದು ಆಗಮಿಸಿದ್ದ ಸೋದರ ಮಾವನೂ ಬಿಜ್ಜಳನ ಮಂತ್ರಿಯು ಆದ ಬಲದೇವ ದಂಡನಾಯಕನು ಬಸವಣ್ಣನ ಈ ನಿರ್ಧಾರವನ್ನು ನೋಡಿ ಅವನ ಶಿವತ್ವಕ್ಕೆ ಮೆಚ್ಚಿಕೊಳ್ಳುತ್ತಾನೆ. ಇಂತಹ ಶಿವಭಕ್ತನಿಗಲ್ಲದೆ ಇನ್ನೆಂತಹವನಿಗೆ ಮಗಳನ್ನು ನೀಡಬೇಕು ಇವನೇ ನನ್ನ ಮಗಳಿಗೆ ತಕ್ಕ ವರನೆಂದು ನಿಶ್ಚಯಿಸುತ್ತಾನೆ. ಬಸವಣ್ಣನಲ್ಲಿಗೆ ಬಂದು "ನನ್ನ ಮಗಳನ್ನು ಕೊಂಡು ನನ್ನನ್ನು ರಕ್ಷಿಸಿಸೈ ಬಸವಣ್ಣ ಮಹೇಶ್ವರ ತಿಲಕ" ಎಂದು ಪ್ರಾರ್ಥಿಸುತ್ತಾನೆ. ಬಸವಣ್ಣನೂ ಇದಕ್ಕೆ ಸಮ್ಮತಿ ಸೂಚಿಸುತ್ತಾನೆ. ಮದುವೆ ಸಂಭ್ರಮದೊಂದಿಗೆ ನಕರ ತೋರಣಗಳ, ಮಣಿತೋರಣಗಳ, ಮುಕುರ ತೋರಣಗಳನ್ನು ಕಟ್ಟಿ ಇಡೀ ಪುರವೇ ಶೃಂಗಾರಗೊಳ್ಳುತ್ತದೆ. ಬೀದಿಬೀದಿಗಳಲ್ಲಿ ಕಸ್ತೂರಿಯ ವಾಸನೆ, ರಂಗೋಲಿಗಳ ಚಿತ್ರಗಳು ಬಸವಣ್ಣನನ್ನು ಸ್ವಾಗತ ಕೋರುತ್ತವೆ. ಕೋಲಾಟ, ಕೇಳಿಕೆ, ಹಾಸ್ಯಗಳಿಂದ ಇಂಪಾದ ವೇಣುವೀಣಾ, ವಾದ್ಯಗಳ ನಾದಗಳು, ಆನಂದ ಗೀತೆಗಳು, ಶಂಕರ ಗೀತೆಗಳಿಂದ ಮದುವೆ ಮನೆಯ ಅತ್ಯಂತ ಸಂಭ್ರಮದಿಂದ ಕೂಡಿರುತ್ತದೆ. ಮದುಮಗನಾದ ಬಸವಣ್ಣನನ್ನು ಸೋಮನಾಥ ಮತ್ತು ಭೀಮಕವಿಯರು ಹೇಳುವುದು

> ಯಪ್ಪಾದ ಜಲಮುಲ ನಭಿಷಿಕ್ತುಂಡಗುಚು
> ನೊಪ್ಪು ದಿವ್ಯಾಂಬರಯುಗ್ಮಂಬು ಸಾತಿ
> ಬಸಿತಂಪು ನೆಱಪೂಂತ ಪಲಚಂಗಾಂಬೂಸಿ
> ನೊಸಲಂ ದ್ರಿಪುಂಡ್ರಂ ಮೊಪ್ಪೆಸಂಗ ಧರಿಂಚಿ
> ಮೌಳಿಂ ಬ್ರಸಾದ ಸುಮಂಬುಲು ದುಱಿಮಿ
> ಪೋಲಂಗ ರುದ್ರಾಕ್ಷಭೂಷುಲು ದಾಲ್ಚಿ

(ಗೂ.ವೆಂ.ಸು.(ಸಂ),ಬ.ಪು.,ಪ್ರ.ಆ.ಸಾ.೧೦೭೫-೧೦೮೦)

(ತೀರ್ಥಪಾದ ಜಲಗಳಿಂದ ಅಭಿಷಕ್ತನಾಗಿ, ದಿವ್ಯಾಂಬರವನ್ನುಟ್ಟು ಬಸಿತವನ್ನು ಪುಣ್ಯಮಯವಾಗಿ ಹಚ್ಚಿ, ಹಣೆಗೆ ವಿಭೂತಿಯು ಒಪ್ಪಿಧರಿಸಿ, ತಲೆಗೆ ಪ್ರಸಾದ ಸುಮಗಳನ್ನು ಮುಡಿದು ಒಪ್ಪುವ ರುದ್ರಾಕ್ಷಿಗಳನ್ನು ಧರಿಸಿ)

ಹೀಗೆ ತ್ರಿಮುಂಡ್ರವನ್ನು ಧರಿಸಿ ರುದ್ರಾಕ್ಷಿ ಭೂಷಣಗಳೊಂದಿಗೆ ಸಿದ್ಧವಾಗಿರುವ ಬಸವಣ್ಣನಿಗೆ "ಕಾಮಿನೀಜನ ತಿಲಕೆ ಯಿನುಪಮ ಶೃಂಗಾರವೆನಿಪ ಗಂಗಾಂಬೆಯನು" ಶುಭ ಮಹೂರ್ತದಲ್ಲಿ ಶಿವಧರ್ಮ ವಿಧಿಯ ಅನುಗುಣವಾಗಿ ಮದುವೆ ಮಾಡಿಕೊಡುತ್ತಾನೆ ಬಲದೇವ ದಂಡನಾಯಕ. ಈ ಭಾಗದಲ್ಲಿ ಸೋಮನಾಥ ತುಂಬಾ ಸಂಕ್ಷಿಪ್ತವಾಗಿ ಈ ಮದುವೆಯ ಸಮಾರಂಭವನ್ನು ಮುಗಿಸುತ್ತಾನೆ. ಇಲ್ಲಿ ಬಲದೇವನ ಮಗಳಾದ ಗಂಗಾಂಬಿಕೆಯ ಚೆಲುವಿನ ವರ್ಣನೆಗಳು ಕಡಿಮೆ. ಇದೇ ಸಂದರ್ಭವನ್ನು ಕನ್ನಡೀಕರಿಸಿರುವ ಭೀಮಕವಿ ಈ ಮದುವೆ ಸಮಾರಂಭವನ್ನು ಅತ್ಯಂತ ಸಂಭ್ರಮಗಳೊಂದಿಗೆ ವರ್ಣಿಸಿ ಆ ಕಾಲದ ಮದುವೆಯ ಒಟ್ಟಾರೆ ಚಿತ್ರಣಗಳನ್ನು ನಮಗೆ ಉಣಬಡಿಸುತ್ತಾನೆ. ಮಧುಮಗಳಾಗಿ ಶೃಂಗಾರಗೊಂಡ ಗಂಗಾಂಬಿಕೆಯನ್ನು ಅವಳ ಸಖಿಯರ ಮೂಲಕ ಭೀಮಕವಿ ವರ್ಣಿಸುವುದು ಹೀಗೆ

"ಬಾಲಕಿಯ ಮೆಲ್ಲಡಿಗಳೆಮ್ಮಯ
ಮೇಲೆ ಬಂದಪವೆಂದು ಪಂಕರು
ಹಾಳಿ ನಡುಕಡು ನೀರೊಳಗೆ ಪೊಕ್ಕಿಂತು ನಡೆಯುಡುಗೆ
ಸೋಲದಿಂ ದೆಸೆದೆಸೆಗೆ ಬಾಯ್ಬಿಡು
ತೇಳದಿರ್ದವು ಗಂಗಲಾಂಬೆಯ
ಲಾಲಿತ ಶ್ರೀಪದವನೆಂದೊಂದಿರ್ದಹೆವೊ ಎನುತ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೪ಪ.೧೬)

ಗಂಗಾಂಬಿಕೆಯು ಮದುವಣಗಿತ್ತಿಯಾಗಿ ಮೆಲ್ಲನೆ ನಡೆದುಬರುತ್ತಿರಲು ಕಮಲದ ಹೂಗಳು ಗಂಗಾಂಬಿಕೆಯ ಪಾದಗಳು ನಮ್ಮ ಮೇಲೆ ಬರುತ್ತವೆಂದು ನೀರಿನ ಆಳಕ್ಕೆ ಇಳಿದು ಅವಿತುಕೊಳ್ಳುತ್ತವೆ. ಅವಳ ಚೆಲುವಿನ ಮುಂದೆ ನಾವು ಸೋಲುತ್ತೇವೆ ಎಂಬ ಭಯದಿಂದ ನೀರಿನಿಂದ ಮೇಲೇಳದೆ ಅವಿತಿದ್ದವು ಎಂದು ಪುಣ್ಯಕಾಂತೆಯರು ಹೇಳುತ್ತಿದ್ದರು. ಅವಳ ಕಿರುದಾದ ತೊಡೆಗಳು ಬಾಳೆಯದಿಂಡುಗಳಂತೆ ನುಣುಪಾಗಿದ್ದವು. ಲತಾಬಳ್ಳಿಯಂತೆ ರಾಜೀವಲೋಚನೆಯ ನಡು ಕಡು ಸಣ್ಣದಾಗಿದೆ. ತಾವರೆಯ ಮುಗಳುಗಳು ಚಿಗುರುವಂತೆ ಗಂಗಾದೇವಿಯ ಮೊಲೆಗಳು ಚಿಗುರುತ್ತಿದ್ದವು. ಆಗತಾನೆ ಅರಳಿದ ನವೀನತೆಯ ಹೂಗಳು ಹೊಳೆಯುತ್ತಿರುವಂತಿರುವ ಅವಳ ಅಂಗೈಗಳು, ಕೆಂದಾವರೆಯಂತೆ ಮೃದುವಾಗಿರುವ ಅವಳ ಬೆರಳುಗಳು, ನಳನಳಿಸುವ ವಿಭೂತಿ, ಕೆನ್ನೆಗಳು ನಿರ್ಮಲವಾಗಿ ಹೊಳೆಯುತ್ತಿದ್ದವು. ಸುಮಧುರ ಅರುಣ ಬಿಂಬವೋ ಎನ್ನುವಂತೆ ದಂತ ಸಾಲುಗಳಿದ್ದವು. ತಿಳಿಗಾಳಿಗೆ ಅಲುಗಾಡುವ ಎಲೆಗಳಂತಿರುವ ಅವಳ ಹುಬ್ಬುಗಳು ಕಾಮನ

ಬಿಲ್ಲಿನಂತಿದ್ದವು. ಕಾಂತಿಯುತವಾಗಿ ಮಿನುಗುವ ಇವಳ ಕಣ್ಣುಗಳನ್ನು ಚಂದ್ರನ ಬಿಂಬವನ್ನು ಮುಂಚೆ ರಚಿಸಿ ಜಾಣ್ಮೆಯಿಂದ ಅನಂತರ ಇವಳ ಕಣ್ಣುಗಳನ್ನು ಮಾಡಿದನೋ ಎಂಬಂತೆ ಕಾಣುತ್ತಿದ್ದವು. ಕಡುಕಪ್ಪು ಬಣ್ಣವನ್ನು ಅಣಿಕಿಸುವಂತಿದ್ದ ಅವಳ ಕೂದಲು ನೀಳವಾಗಿ ಬೆನ್ನ ಹಿಂದಿದ್ದವು. ಇವಳು ಈ ಭೂಮಿಗೆ, ಲಕ್ಷ್ಮಿಗೆ, ರೋಹಿಣಿಗೆ, ಭಾರತಿಗೆ, ರತಿಗೆ, ಅರುಂಧತಿಗೆ, ಸೀತೆಗೆ, ಜಾಹ್ನವಿಗೆ, ರವಿಸತಿಗಿಂತ ನೂರ್ಮಡಿಯಾಗಿ ಕಂಗೊಳಿಸುತ್ತಿದ್ದಳು. ಧೃತಿ, ಸಿರಿ, ಪ್ರಭೆ, ಜಾಣ್ಮೆ, ರೂಪು, ಉನ್ನತಿ, ಪತಿವ್ರತದಾಚರಣೆಯಲ್ಲಿ ಪಾವಿತ್ರತೆಯನ್ನು ಹೊಂದಿರುವ ತೇಜೋಗುಣದವಳು ಇಂತಿರುವ ಈ ಗಂಗಾಂಬಿಕೆಯು

"ಮದಪಿಕಂ ಮುಟ್ಟದ ತಳಿರೊ ಷ
ಟ್ಪದಿಯೆರಗದರಲೋ ಶುಕಂ ಮು
ಟ್ಟದ ಫಳಮೊ ಗಜೆಮುಟ್ಟದಂಗಜನಂಬೊ ಕಳಹಂಸೆ
ಕರ್ದುಕದ ಮೃಣಾಳಮೊ ಸರಧಿಯು
ಪ್ಪುದಕವೊಂದದ ಮಣಿಯೊ ಫಣಿ ಹಿಡಿ
ಯದ ಸುಧಾಕರಬಿಂಬಮೋ ಯೆನಲೆಸೆವ ಕರ್ಣಿಕೆಯ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೪ಪ.೩೧)

ಇಂತಹ ಶುಭ್ರ ಮನಸ್ಸಿನ ಗಂಗಾಂಬಿಕೆಗೆ ಯುವತಿಯರು ಆಭರಣಗಳನ್ನು ತೊಡಿಸಲು ಬರುತ್ತಾರೆ. ಇವಳ ಚೆಲುವನ್ನು ನೋಡಿದ ಆ ಯುವತಿಯರು ಆಭರಣಕ್ಕೆ ಆಭರಣವಾಗಿರುವ ಈ ರೂಪವತಿಗೆ ಇವುಗಳ ಅವಶ್ಯವಿಲ್ಲ ಎಂದುಕೊಳ್ಳುತ್ತಾರಾದರೂ ಶೋಭನಾರ್ಥಕ್ಕಾಗಿ ಕೆಲ ಆಭರಣಗಳನ್ನು ತೊಡಿಸುತ್ತಾರೆ. ಮುತ್ತೈದೆಯರು ಬಂದು ತೈಲಾಭ್ಯಂಜನವನ್ನು ಮಾಡಿಸಿ ನವ ದುಕೂಲವನ್ನು ತೊಡಿಸಿ, ನವಕುಸುಮಗಳನ್ನು ಮುಡಿಸುತ್ತಾರೆ. ಕಾಂಚೀ ಸೀರೆಯನ್ನುಡಿಸಿ, ಕೈಗಳಿಗೆ ತೋಳುಬಳೆಗಳನ್ನಿಕ್ಕಿ, ಕಡಗ, ಕಂಕಣಗಳನ್ನಿಟ್ಟು, ಮುಂಗೈಯ ಆಭರಣಗಳನ್ನು ತೊಡಿಸುತ್ತಾರೆ. ಕೈಬೆರಳುಗಳಿಗೆ ಉಂಗುರಗಳನ್ನಿಟ್ಟು, ಕೊರಳಿಗೆ ಮುತ್ತಿನ ಸರವನ್ನು ಹಾಕುತ್ತಾರೆ. ಕಿವಿಗಳಿಗೊಪ್ಪುವ ಹೊನ್ನ–ಹೂಗಳನ್ನಿಕ್ಕಿ ಥಳಿಥಳಿಸುವಂತೆ ಶೃಂಗರಿಸುತ್ತಾರೆ. ಹಣೆಗೆ ಮುತ್ತಿನ ಬೊಟ್ಟನ್ನಿಟ್ಟು, ಪೊಸ ಬಾಸಿಂಗವನ್ನು ಕಟ್ಟಿ, ಮೃದು ಸಿಂಧೂರವನ್ನು ಕೋಮಲೆಯ ಬೈತಲೆಯಲ್ಲಿಟ್ಟು, ಮುತ್ತಿನ ಸೂಸುಕವನ್ನು ತಲೆಯಲಿಡುತ್ತಾರೆ. ಹೀಗೆ ಮಂಗಳಾಭರಣಗಳನ್ನು ಸರ್ವಾಂಗಗಳಿಗೂ ಸಿಂಗರಿಸಿ ಕರೆತಂದು ಬಲದೇವನಿಗೆ ತೋರಲು ತನ್ನ ಮಗಳನ್ನು ನೋಡಿ ಆನಂದಿಸುತ್ತಾನೆ. ತ್ರಿಲೋಕಗಳ ಚೆಲುವನ್ನು ಸೂರೆಗೊಂಡ ಮಗಳನ್ನು ಕರೆತಂದು ಸಮಸ್ತ ಭಕ್ತರಿಗೆ ಕೈಮುಗಿದು

"ಪೊಡವಡಿಸಿ ಶುಭಚಿಹ್ನ ಮಿಕ್ಕೊಡ
ನೊಡನಿದಿರ್ಗೊಳೆ ಪರಸಿ ಸೇಸೆಯ
ನಿಡಲಖಿಳ ಭಕ್ತಾಂಗನೆಯರೀಶ್ವರ ಬಲ ಮುಹೂರ್ತ

ಕಡುಮಿಗಲು ವೇದೋಕ್ತ ಶಿವಪಥ
ವಡರಿದುತ್ತಮ ಧರ್ಮವಿಧಿಯಳ
ವಡಲು ಮಗಳಂ ಮದುವೆಯಂ ಮಾಡಿದನು ಬಸವಂಗೆ"

(ಎಸ್.ವಿದ್ಯಾಶಂಕರ(ಸಂ).ಬ.ಪು.ಸಂ.೪.ಪ.೪೩)

ಹೀಗೆ ಬಲದೇವ ಮಂತ್ರಿಯು ಶುಭಮುಹೂರ್ತಕ್ಕೆ ಸರಿಯಾಗಿ ತನ್ನ ಮಗಳನ್ನು ಬಸವಣ್ಣನಿಗೆ ಕೊಟ್ಟು ಮದುವೆ ಮಾಡುತ್ತಾನೆ. ಭೀಮಕವಿಯು ಮದುವೆಯ ಸಿದ್ಧತೆಗಳಿಂದ ಆರಂಭಿಸಿ ವಧು-ವರರ ತಯಾರಿ, ಅವರ ಅಲಂಕಾರ, ಮಧುವಣಗಿತ್ತಿಯಾದ ಗಂಗಾಂಬಿಕೆಯು ಸಿಂಗಾರಗೊಂಡ ಬಗೆಯನ್ನು ತುಂಬಾ ರಸವತ್ತಾಗಿ ವರ್ಣಿಸಿದ್ದಾನೆ.(ಸಂ.೪ಪ.೧೫-೪೩) ಸೋಮನಾಥನು ಎರಡು ಪಾದಗಳಲ್ಲಿ ಗಂಗಾಂಬಿಕೆಯ ಸಿಂಗಾರವನ್ನು ಮದುವೆಗಾಗಿ ಸಿದ್ಧಗೊಂಡಿದ್ದನ್ನು ಹೇಳಿದರೆ ಭೀಮಕವಿಯು ಸುಮಾರು ೨೮ ಷಟ್ಪದಿಗಳಲ್ಲಿ ಗಂಗಾಂಬಿಕೆಯ ಚೆಲುವು ಮದುವಣಗಿತ್ತಿಯಾಗಿ ಅವಳು ಸಿಂಗಾರಗೊಂಡ ಸೌಂದರ್ಯವನ್ನು ವರ್ಣಿಸಿದ್ದಾನೆ. ಈ ರೀತಿಯಾಗಿ 'ಬಸವಪುರಾಣ' ಕಾವ್ಯಗಳಲ್ಲಿ ವಿವಾಹ ವರ್ಣನೆಗಳನ್ನು ಸೋಮನಾಥ ಭೀಮಕವಿಯರು ಅತ್ಯಂತ ರಸಭರಿತವಾಗಿ ವರ್ಣಿಸಿದ್ದಾರೆ. ಸಂದರ್ಭಕ್ಕೆ ತಕ್ಕನಾಗಿ ಅವರು ಕೊಡುವ ಉಪಮಾ, ರೂಪಕಾದಿಗಳ ಅಲಂಕಾರಗಳ ಬಂಧ, ಕಾವ್ಯದ ಗುಣಮಟ್ಟವನ್ನು ಹಿಗ್ಗಿಸಿವೆ. ನವರಸಗಳನ್ನು ತುಂಬಿರುವ ಕವಿಗಳು ಭಕ್ತರಸಕ್ಕೆ ವಿಶೇಷ ಕಾಳಜಿಯನ್ನು ನೀಡಿ ಪುರಾಣವೆಲ್ಲ ಭಕ್ತಮಯವಾಗಿಸಿದ್ದಲ್ಲದೆ, ಭಕ್ತಿರಸ ಜಿನುಗುವಂತೆ ತಮ್ಮ ಕಾವ್ಯಕುಂಚದ ಪ್ರೌಢಿಮೆಯನ್ನು ಮೆರೆದಿದ್ದಾರೆ.

**ವೇಶ್ಯಾವರ್ಣನೆ :**

ಅಷ್ಟಾದಶ ವರ್ಣನೆಗಳಲ್ಲಿ ವೇಶ್ಯಾ ವರ್ಣನೆಯು ವರ್ಣನೆಯು ಮುಖ್ಯವಾದುದಾಗಿದೆ. ಪ್ರಾಚೀನ ಕಾವ್ಯಗಳಲ್ಲಿ ಚಂದ್ರೋದಯ ವರ್ಣನೆಯಲ್ಲಿ ಸೂಳೆಗೇರಿಯ ಚಿತ್ರಣವನ್ನು ತರುತ್ತಾರೆ. ಮತ್ತೆ ಕೆಲವು ಕಾವ್ಯಗಳಲ್ಲಿ ಪ್ರತ್ಯೇಕ ಸಂದರ್ಭಗಳಲ್ಲಿಯೂ ಈ ಚಿತ್ರಣ ಬರುತ್ತದೆ. ಭಕ್ತಿಪ್ರಧಾನ ಕಾವ್ಯಗಳಲ್ಲಿಯೂ ಕೂಡ ವೇಶ್ಯೆಯರ ಚಿತ್ರಣವಿರುವುದು ಕಂಡುಬರುತ್ತದೆ. 'ಬಸವಪುರಾಣ'ಗಳಲ್ಲಿಯೂ ವೇಶ್ಯಯರನ್ನು ವರ್ಣಿಸಿರುವ ಸಂದರ್ಭಗಳು ಕೆಲವು ಕಡೆ ಇದ್ದು, ಪ್ರಧಾನವಾಗಿ ಮುಗ್ಧ ಸಂಗಯ್ಯನ ಕಥೆಯಲ್ಲಿ ಮತ್ತು ಭೀಮಕವಿಯು ಕನ್ನಡ ಪುರಾಣದಲ್ಲಿ ಹೊಸದಾಗಿ ಸೇರಿಸಿದ ೬ನೆಯ ಕಾಂಡದ ಗುರುಭಕ್ತಾಂಡಾರಿಯ ಕಥೆಯಲ್ಲಿವೆ. ವೇಶ್ಯೆಯರ ವೇಷಭೂಷಣ, ಅವರ ಶೇಯ್ಯಾಗೃಹದ ಅಲಂಕಾರ, ಅವರು ಲೇಪಿಸಿಕೊಳ್ಳುವ ಸುಗಂಧ ದ್ರವ್ಯಗಳು ಮತ್ತು ಅಲ್ಲಿಗೆ ಬರುವ ವಿಟರ ಚಿತ್ರಣಗಳನ್ನು ಇಲ್ಲಿ ವರ್ಣಿಸಲಾಗಿದೆ.

ಪಾಲ್ಕುರಿಕೆ ಸೋಮನಾಥನು ಮುಗ್ಧಸಂಗಯ್ಯನ ಕಥೆಯಲ್ಲಿ ವೇಶ್ಯೆಯನ್ನು ವರ್ಣಿಸಿರುವ ರೀತಿಯನ್ನು ನೋಡಿ

"ಗಣುತಿಂಪಂ ಬ್ರಮಥಲೋಕಂಬು ಕನ್ಯಕಯು
ಗಣಿಕ ಸಾಕ್ಷಾದ್ರುದ್ರಗಣಿಕಯೋ ತಲಂಪಂ
ಚಿತ್ತರುರೂಪಮೋ ಚೆಲುವಿಯೋ ಪಸಿಂಡಿ
ಪುತ್ತಡಿಯೋ ನಾಂಗಂ ಬೊಲಂತಿ ಯೇತೆಂಚೆ"

(ಗೂ.ವೆಂ.ಸು.(ಸಂ),ಬ.ಪು.,ತೃ.ಆ.ಸಾ.೨೩೧-೨೩೪)

(ಪ್ರಥಮ ಲೋಕದ ಕನ್ಯೆಯೋ, ಸಾಕ್ಷಾತ್ ರುದ್ರಗಣಿಕೆಯೋ ತಿಳಿಯೆನು. ಚಿತ್ರರೂಪವೋ, ಚೆಲುವೆಯೋ, ಬಂಗಾರದ ಪುತ್ತಳಿಯೋ ಎಂಬಂತೆ ಯುವತಿ ಬಳಿ ಬಂದು)

ವೇಶ್ಯೆಯನ್ನು ದೇವಲೋಕದ ಕನ್ಯೆಗೆ, ರುದ್ರಗಣಿಕೆಗೆ, ಚಿತ್ರಪಟಕ್ಕೆ, ಹೊನ್ನ ಪುತ್ಥಳಿಗೆ ಹೋಲಿಸಿದ ಸೋಮನಾಥ ಮತ್ತು ಭೀಮಕವಿಯರು ಅವಳು ಸಾಮಾನ್ಯ ಸ್ತ್ರೀಯಲ್ಲವೆಂದೇ ಪರಿಗಣಿಸಿ ದೇವಲೋಕದ ಅಪ್ಸರೆಯರಿಗೆ ಹೋಲಿಸುತ್ತಾರೆ. ಭೀಮಕವಿಯು ಗುರುಭಕ್ತಾಂಡಾರಿಯ ಕಥೆಯಲ್ಲಿ ವೇಶ್ಯೆಯರ ಚೆಲುವಿನ ವರ್ಣನೆಯನ್ನು ಕಲ್ಪನೆಗೂ ಮೀರುವಂತೆ ವರ್ಣಿಸಿದ್ದಾನೆ. ಗುರುಭಕ್ತಾಂಡಾರಿಯ ದಾರಿಯಲ್ಲಿ ಹೋಗುತ್ತಿರುವಾಗ ಬೆಜವಾಡದ ಪ್ರೌಢವತಿಯೆಂಬ ವೇಶ್ಯೆಯು ತನ್ನ ಮನೆಯ ಮುಂದೆ ನಿಂತು ವಿಟರಿಗಾಗಿ ಆಕರ್ಷಿಸುವ ರೀತಿಯನ್ನು ಭೀಮಕವಿಯು ಮುಂದಿನಂತೆ ಹೇಳುತ್ತಾನೆ. ರೆಪ್ಪೆ ಅಲುಗಾಡಿಸಿದಂತೆ ನೋಡುವ ಅವಳ ಕಣ್ಣುಗಳ ನೋಟಗಳು ಉರುಳುಗಳಾಗಿ ವಿಟರನ್ನು ಚುಚ್ಚುವಂತಿದ್ದವು. ಅಂತಹ ಮಿಂಚಿನ ನೋಟದೊಂದಿಗೆ ಆ ವೇಶ್ಯೆಯು ಗುರುಭಕ್ತಾಂಡಾರಿಯ ಮನಸ್ಸನ್ನು ಚಂಚಲವಾಗುವಂತೆ ಮಾಡುತ್ತಾಳೆ. ಅವಳ ನೋಟವು ಹೇಗಿತ್ತೆಂದರೆ ಕುಸುಮ ಬಾಣನ ಮಸೆದ ಸರಳುಗಳಂತೆ, ವಿಟಕುಲಗಳ ಪಾಶದಂತೆ, ಮಳೆಯ ನೇತ್ರಾಂಶಗಳಂತೆ (ಭೀ.ಸಂ.೩೯.ಪ.೪-೫) ಇಂತಹ ನೋಟಕ್ಕೆ ಅರಬೆತ್ತೆಲೆಯಾಗಿ ಕಾಣುವ ಮೊಲೆಗಳ ಬಿಗುಹಕ್ಕೆ, ಅವಳ ಮೆಲ್ನುಡಿಗಳಿಗೆ ಸೋಲದ ಗಂಡುಗಳಿರುವರೆ ಎಂದು ಕೇಳುತ್ತಾನೆ. ಪ್ರೌಢವತಿಯ ಚೆಲುವಿಗೆ ಮನಸೋತ ಗುರುಭಕ್ತಾಂಡಾರಿ ಪರಿಚಾರಕರೊಡನೆ ತನ್ನ ಮನೋವ್ಯಥೆಯನ್ನು ಹೇಳಿ ಕಳುಹಿಸುತ್ತಾಳೆ. ಶಿವಭಕ್ತನನ್ನು ವಿಟನಾಗಿ ಸ್ವೀಕರಿಸಲು ಒಪ್ಪಿಲಿಲ್ಲವೆಂದು ಪರಿಚಾರಕರಿಂದ ತಿಳಿದ ಗುರುಭಕ್ತಾಂಡರಿ ತಾನೇ ಅವಳಿದ್ದಲ್ಲಿಗೆ ಹೋಗಿ ಪರಿಪರಿಯಾಗಿ ಬೇಡಿಕೊಳ್ಳುತ್ತಾನೆ. "ನಿನ್ನ ಮರಳು ಮಾಡದೆ ಇದ್ದರೆ ನಿನಗೆ ನಾನು ಸೋಲುವೆನು ಬಳಿಕ" ಎಂದು ಹೇಳಿದ ಭಕ್ತಾಂಡಾರಿಗೆ ನಿನಗೆ ಮತ್ತು ನನಗೆ ಭಕ್ತಿ ನೀತಿಯೊಳು ಅನುಮತಿಸಲಾಗದು ಹೋಗೆಂದು ಹೇಳಿ

"ಶೈವರೊಳು ಲಿಂಗಾವಧಾನದ
ಭಾವಿಯಾದಡೆ ಹೊಲಬುಗೆಟ್ಟ ಮ
ನೋವಿಕಾರದ ಮಾತುಗಳನಾಡಲಿಕುಚಿತವಹುದೆ
ಭಾವಜಾತುರನಾ ಗಿಯಕಟ ವ್ಯ
ಥಾ ವಿಕಳನಾಗದಿರು ಗುರುಪದ

ಸೇವಕಂ ನಿನಗಿನಿತು ಕಳವಳವೇಕೆ ಹೋಗೆನಲು"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೩೯ಪ.೨೬)

ನೀವು ಲಿಂಗಾಧಾರಿಗಳು ಈ ರೀತಿ ಮನಸ್ಸನ್ನು ಕಲುಶಿತಗೊಳಿಸಿಕೊಂಡು ಹೊಲುಬುಗೆಟ್ಟವನಂತೆ ಆಡಬೇಡ, ಗುರುಪಾದ ಸೇವೆಯನ್ನು ಮಾಡುತ್ತಾ ಸುಖದಿಂದಿರು ಎಂದು ಹೇಳುವಳು. ಹೀಗೆ ಹಲವು ವಿಧದಲ್ಲಿ ತಿರಸ್ಕರಿಸುವ ಪ್ರೌಢವತಿಯ ಮಾತುಗಳ ಮೂಲಕ ವೀರಶೈವ ಧರ್ಮ ಶಿವಾಚಾರ ನೀತಿಯನ್ನು ಪಾಲಿಸುತ್ತಿರುವ ಶಿವಭಕ್ತರ ಮಹೋನ್ನತಿಯನ್ನು ಕವಿ ತಿಳಿಸುತ್ತಾನೆ. ಎಷ್ಟು ಬುದ್ಧಿವಾದವನ್ನು ಹೇಳಿದರೂ ಕೇಳದ ಗುರುಭಕ್ತಾಂಡಾರಿಗೆ ವೇಶ್ಯೆಯರ ನಿಜದ ಬದುಕು ಅವರ ಮೋಸದಾಟಗಳನ್ನು ಹೇಳಿ ಹೇಸಿಗೆಯನ್ನು ಹುಟ್ಟಿಸಬೇಕೆಂದು ನಿಶ್ಚಯಿಸುತ್ತಾಳೆ.

ಭೀಮಕವಿಯು ಇಲ್ಲಿಂದ ಮುಂದೆ ಇಡೀ ವೇಶ್ಯೆ ಕುಲದ ಸ್ತ್ರೀಯರು ದಿನನಿತ್ಯ ಮಾಡುವಂತಹ ನೈಜ ಘಟನೆಗಳನ್ನು ಅತ್ಯಂತ ಸುಂದರವಾಗಿ ಚಿತ್ರಿಸಿದ್ದಾನೆ. ಎಲೆ ಶಿವಭಕ್ತನೆ ನೀನು ವಾರವನಿತೆಯರ ಡೊಂಬಿನ ಕುಹಕಿಗಳನರಿಯೋ? ಎನುತ ನಾವು ಠಕ್ಕರು, ಕೊಂಡಗಿತ್ತಿಯರು, ರಕ್ಕಸಿಯರು, ಪಿಶಾಚಿಯರು(ಪ-೫೨), ವಿರಸೆಯರು, ವಿಶ್ವಾಸಘಾತಕಿಯರು, ಗಂಟುಗೊಯ್ಕೆಯರು (ದೋಚುವರು), ದುರುಳೆಯರು, ವಂಚಕಿಯರು, ಜಗಳಗಂಟಿಯರು, ಕಾಮಾತುರದವರು, ಅಂತಃಕರುಣೆಯನ್ನು ಅರಿಯದವರು(ಪ-೫೩), ಕಪಟೆಯರು, ಧೂರ್ತೆಯರು, ಹಾಸ್ಯದಿಂದ ನಿಂದಿಸುವವರು, ಚಪಲೆಯರು, ದುರ್ವ್ಯಸನಿಯರು, ಜನಮೋಹಪಾಶೆಯರು, ಕುಲಗೆಡುಕಿಯರು, ಕಳ್ಳೆಯರು, ಚಳ್ಳೆಯರು(ಪ-೫೪), ಗೋಣು ಕೊಯ್ಯುವವರು, ಬಿತ್ತರಿಯರು, ಹಾದರಗಿತ್ತಿಯರು, ಹೊನ್ನುಬಾಕಿಯರು ಎಂದು ಹೇಳುತ್ತಾ ಕಾಮುಕ ಕೆಡುವ ಏಳು ಕಾರಣಗಳನ್ನು ಪ್ರೌಢವತಿ ಹೇಳುತ್ತಾಳೆ.

"ಮಾನಭಂಗವದೊಂದು ಕಾಣದೆ
ದೀನನಾಗಿಹುದೆರಡು ನಾಚಿಕೆ
ತಾನಜೆಯದುದು ಮೂಱು ನಗೆಗೆಡೆಯಾಗಿಹುದು ನಾಲ್ಕು
ಮಾನಸವ್ಯಥೆಯೈದು ನಿಜಧನ
ಹಾನಿಯಾಱು ವಿಶುದ್ಧಮುಕ್ತಿವಿ
ಹೀನವಾಗಿಹುದೇಳು ತಾನಿಂತೇಳಱಲಿ ಕೆಡುವ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೩೯.ಪ.೭೨)

ಪ್ರೌಢವತಿಯು ಹೇಳಿದ ಈ ಏಳು ಕಾರಣಗಳಿಂದ ಪುರುಷರು ವೇಶ್ಯೆಯರ ಸಂಗವನ್ನು ಬಯಸುತ್ತಾರೆ. ಇಂತಹ ಗುಣಗಳನ್ನು ಹೊಂದಿರುವ ಪುರುಷರ ಮನಸ್ಸು ವಿಚಲಿತಗೊಂಡು ಸ್ತ್ರೀಯರ ಮೇಲೆ ಆಕರ್ಷಿತರಾಗುತ್ತಾರೆ ಎಂದು ಹೇಳಿದ ಮಾತುಗಳು ಅಂದಿನಿಂದ ಇಂದಿನವರೆಗೂ ಎಷ್ಟು ಪ್ರಸ್ತುತವಾಗಿವೆ ಎಂಬುದನ್ನು ಗಮನಿಸಬಹುದಾಗಿದೆ. ಇಂತಹ ಕಾಮಾಂಧರನ್ನು ಮಾನಸ ಪೀಡೆಯರಾದ ವೇಶ್ಯೆಯರು ಜಿಗುಳೆಗಳು(ಕೀಟ) ಹಿಡಿದಂತೆ ಹಿಡಿಯುತ್ತಾರೆ. ಕ್ಷಣಕ್ಕೊಂದು ಬಣ್ಣ

ಬದಲಾಯಿಸುವ ಉಸುರುವಳ್ಳಿಗಳಂತೆ ಸುಳಿವುಗಳನ್ನು ನೀಡದೆ ಜಲದಲಿ ಚಲಿಸುವ ಮೀನುಗಳಂತೆ ಮಾಯಾವಿಗಳು ಎಂದು ಪ್ರೌಢವತಿ ಹೇಳುತ್ತಾಳೆ. "ತರುಣೆಯರ ಮಾತುಗಳು ಶಿವಭಕ್ತರಿಗೆ ಹಿತಕರವಲ್ಲ. ಹಣಕ್ಕಾಗಿ ಮೈಮಾರುವ(ಬೆಲೆವೆಣ್ಣು)ವರ ನಗೆಗಳು ಲಿಂಗವಂತರಿಗೆ ವಿರಸವಲ್ಲದೆ ಸರಸವೇ ಹೇಳು. ಅವರ ಮೈಯ ಅಂಗಾಂಗಳು ಶರಣರಿಗೆ ನಿಸ್ಸಾರವಲ್ಲದೆ ಸಾರತರುಹುದೆ"(ಪ-೭೯) ಎಂದು ಪ್ರಶ್ನಿಸುತ್ತಾಳೆ. ನೀವು ಭಕ್ತಿಪ್ರಿಯರು, ಶಿವಭಕ್ತಿ ತತ್ಪರರು ಇಂತಹ ಗುರುಭಕ್ತರಾದ ನೀವು ತಿಳಿಯದ ವಿಷಯವೇನುಂಟು? ನಾವು ಕಾಕುಮತಿಗಳು, ಚಿತ್ತವ್ಯಾಕುಳತೆಯರು, ಭಕ್ತಿ ವಿವೇಕವಿಲ್ಲದ ಸಾಮಾನ್ಯರು, ಜೊತೆಗೆ ಅತ್ಯಂತ ಕಾಮಾಚಾರಿಯರು (ಪ-೮೨) ಎಂದು ಹೇಳುತ್ತಾಳೆ. ಇಷ್ಟೆಲ್ಲವನ್ನು ಹೇಳಿದ ಮೇಲೂ ತನ್ನ ಅಚಲ ನಿರ್ಧಾರದಿಂದ ಹಿಂದೆ ಸರಿಯದ ಗುರುಭಕ್ತಾಂಡಾರಿಗೆ ಹಿಂದೆ ಹೀಗೆಯೇ ವೇಶ್ಯಾಸಂಗದಿಂದ ಧನ ಮಾನಗಳನ್ನು ಕಳೆದುಕೊಂಡವರ ಕಥೆಗಳನ್ನು ಹೇಳಿ ಕೊನೆಗೆ ಗುರುಭಕ್ತಾಂಡಾರಿಯ ಮನಸ್ಸನ್ನು ಪರಿವರ್ತಿಸುತ್ತಾಳೆ. ಈ ರೀತಿಯಾಗಿ ವೇಶ್ಯೆಯರ ವಿವಿಧ ಮುಖಗಳ ಪರಿಚಯವನ್ನು ಕಾಣಿಸುವ ಭೀಮಕವಿ ನಿಜಕ್ಕೂ ಆದರಣೀಯ. ಆ ಕಾಲದ ವೇಶ್ಯೆಯರು ಅವರ ಮನೋಭಿಲಾಷೆಗಳು, ಅವರ ಕುಟಿಲತೆಗಳನ್ನು ಒಂದೊಂದಾಗಿ ಸಮಗ್ರವಾಗಿ ಪರಿಚಯಿಸುವುದರ ಮೂಲಕ ಭೀಮಕವಿ ಇತರೆ ಮಾರ್ಗ ಕವಿಗಳಿಗಿಂತ ತಾನು ಕಡಿಮೆಯಿಲ್ಲವೆನ್ನುವಂತೆ ಚಿತ್ರಿಸಿದ್ದಾನೆ. ಈ ಮೂಲಕ ಶಿವಭಕ್ತರ ಶಿವಧರ್ಮವನ್ನು ಗೌರವಿಸುವ ಅವರ ಪಾವಿತ್ರ್ಯತೆಯನ್ನು ಕಾಪಾಡುವಂತಹ ವೇಶ್ಯೆಯರೂ ಇದ್ದರು ಎಂಬುದನ್ನು ಪ್ರೌಢವತಿಯ ಪಾತ್ರದ ಮೂಲಕ ಕವಿ ಹೇಳಿದ್ದಾನೆ.

**ಜಲಕ್ರೀಡೆ :**

'ಬಸವಪುರಾಣ'ವು ಭಕ್ತಿರಸ ಪ್ರಧಾನವಾದ ಕಾವ್ಯವಾಗಿರುವುದರಿಂದ ಇಲ್ಲಿ ಜಲಕ್ರೀಡೆಗೆ ಸಂಬಂಧಿಸಿದ ವಿನೋದದ ವರ್ಣನೆಗಳು ಇಲ್ಲ. ಸಾಮಾನ್ಯವಾಗಿ ಈ ಜಲಕ್ರೀಡೆಯಲ್ಲಿ ಕಥಾನಾಯಕ-ನಾಯಕಿಯರು ಭಾಗವಹಿಸುತ್ತಾರೆ. ಇಲ್ಲಿ ಕಥಾನಾಯಕ ಬಸವಣ್ಣನಾದ್ದರಿಂದ ಇಲ್ಲಿ ಬಸವಣ್ಣನ ಧರ್ಮ-ನೀತಿಯೇ ಪ್ರಧಾನವಾಗಿದೆ. ಹಾಗಾಗಿ ಈ ರೀತಿಯ ವರ್ಣನೆಗಳು ಇಲ್ಲ. ಆದರೂ ಬೇರಾವುದೋ ಸಂದರ್ಭ-ಸನ್ನಿವೇಶವನ್ನು ವರ್ಣಿಸುವಾಗ ಇದಕ್ಕೆ ಸಂಬಂಧಿಸಿದ ವರ್ಣನೆಗಳಿವೆ. ಕೈಲಾಸ ಪರ್ವತದಲ್ಲಿ ಗಂಧರ್ವ ದಂಪತಿಗಳು ಜಲಕ್ರೀಡೆಯಾಡುವುದನ್ನು ಸೋಮನಾಥನು "ಮೆರೆಯುವ ಜಲಕ್ರೀಡೆಗಳ ವನಕ್ರೀಡೆಗಳನಾಡಿ ತಣಿಯುವ ಗಂಧರ್ವ ಜೋಡಿಗಳು" (ಪಾ.ಸೋ.ತ್ರೈ.ಆ.ಸಾ.೨೧೫೧) ಎಂದು ಹೇಳುವ ಮೂಲಕ ಜಲಕ್ರೀಡೆಯನ್ನಾಡುತ್ತಿರುವ ಗಂಧರ್ವ ಜೋಡಿಗಳ ವಿನೋದವನ್ನು ಹೇಳುತ್ತಾನೆ. ಭೀಮಕವಿಯು ಇದೇ ಸಂದರ್ಭದಲ್ಲಿ ಜಲಕ್ರೀಡೆಯನ್ನು ವರ್ಣಿಸುತ್ತಾ...

"ಸ್ಥಿತಜಲಕ್ರೀಡಾವಿನೋದದಿ
ನುರುವವನಕ್ರೀಡಾವಿನೋದದಿ
ಪರಿಣಮಿಪ ಗಂಧರ್ವದಂಪತಿಗಳ ಸಮುಚ್ಚಯವು"

"ಅಮಿತ ಶಿವಲಿಂಗಾರ್ಚನಾ ಸಂ
ಭ್ರಮಕಲಿತ ಮಾನಸದೊಳೈತ
ಪ್ಪಮರಿಯರುಮಮರರು, ದಿಶಾರಮಣಿಯರು ದಿಗ್ವರರು
ವಿಮಲ ಜಲಕನ್ನೆಯರ ಮೊತ್ತದಿ
ನಮರ್ದ ಬಿಲಕನ್ನೆಯರ ಮೊತ್ತಂ
ಕ್ರಮದಿ ಜಲಪುರುಷರುಗಳಿಂದೊಪ್ಪುವ ಬಿಲಪುರುಷರು"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೧೮.ಪ.೮೨,೮೩)

ಗಂಧರ್ವ ದಂಪತಿಗಳು, ದಿಶಾಮಣಿಯರು, ಜಲಕನ್ಯೆಯರು, ಜಲಪುರುಷರು ಪರಸ್ಪರ ವಿನೋದದಿಂದ ಜಲಕ್ರೀಡೆಯಲ್ಲಿ ತೊಡಗಿದ್ದರು ಎಂದು ಭೀಮಕವಿಯು ಹೇಳುತ್ತಾನೆ.

ಹಾಗೆಯೇ ವನಕ್ರೀಡೆಯಲ್ಲಿ ಕಾಡಿನ ಪ್ರಾಣಿಗಳು ಎಷ್ಟು ಅನ್ಯೋನ್ಯತೆಯಿಂದ ದ್ವೇಷಾಸೂಯೆಗಳನ್ನು ಮರೆತು ಪ್ರೀತಿಯಿಂದ, ಸಂತೋಷದಿಂದ ತಮ್ಮೊಳಗಿನ ವೈರತ್ವವನ್ನು ಮರೆತು ಒಂದಾಗಿ ಆಡುವ ಅವುಗಳ ವಿನೋದವನ್ನು ಭೀಮಕವಿ ಸುಂದರವಾಗಿ ಹೇಳಿದ್ದಾನೆ.

"ಗಂಡಮಗ ಮೃಗರಾಜ ಹರಿ ವೇ
ದಂಡ ಸೂಕರ ಪುರುಷಮೃಗಕುಲ
ಚಂಡ ಬಲ್ಲುಕ ವೃಕ ಹರಿಣ ಸಾರಂಗ ಮಾರ್ಜಾಲ
ಪುಂಡರೀಕ ಶರಭ ಮಹಿಷ ಭೇ
ರುಂಡ ಚಮರೀಮೃಗ ಶಿಖರಿಗಳ
ತಂಡವಿಂತನ್ಯೋನ್ಯವೈರವನುಳಿದು ಚರಿಸುತಿಹ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೧೮.ಪ.೮೪)

ಸಾಮಾನ್ಯವಾಗಿ ಕಾಡುಗಳಲ್ಲಿ ಒಂದನ್ನೊಂದು ಹಿಂಸಿಸಿಕೊಂಡು ಬೇಟೆಯಾಡುತ್ತಾ ಬದುಕುವ ಪ್ರಾಣಿಗಳಿರುತ್ತವೆ. ಆದರೆ ಕೈಲಾಸ ಪರ್ವತದ ಕಾಡಿನಲ್ಲಿ ವಾಸಿಸುವ ಪ್ರಾಣಿಗಳಾದ ಮೃಗರಾಜರಾದ ಹುಲಿಗಳು, ಹಂದಿಗಳು(ಸೂಕರ), ಗಂಡು ಮೃಗಕುಲ (ಸಾರಂಗ), ಕರಡಿಗಳು(ಬಲ್ಲುಕ), ತೋಳಗಳು(ವೃಕ), ಜಿಂಕೆಗಳು, ಸಾರಂಗಗಳು, ಹುಲಿಗಳು(ಪುಂಡರೀಕ), ಸಿಂಹಕ್ಕಿಂತಲೂ ಬಲಿಷ್ಟವಾದ ಎಂಟು ಕಾಲುಗಳುಳ್ಳ ಪ್ರಾಣಿಗಳಾದ ಶರಭಗಳು, ಕಾಡು ಕೋಣಗಳು, ಗಂಡುಭೇರುಂಡಗಳು, ಹೆಣ್ಣು ಮೃಗಗಳು(ಚಮರಿ), ಶಿಖರಿ(ಜಿಂಕೆ)ಗಳು ಮುಂತಾದ ಪ್ರಾಣಿ ಸಂಕುಲವು ಮಿತ್ರಭಾವದಿಂದ ಸಂತೋಷದಿಂದ ನಲಿದಾಡುತ್ತಿದ್ದವು ಎಂದು ಭೀಮಕವಿ ಹೇಳುತ್ತಾನೆ.

ಹೀಗೆ ಅಷ್ಟಾದಶ ವರ್ಣನೆಗಳಲ್ಲಿ ಕೆಲವು ಪ್ರಮುಖ ವರ್ಣನೆಗಳು ಕನ್ನಡ-ತೆಲುಗು 'ಬಸವಪುರಾಣ'ಗಳಲ್ಲಿ ನಿರೂಪಿತಗೊಂಡಿವೆ. ಇಲ್ಲಿನ ವರ್ಣನೆಗಳು ಸಹಜತೆಯಿಂದ ಕೂಡಿದ್ದು, ಓದುಗರ ಮನದಲ್ಲಿ ಸದಾ ಇರುವಂತೆ ಕವಿಗಳು ಚಿತ್ರಿಸಿದ್ದಾರೆ. ಅತಿಯಾದ ರಂಜಕತೆಯನ್ನು

ನೀಡಿ ಭಕ್ತಿ ಕಾವ್ಯದ ಚೆಂದವನ್ನು ಕೆಡಿಸದಂತೆ ತುಂಬಾ ಸೂಕ್ಷ್ಮವಾಗಿ ಇಲ್ಲಿನ ವರ್ಣನೆಗಳನ್ನು ಮಾಡಿರುವುದು ಈ ಅಧ್ಯಯನದಿಂದ ತಿಳಿಯಬಹುದಾಗಿದೆ.

**೬.೩. ರಸ ಪ್ರತಿಪಾದನೆ :**

ಪಾಲ್ಕುರಿಕೆ ಸೋಮನಾಥ ಹಾಗೂ ಭೀಮಕವಿಯರು ತಮ್ಮ ಪುರಾಣಗಳಲ್ಲಿ ನವರಸಗಳನ್ನು ವೀರಶೈವ ಭಕ್ತಿಗೆ ಅನುಗುಣವಾಗಿಯೇ ವರ್ಣಿಸಿದ್ದಾರೆ. ಇತರೆ ಕಾವ್ಯಗಳಂತೆ ಪ್ರತ್ಯೇಕವಾದ ಭಾವಗಳಿಂದ ರಸವನ್ನು ಅಭಿವ್ಯಕ್ತಿಸುವಂತೆ ಈ ಪುರಾಣಗಳಲ್ಲಿ ಅಭಿವ್ಯಕ್ತಿಸಿಲ್ಲ. ಭಕ್ತಿ ಪುರಾಣಗಳಾದ್ದರಿಂದ ಶರಣರ ಭಕ್ತಿಯನ್ನು ನಿರೂಪಿಸುವಾಗ ವಿವಿಧ ರಸಗಳು ವ್ಯಕ್ತವಾಗುವಂತೆ ನಿರೂಪಿಸಿರುವುದು ಕಂಡುಬರುತ್ತದೆ. ಈ ರಸ ಪ್ರತಿಪಾದನೆಯಲ್ಲಿ ಶರಣರ ಭಕ್ತಿಯೇ ಪ್ರಮುಖವಾಗಿದೆ. ಇಲ್ಲಿನ ಶರಣರು ವಿವಿಧ ಮನೋವೃತ್ತಿಯನ್ನು, ಅಭಿರುಚಿಯನ್ನು ಹೊಂದಿದವರಾಗಿದ್ದು, ಅವರ ಮನೋವೇದನೆಗೆ ಹೊಂದುವಂತೆ ರಸ ಪ್ರತಿಪಾದನೆಯನ್ನು ಇಬ್ಬರೂ ಕವಿಗಳು ಮಾಡಿದ್ದಾರೆ.

**ಶೃಂಗಾರ ರಸ :**

'ಬಸವಪುರಾಣ'ಗಳು ಶಿವಭಕ್ತಿ ರಸಪ್ರಧಾನವಾದ ಪುರಾಣಗಳಾಗಿದ್ದರಿಂದ ಶೃಂಗಾರ ರಸವು 'ಬಸವಪುರಾಣ'ಗಳಲ್ಲಿ ಕೆಲವು ಕಡೆಗಳಲ್ಲಿ ಮಾತ್ರ ವರ್ಣಿತವಾಗಿದೆ. ಬಸವೇಶ್ವರನ ಮದುವೆಯ ಸಂದರ್ಭದಲ್ಲಿ ಗಂಗಾಬಿಕೆಯ ಚೆಲುವನ್ನು ವರ್ಣಿಸುವಾಗ ಮತ್ತು ಮುಗ್ಧಸಂಗಯ್ಯ ವೇಶ್ಯಾ ಸಂಗವನ್ನು ಬಯಸಿ ಅವಳ ಮನೆಗೆ ಹೋದಾಗ ವೇಶ್ಯೆಯ ಚೆಲುವು ಅವಳ ಶಯ್ಯಾಗೃಹದ ವರ್ಣನೆಗಳ ಸಂದರ್ಭದಲ್ಲಿ ಶೃಂಗಾರ ರಸವನ್ನು ಸುಂದರವಾಗಿ ಚಿತ್ರಿಸಿದ್ದಾರೆ. ಈ ಶೃಂಗಾರ ರಸವನ್ನು ಪಾಲ್ಕುರಿಕೆ ಸೋಮನಾಥ ತನ್ನ ಪುರಾಣದಲ್ಲಿ ತುಂಬಾ ಸಂಕ್ಷಿಪ್ತವಾಗಿ ಹೇಳಿರುವುದು ಕಂಡುಬರುತ್ತದೆ. ಆದರೆ ತನ್ನ ಮತ್ತೊಂದು ಪುರಾಣವಾದ 'ಪಂಡಿತಾರಾಧ್ಯಚರಿತ್ರೆ'ಯಲ್ಲಿ ಈ ರಸವನ್ನು ಹೆಚ್ಚು ಪೋಣಿಸಿರುವುದು ಕಂಡುಬರುತ್ತದೆ. ಆದರೆ ಕನ್ನಡ 'ಬಸವಪುರಾಣ'ದಲ್ಲಿ ಭೀಮಕವಿಯು ಈ ಶೃಂಗಾರ ಸನ್ನಿವೇಶಗಳನ್ನು ತುಂಬಾ ವಿಸ್ತಾರವಾಗಿ ಚಿತ್ರಿಸಿರುವುದನ್ನು ಕಾಣಬಹುದು. ಬಸವಣ್ಣನ ಮದುವೆ ಸಂದರ್ಭದಲ್ಲಿ ಗಂಗಾಂಬಿಕೆಯ ಚೆಲುವು, ಅವಳ ಸಿಂಗಾರಗೊಂಡ ಬಗೆಯನ್ನು ವರ್ಣಿಸುವಾಗ ಶೃಂಗಾರ ರಸ ಉಕ್ಕುವಂತೆ ವರ್ಣಿಸಿದ್ದಾನೆ. ಮತ್ತು ಭಂಡಾರಿಯಾಗಿ ಬಸವಣ್ಣ ಬಿಜ್ಜಳನ ಅರಮನೆಗೆ ಬರುವಾಗ ದಾರಿಯಲ್ಲಿ ಬಸವಣ್ಣನನ್ನು ನೋಡಲು ಬಂದ ಯುವತಿಯರನ್ನು ವರ್ಣಿಸುವಾಗ ಅತ್ಯಂತ ರಸೋಭರಿತವಾಗಿ ಚಿತ್ರಿಸಿದ್ದಾನೆ. ಭೀಮಕವಿಯ ಶೃಂಗಾರದ ಸನ್ನಿವೇಶಗಳು ಹೆಚ್ಚು ವ್ಯಕ್ತಗೊಂಡಿರುವುದು ಗುರುಭಕ್ತಾಂಡಾರಿ ಮತ್ತು ಪ್ರೌಢವತಿ ಎಂಬ ವೇಶ್ಯೆಯ ನಡುವೆ ನಡೆಯುವ ಸಂಭಾಷಣೆಯಲ್ಲಿ ಮತ್ತು ಅವಳು ಹೇಳುವ ಶ್ವೇತನ ಕತೆ, ಮಲುಹಣ ಮಲುಹಣಿಯರ ಕಥೆಗಳಲ್ಲಿ. ಆದರೆ ಈ ಭಾಗ ಸೋಮನಾಥನಲಿಲ್ಲ. ಭೀಮಕವಿ ಹೊಸದಾಗಿ ಸೇರಿಸಿದ ಆರನೆಯ ಕಾಂಡದಲ್ಲಿ ಈ ಕಥೆಗಳು ಬರುತ್ತವೆ. ಮಲುಹಣನ ಕಥೆಯಲ್ಲಿ ಮಲುಹಣಿಯ ತಾಯಿಯು ನನ್ನ ಮಗಳು ನಿನಗಾಗಿ ಪರಿತಪಿಸುತ್ತಿದ್ದಾಳೆ. ನಿನ್ನನ್ನಲ್ಲದೆ

ಬೇರೆಯವರನ್ನು ಅರಿಯದವಳು. ಕನ್ಯೆಯಾಗಿರುವಾಗಲೇ ನಿನ್ನಲ್ಲಿ ಅನುರಕ್ತಳಾಗಿದ್ದಾಳೆ. ನೀನು ಅವಳನ್ನು ವರಿಸು ಹೋಗು ಎಂದು ಮಲುಹಣನಿಗೆ ಹೇಳುತ್ತಾಳೆ. ಅವಳನ್ನು ಪ್ರಣಯ ಕಲಹಗಳಲ್ಲಿ ತೊಡಗುವಂತೆ ಮಾಡು. ಆ ಕಲಹದಲ್ಲಿ ಸೋಲುವವನಂತೆ ನಟಿಸಿ ಅವಳ ಮನಸ್ಸನ್ನು ಸೆಳೆ ಎನ್ನುತ್ತಾ,

"ಸೊಗಸಿದಡೆ ರತಿಗೆಯ್ದು ಸೊಕ್ಕಿದ
ಡಗಲದೊಳಮೊಕ್ಕಿಂಪುಗಲು ಕಣು
ಮುಗಿದಡಂ ಕೈಕೊಂಡು ಮುಂಕೊಂಡಡೆ ನಲಿವು ಮುಕ್ಕು
ಮಿಗೆ ನುಡಿಗಳಿಂದೊಲಿಸಿ ನೆಹಂ
ನಿಗುರ್ದು ಕೂಟದ ಮನವನಿತ್ತಾ
ವಗವೊಲುಮೆಯಂ ತೋಱೆ ಕಳೆಗಳು ಪೂಣ್ಮಿದುದನಱೆದು"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೪೧.ಪ.೧೫)

ಇಲ್ಲಿ ಕಾಮಕೇಳಿಯ ಸಂದರ್ಭದಲ್ಲಿ ಹೆಣ್ಣನ್ನು ಹೇಗೆ ಒಲಿಸಿಕೊಳ್ಳಬೇಕೆಂಬುದನ್ನು ಕವಿ ಹೇಳಿದ್ದಾನೆ. ಮೆಲುನುಡಿಗಳಿಂದ ಅವಳ ಮನಸ್ಸನ್ನು ಒಲುಮೆಯಿಂದ ಗೆಲ್ಲಬೇಕು. ಆಗ ಹೆಣ್ಣು ಒಲಿಯುತ್ತಾಳೆ ಎಂಬುದನ್ನು ಕವಿ ಹೇಳಿದ್ದಾನೆ. ಕಾಮಕ್ರೀಡೆಯಲ್ಲಿ ಅವಳನ್ನು ಸರಸದೊಳದ್ದಬೇಕು. ಆಯಾಸವಾದಾಗ ಜಾಣ್ಮೆಯಿಂದ, ವಯ್ಯಾರದಲ್ಲಿ ಅವಳೊಂದಿಗೆ ಬೆರೆಯಬೇಕು ಎಂದು ಮಲುಹಣಿಯ ತಾಯಿ ಅಳಿಯನಾಗುವ ಮಲುಹಣನಿಗೆ ಹೇಳುತ್ತಾಳೆ. ಮುಂದುವರೆದು,

"ನಯಮಧುರುವಂ ಬೀಱೆ ನೀನ
ನ್ವಯಿಪ ಮದನಕಳೆಗಳನೆನ್ನ ತ
ನಯಳ ಮಂಚದ ತುದಿಯ ಕಾಲಲಿ ಕಟ್ಟಿಸೆನೆ ನಿನ್ನ
ಪ್ರಿಯವುಗಿಯವುಂ ಕೊಡುವಗಿಡುವಂ
ಬಯಲವೆಲ್ಲಂ ಸಾಕೆನುತ್ತಂ
ಬಯಿದು ನಾಚಿಸಿ ಮೂದಲಿಸಿ ಮಲುಹಣ ಕವೀಶ್ವರನ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೪೧.ಪ.೧೮)

ಹೀಗೆ ಮಲುಹಣನಿಗೆ ಮಗಳನ್ನು ಒಲಿಸಿಕೊಳ್ಳುವ ಪರಿಯನ್ನು ಹೇಳಿ ಮೂದಲಿಸಿ ಕಳುಹಿಸುತ್ತಾಳೆ. ಮಲುಹಣಿಯ ಸಂಗವನ್ನು ಬಯಸಿ ಅವಳ ಸೌಂದರ್ಯವನ್ನು ಮನಸ್ಸಿನಲ್ಲಿಯೇ ಊಹಿಸಿಕೊಂಡು ಆಸ್ವಾದಿಸುವ ಮಲುಹಣನ ಕಲ್ಪನೆಯನ್ನು ಕವಿ ಚಿತ್ರಿಸಿರುವುದು ಹೀಗೆ

"ಮಿಸುಪ ಕಪ್ಪಿನ ಬಾಸೆಯಂ ಭಾ
ವಿಸುವನೆಳಲತೆಯಂತೆ ಕೋಮಳ

ದಸಿಯ ನಡುವಂ ಭಾವಿಸುವನೊಳುನಡೆಗಳಂ ನೆನವ
ರಸಿಕಸುರತಾನಂದವಂ ಭಾ
ವಿಸುವನುಪಲಾಲಿಸುವ ಕೂಟದ
ಪೊಸಕಳಾಭಾವಂಗಳಂ ಮಲುಹಣನು ಭಾವಿಸುವ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೪೧.ಪ.೨೩)

ಮಲುಹಣನು ಮಲುಹಣಿಯ ಚೆಲುವನ್ನು ಕಲ್ಪಿಸಿಕೊಳ್ಳುವಾಗ ಅವಳ ರೂಪವು ಕಂಡ ಬಗೆ ಶೃಂಗಾರಭರಿತವಾಗಿದೆ. ಮಿನುಗುವ ಕಡುಕಪ್ಪು ಕೂದಲು ಎಳೆಯ ಲತಾ ಬಳ್ಳಿಯಂತೆ ಕಾಣುವುದು. ಕೋಮಲವಾದ ದಸಿಯಂತಹ ಅವಳ ನಡುವಿನ ರೂಪ, ವಯ್ಯಾರದ ನಡಿಗೆ ರಸಿಕ ಸುರತಾನಂದವನ್ನು ಉಂಟುಮಾಡುವುದು. ಹೀಗೆ ಹಲವು ಬಗೆಗಳಲ್ಲಿ ಊಹಿಸಿಕೊಂಡು ಮಲುಹಣಿಯ ಮನೆಗೆ ಮಲುಹಣ ಬರುತ್ತಾನೆ. ಇಂತಹ ಅನೇಕ ಸಂದರ್ಭಗಳಲ್ಲಿ ಭೀಮಕವಿ ಶೃಂಗಾರ ಸನ್ನಿವೇಶಗಳನ್ನು ಸೃಷ್ಟಿಸಿದ್ದಾನೆ. ಈಶ್ವರ ಭಕ್ತಿಯೇ ಪ್ರಧಾನವಾಗಿರುವ ಈ ಪುರಾಣದಲ್ಲಿ ಕೆಲವು ಸಂದರ್ಭಗಳಲ್ಲಿ ಮಾತ್ರ ಇಂತಹ ಶೃಂಗಾರ ರಸವನ್ನು ನೀಡುವ ಸನ್ನಿವೇಶಗಳಿವೆ. ಈ ಸನ್ನಿವೇಶಗಳು ಕೂಡ ಒಂದು ರೀತಿಯಲ್ಲಿ ಶಿವಧರ್ಮದ ಮಹೋನ್ನತಿಗೆ, ಶಿವಧರ್ಮದ ಪ್ರತಿಪಾದನೆಗಾಗಿ ಮಾಡಿರುವ ವರ್ಣನೆಗಳಾಗಿ ಶರಣರ ಕಥೆಗಳಲ್ಲಿ ಕಂಡುಬರುತ್ತವೆ. ಅತಿಯಾದ ಶೃಂಗಾರವನ್ನು ಚಿತ್ರಿಸಿ ಭಕ್ತಿ ಕಾವ್ಯಕ್ಕೆ ಭಂಗವುಂಟಾಗದಂತೆ ಎಚ್ಚರವಹಿಸಿರುವ ಸೋಮನಾಥ ಹಾಗೂ ಭೀಮಕವಿಯರು ಕಥೆಗೆ ಅವಶ್ಯವೆನಿಸಿದಷ್ಟು ನೀಡಿರುವುದು ಈ 'ಬಸವಪುರಾಣ'ಗಳಲ್ಲಿ ಕಂಡುಬರುತ್ತದೆ.

**ಕರುಣ :**

ಕರುಣ ರಸದ ಸ್ಥಾಯಿಭಾವ ಶೋಕ 'ಬಸವಪುರಾಣ'ಗಳಲ್ಲಿ ಕರುಣ ರಸವನ್ನು ಉಕ್ಕಿಸುವಂತಹ ಅನೇಕ ಸನ್ನಿವೇಶಗಳು ನಿರೂಪಿತಗೊಂಡಿವೆ. ಭಕ್ತಿ ತನ್ಮತೆಯಲ್ಲಿ ಮುಳುಗಿದ ಇಲ್ಲಿನ ಶರಣರು ಶಿವಧರ್ಮ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಶಿವನನ್ನು ಆರಾಧಿಸುತ್ತಿರುತ್ತಾರೆ. 'ಬಸವಪುರಾಣ'ಗಳಲ್ಲಿ ಕಂಡುಬರುವ ಅನೇಕ ಮುಗ್ಧಭಕ್ತರು ಈ ಕರುಣ ರಸದ ಪ್ರತಿಪಾದಕರಾಗಿದ್ದಾರೆ. ಇಲ್ಲಿನ ಮುಗ್ಧಶರಣರು ಶಿವನಲ್ಲಿ ಶಿವಮಹಿಮೆಯಲ್ಲಿ ಅನುರಕ್ತರಾಗಿ, ಶಿವನೇ ಸರ್ವಸ್ವವೆಂದು ನಂಬಿಕೊಂಡು ಜೀವನ ನಡೆಸುತ್ತಿರುತ್ತಾರೆ. ರುದ್ರಪಶುಪತಿ ಎಂಬ ಶಿವಭಕ್ತ ಕರಕಂಠನಾದ 'ಶಿವನು ವಿಷವನ್ನು ಕುಡಿದನೆಂದು ದುಃಖಿಸುತ್ತಾ ತನ್ನ ಪ್ರಾಣವನ್ನೇ ಬಲಿಕೊಡಲು ಮುಂದಾಗುವ' ಇವನ ಭಕ್ತಿಯ ಸೇವೆ ಕರುಣ ರಸದ ಅನುಭವವನ್ನು ಮೂಡಿಸುತ್ತದೆ. 'ಕೋಳೂರು ಕೊಡಗೂಸು' ಎಂಬ ಬಾಲಕಿಯ ಕಥೆಯಲ್ಲಿ ಶಿವನು ಹಾಲನ್ನು ಕುಡಿಯಲಿಲ್ಲ ಎಂಬ ಕಾರಣವಾಗಿ ಪರಿಪರಿಯಾಗಿ ಬೇಡುವ ಸನ್ನಿವೇಶವನ್ನು ಇಬ್ಬರು ಕವಿಗಳು ಶೋಕರಸ ಪರಿಣಾಮಕಾರಿಯಾಗುವಂತೆ ಚಿತ್ರಿಸಿದ್ದಾರೆ. 'ಬೇಡರ ಕಣ್ಣಪ್ಪ'ನ ಕಥೆಯಲ್ಲಿ ಶಿವನು ಅಡವಿಯಲ್ಲಿ ಬಂದು ನೆಲಸಿರುವುದನ್ನು ಕಂಡು ಕಡು ದುಃಖಿತನಾಗಿ ಅಳುತ್ತಾ ನೀನೀ ರೀತಿ ಒಂಟಿಯಾಗಿ ಇಲ್ಲಿರುವುದು ಉಚಿತವಲ್ಲ ನನ್ನೊಂದಿಗೆ

ಊರಿಗೆ ಬಾ ಎಂದು ಕೇಳುವುದು ಮತ್ತು ಹಸಿವಾಗಿದೆ ಎಂದು ಮಾಂಸ ತಂದು ಬಡಿಸುವುದು, ಅದನ್ನು ಆರೋಗಿಸುವಂತೆ ಬೇಡಿಕೊಳ್ಳುವುದು, ಇಂತಹ ಕಡೆಗಳೆಲ್ಲ ಶೋಕರಸವನ್ನು ಪರಿಣಾಮಕಾರಿಯಾಗುವಂತೆ ಚಿತ್ರಿಸಿದ್ದಾರೆ. ಮುಗ್ಧಭಕ್ತರ ಮುಗ್ಧತ್ವವನ್ನು ತೋರಿಸುವಾಗ ಓದುಗರ ಮನಸ್ಸನ್ನು ಕಲಕುವಂತಹ ಚಿತ್ರಣಗಳನ್ನು ಕವಿಗಳು ಚಿತ್ರಿಸಿದ್ದಾರೆ. 'ಬಸವಪುರಾಣ'ಗಳಲ್ಲಿ ಇಂತಹ ಅನೇಕ ಸನ್ನಿವೇಶಗಳು ಪ್ರತಿ ಸಂಧಿಯಲ್ಲೂ ಕಾಣಸಿಗುತ್ತವೆ. ಆದರೆ ಬೆಜ್ಜಮಹಾದೇವಿಯ ಕಥೆಯಲ್ಲಿ ಚಿತ್ರಿಸಿರುವ ಶೋಕರಸ ಅತ್ಯಂತ ಉತ್ಕೃಷ್ಟವಾದುದು.

'ತಾಯಿ ಮಗು'ವಿನ ಸಂಬಂಧದ ಚಿತ್ರಣವನ್ನು ಭಾವೋದ್ವೇಗದೊಂದಿಗೆ ಇಬ್ಬರೂ ಕವಿಗಳು ಇಲ್ಲಿ ಚಿತ್ರಿಸಿರುವುದು ಕಂಡುಬರುತ್ತದೆ. ಶಿವನನ್ನು ತಾಯಿಯಿಲ್ಲದ ತಬ್ಬಲಿ ಎಂದು ಬಗೆದ ಮುಗ್ಧೆ ಬೆಜ್ಜಮಹಾದೇವಿ ಅವನಿಗೆ ತಾಯಿಯಾಗುವೆನೆಂದು ಬಯಸುತ್ತಾಳೆ. ತಬ್ಬಲಿ ಮಗುವಿನ ಸ್ಥಿತಿಯನ್ನು ಕಂಡ ಅವಳ ಮನಸ್ಸು ವಿಲವಿಲ ಒದ್ದಾಡುವ ಸನ್ನಿವೇಶವನ್ನು ಸೋಮನಾಥ ಹೇಳುವುದು ಹೀಗೆ

"ದಲ್ಲಿ ಸಚ್ಚೆನೋ ಕಾಕ ತ್ರೈಲೋಕ್ಯಪತಿಕೀಂ
ಜೆಲ್ಲೆಂಬೋ ಯಿಟ್ಲೇಮಿ ಸೇಯಂಗವಚ್ಚುಂ
ದಲ್ಲಿ ಸಚ್ಚಿನಂ ಗಾದೆ ತಾನು ಡಸ್ಪಿತಿನಿ
ಯೆಲ್ಲವಾರಿಕೆ ದುಃಖ ಮಿಟ್ಟಿದಕಾದೆ
ತಲ್ಲಿಗಲ್ಗಿನ ನೇಲ ತಪಸಿ ಗಾನಿಚ್ಚುಂ
ದಲ್ಲಿಗಲ್ಗಿನ ನೇಲ ತಲ ಜಡಲ್ಗಟ್ಟುಂ
..........................................................
..........................................................
ದಲ್ಲಿ ಲೇಕುಂಡಿನತನಯುಂಡು ಗಾನ
ಪ್ರಲ್ಲದುಂಡ್ಯೆ ಯಿನ್ನಿವಾಟ್ಲಕು ವಚ್ಚೆಂ"

(ಗೂ.ವೆಂ.ಸು.(ಸಂ),ಬ.ಪು.ಬ.ಪು.ತೃ.ಆ.ಸಾ.೫೫೭-೫೭೦)

(ತಾಯಿ ಸತ್ತಳೇನೋ ಪಾಪ ತ್ರೈಲೋಕಪತಿಗೆ. ಅಯ್ಯಯ್ಯೋ ಈಗೇನು ಮಾಡುವುದು, ತಾಯಿ ಸತ್ತಿದ್ದರಿಂದ ತಾನು ಬಡವಾಗಿರುವನು. ಎಲ್ಲರಿಗೂ ದುಃಖ ಇಂಥದೇ ಅಲ್ಲವೇ? ತಾಯಿ ಇದ್ದಿದ್ದರೆ ತಾಪಸಿಯಾಗಲು ಬಿಡುತ್ತಿದ್ದಳೇ, ತಲೆ ಜಡಗಟ್ಟಲು ಬಿಡುತ್ತಿದಳೆ, ಭಿಕ್ಷೆಗಾಗಿ ಕಳುಹಿಸುತ್ತಿದ್ದಳೆ, ಸುಡಗಾಡಿಗೆ ಕಳುಸುತ್ತಿದ್ದಳೆ? ತಾಯಿಯಿಲ್ಲದ ಮಗನಾಗಿದ್ದರಿಂದಲೇ ಇಂಥಹ ಕಷ್ಟವನ್ನು ಅನುಭವಿಸಿದ್ದಾನೆ)

ತಾಯಿಯಿಲ್ಲದ ಮಕ್ಕಳ ಕರುಣಾಜನಕ ಕಥೆಯನ್ನು ಕವಿ ಈ ಮೂಲಕ ತಿಳಿಸಿದ್ದಾನೆ. ಮೂರು ಲೋಕಗಳಿಗೆ ಸೃಷ್ಟಿಕರ್ತನಾದ ಪರಮೇಶ್ವರನಿಗೆ ತಾಯಿಯಿಲ್ಲ ಎಂದುಕೊಳ್ಳುವ ಮಹಾದೇವಿ ಶಿವನ

ಅವತಾರವನ್ನು ಕಂಡು ಮರುಗುವ ಈ ಸನ್ನಿವೇಶ ಓದುಗರನ್ನು ಮುಗ್ಧರನ್ನಾಗಿಸುತ್ತದೆ. ತಬ್ಬಲಿ ಮಗನ ಈ ದುರವಸ್ಥೆಗೆ ತಾಯಿಯಿಲ್ಲದುದೇ ಕಾರಣವೆಂದುಕೊಂಡು ದುಃಖಿಸುವ ಅವಳ ಮಾತುಗಳು ನಿಜಕ್ಕೂ ಶೋಚನೀಯವಾದವುಗಳು. ತಬ್ಬಲಿ ಮಗುವಿಗೆ ಸ್ನಾನಮಾಡಿಸಿ ಜೋಗುಳ ಹಾಡುವುದು, ಆಟವಾಡಿಸುವುದು ಅವಳ ಮುಗ್ಧತೆಯ ಪರಮಾವಧಿಗೆ ಮಿತಿಯಿಲ್ಲ. ಹಸಿವೆಂದು ಹಾಲು ಕುಡಿಸಲು ಮುಂದಾದಾಗ ಬಾಯಿ ತೆರೆಯದಿರುವುದರಿಂದ ಗಾಬರಿಗೊಂಡ ಮಹಾದೇವಿ ಯಾವುದೋ ರೋಗ ಬಂದಿದೆ ಎಂದುಕೊಂಡು ಆ ರೋಗಕ್ಕೆ ಮದ್ದು ತಿಳಿದಿಲ್ಲವೆಂದು ರೋಧಿಸುವ ಕರುಣಾಜನಕ ಸನ್ನಿವೇಶವನ್ನು ನೋಡಿ

...ನಾಯನ್ನ
ನಾಕುನ್ನ, ನಾಪಟ್ಟಿ, ನಾಚಿನ್ನವಾಡುಗ
ನಾಕುಙ್ಞ, ಚನ್ನೆಲಾರ ಕುಡ್ವವೈತಿ
ನೀ ಚಮಟಯುಂ ಜೂಚಿ ನೆತ್ತರು ನವುದು
ನೋಚೆಲ್ಲಯೆಟು ಸೂಡನೊಪುದು ನನ್ನ
ತಲ್ಲಿಂಗದನ್ನ ಯಿಂತಟಿ ಕೋರ್ತುನನ್ನ
ಯೆಲ್ಲೆಡ ನೋರಲ ನೇನಿಙುಂಗಂಗದನ್ನ
.................................................
.................................................
ಯೆಙುಂಗನು ಮಂದು ಮ್ರಾಂಕೇವಿಯು, ನನಚುಂ
ಬನವುಂ ಬಲವರಿಂಚುಂ ಬಯಂಪಡಿ ಪೊರಲುಂ

(ಪಿ.ವಿ.ನಾರಾಯಣ,ಬ.ಪು.ತೃ.ಆ.ಸಾ.೬೩೮-೬೫೧)

(ಎನ್ನಯ್ಯ, ಎನ್ನಪ್ಪ, ಚಿನ್ನಣ್ಣ, ಎನ್ನ ಪುಟಾಣಿ ಚನ್ನಯ್ಯ ಯಾಕೆ ಹಾಲನ್ನು ಕುಡಿಯುತ್ತಿಲ್ಲ. ನಿನ್ನ ಬೆಚರನ್ನು ನೋಡುತ್ತಿದ್ದರೆ ನೆತ್ತರು ಎನಿಸುತ್ತಿದೆ. ನಾನು ತಾಯಿಯಲ್ಲವೇ ನಿನ್ನಲ್ಲಿ ಕೋರಿಕೆಯಣ್ಣ ನಾನು ಬೇರೆ ಏನನ್ನು ಅರಿಯನು. ನೀನಿಲ್ಲದೆ ಏಕಾಂಗಿಯಾಗಿ ಇರಲಾರೆನು ಯೋಚಿಸದೆ ಇದನ್ನೆಲ್ಲ ಹೇಗೆ ಬರೆಸುವೆನಣ್ಣ. ನೀನಗೆ ಅಜೀರ್ಣವೇ, ಶೀತವೊ, ಬಾಯಲ್ಲಿ ಮುಳ್ಳು ಸಿಕ್ಕಿಕೊಂಡಿದೆಯೋ ನಾನರಿಯೆ. ನಾನ್ಯಾವ ಔಷದಿಯನ್ನು ನೀಡಲಿ ಎಂದು ಹಂಬಲಿಸಿ ನೆಲದಲ್ಲಿ ಹೊರಳಾಡಿ)

ಹೀಗೆ ಕರುಣಾಜನಕವಾಗಿ ಕಣ್ಣೀರಿಡುವ ಮಹಾದೇವಿಯ ಮನಸ್ಥಿತಿಯನ್ನು ಕವಿ ಚಿತ್ರಿಸಿದ್ದಾನೆ. ಕನ್ನಡ 'ಬಸವಪುರಾಣ'ದಲ್ಲಿಯೂ ಈ ಸನ್ನಿವೇಶವು ಅತ್ಯಂತ ಶೋಕಭರಿತ ರಸಾನುಭವವನ್ನು ನೀಡುತ್ತದೆ.(ಭೀಸಂ೧೪.ಪ.೧೮,೧೯,೨೦,೨೧)

**ರೌದ್ರರಸ :**

ಈ ರಸದ ಸ್ಥಾಯಿಭಾವ ಕ್ರೋಧ, ರೌದ್ರರಸವು 'ಬಸವಪುರಾಣ'ಗಳಲ್ಲಿ ಉಗ್ರಭಕ್ತಿಯ ಶರಣರಲ್ಲಿ ಕಂಡುಬರುತ್ತದೆ. ತಮ್ಮ ಧರ್ಮದ ಆಚಾರ, ನೀತಿಗೆ ವಿರುದ್ಧವಾದವರ ಮೇಲೆ ಸೇಡು ತೀರಿಸಿಕೊಳ್ಳುವ ನೇಮವನ್ನು ಮಾಡುತ್ತಿರುವ ಭಕ್ತರು ಹಲವರಿದ್ದಾರೆ. ಇಂತಹ ಭಕ್ತರ ಭಕ್ತಿಯ ಅಭಿವ್ಯಕ್ತಿಯನ್ನು ವರ್ಣಿಸುವಾಗ ರೌದ್ರರಸದ ಪ್ರತಿಪಾದನೆಯನ್ನು ಕವಿಗಳು ಮಾಡಿದ್ದಾರೆ. ಉಗ್ರಭಕ್ತಿಯ ಶಿವಭಕ್ತರಾದ ಮಡಿವಾಳ ಮಾಚಿದೇವ, ಇರಿಭಕ್ತ, ಬಾಹೂರ ಬೊಮ್ಮಯ್ಯರಂತಹ ಶರಣರ ಚರಿತ್ರೆಯನ್ನು ಹೇಳುವಾಗ ಅವರ ಉಗ್ರಭಕ್ತಿಯ ನಿರೂಪಣೆಯಲ್ಲಿ ರೌದ್ರರಸವನ್ನು ಆಸ್ವಾದಿಸಬಹುದು. ಮಡಿವಾಳ ಮಾಚಿದೇವನ ರೌದ್ರರಸವನ್ನು ಸೋಮನಾಥ ಹೀಗೆ ಚಿತ್ರಿಸಿದ್ದಾನೆ.

ದಂಡಿಯ್ಯ ಮಾವಂತುತಂಡಂಬುಂ ಜಂಪಿ
ತಂಡಂಬುಂ ಜೇಪಟ್ಟಿ ತ್ರೋಚಿ ರಾಂದಿಗಿಂಚಿ
ಯಂಜಲಿ ಗುಂಜಲಿ ಯಲ್ಲಾರ್ಚಿ ಪೇರ್ಚಿ
ಭಂಜಿಂಪುಚುನು ವೀರಭದ್ರುಂಡು ದಿವಿರಿ
ಪಡಿ ನೃಸಿಂಹಾನಿವ್ವೆ ಚುವಡುವುನು ಪೈಚುಂ
ಬಡನೀಕ ಲೋಚೇತಂ ಬೆಡಚೇತ ವೇಯು
ನಚ್ಚುಗಾ ನಾರ್ಚುಚು ಹರುಂಡಿಭದ್ಯೆತ್ಯು
ವ್ರಚ್ಚಿನಗತಿ ವ್ರಚ್ಚಿ ವಂದಜಲಾಡುಂ
ಗೋಪಿಂಚಿ ವಿಷ್ಣುನಿಕೋಲೆಮ್ಮು ರುದ್ರಂ
ಡೇಪುನಂದುಮಿನಟ್ಟಿಲ ನೆಮ್ಮುಲೇಜು

(ಗೂ.ವೆಂ.ಸು.(ಸಂ),ಬ.ಪು.,ಚ.ಆ.ಸಾ.೧೯೧-೨೦೦)

(ಹಲವು ಮಾವುತರ ತಂಡವನ್ನು ಕೊಂದು ಸೊಂಡಿಲ ಹಿಡಿದು ತಿರುಗಿಸುತ್ತ ಎಸೆದು ಕೈಗಳನ್ನು ಭಿಗಿಯಾಗಿ ಮುಷ್ಠಿಯಾಗಿಸುತ್ತಾ ಭಂಜಿಸಿದನು. ವೀರಭದ್ರನು ಕೋಪದಿಂದ ಸಿಂಹವನ್ನು ಎಸೆಯುವಂತೆ ಎಸೆದು ಬೀಳಲಿಯದೆ ಒಳ ಹೊರಗೆ ಕೈಯಿಂದ ಗುದ್ದಿ, ಚುಚ್ಚಿ ಹರನು ದೈತ್ಯವಾಗಿ ರಭಸದಲಿ ಬಂದು ಸೀಳಿದನು. ಕೋಪವು ಹರಿಯ ಬೆನ್ನೆಲಬನ್ನು ರುದ್ರನು ಭರದಿಂದ ಮುರಿದ ರೀತಿ ಎಲುಬನ್ನು ಮುರಿದು)

ಇದೇ ರೀತಿಯ ರೌದ್ರರಸಕ್ಕೆ ಸಂಬಂಧಿಸಿದ ವರ್ಣನೆಗಳು ಕನ್ನಡ ಬಸವಪುರಾಣದಲ್ಲಿ ಸಂಧಿ ೨೦(ಮಡಿವಾಳ ಮಾಚಿದೇವ) ಸಂಧಿ೨೧ (ಬಾಹೂರ ಬೊಮ್ಮಯ್ಯ) ಮತ್ತು ಸಂಧಿ-೨೨ (ಶಂಕರದಾಸಿಮಯ್ಯಗಳ)ರ ಕಥೆಗಳಲ್ಲಿ ಈ ರಸದ ಛಾಯೆಗಳು ಕಂಡುಬರುತ್ತವೆ.

**ಭಯಾನಕ ರಸ :**

ಇದರ ಸ್ಥಾಯಿಭಾವ ಭಯ. ಭಯವನ್ನು ಹುಟ್ಟಿಸುವ ಭಯಾನಕ ರಸದ ಸನ್ನಿವೇಶಗಳು 'ಬಸವಪುರಾಣ'ಗಳಲ್ಲಿ ಅಲ್ಲಲ್ಲಿ ಕಂಡುಬರುತ್ತವೆ. ವೀರಶೈವ ಧರ್ಮವನ್ನು ಉನ್ನತೀಕರಿಸಲು

ಅದನ್ನು ಉಳಿಸಲು ಮುಂದಿನ ಪೀಳಿಗೆಗೆ ಈ ಧರ್ಮದ ಮಹತ್ವವನ್ನು ತಿಳಿಸುವ ಸಲುವಾಗಿ ಈ 'ಬಸವಪುರಾಣ'ಗಳಂತಹ ಕಾವ್ಯಗಳು ರಚನೆಗೊಂಡಿರುವುದು ತಿಳಿದ ಸಂಗತಿ. ಈ ಹಿನ್ನೆಲೆಯಲ್ಲಿ ಧರ್ಮಪ್ರತಿಪಾದನೆಯ ನೆಪದಲ್ಲಿ ಅನ್ಯಧರ್ಮಗಳನ್ನು ಟೀಕಿಸುವ, ಹಿಂಸಿಸುವ ಸನ್ನಿವೇಶಗಳಿವೆ. ಜೊತೆಗೆ ವೀರಶೈವ ಧರ್ಮವನ್ನು ಅವಮಾನ ಮಾಡುವಂತವರಿಗೆ ನೀಡುವ ಶಿಕ್ಷೆಯನ್ನು ಅತ್ಯಂತ ಭಯಾನಕ ಸ್ವರೂಪದಲ್ಲಿ ಈ 'ಬಸವಪುರಾಣ'ಗಳಲ್ಲಿ ಚಿತ್ರಿಸಿರುವುದೂ ಉಂಟು. ನಂದಿಕೇಶ್ವರನ ಅವತಾರದ ಸಂದರ್ಭದಲ್ಲಿ ಸೋಮನಾಥ ಹೇಳುವ ಭಯಾನಕತೆಯನ್ನು ನೋಡಿ.

ಹರಿತಲ್ಲಡಿಲ್ಲ ಬ್ರಹ್ಮಾಂಡಮುಲೊ ಡೊಲ್ಲ
ಧರ ನುಲ್ಕಲುನುಡುಲ್ಲ ಸುರಲು ಭೀತಿಲ್ಲ
ನಪರಿಮಿತಂ ಬೈನ ಯತಿವೀರ ಘೋರ
ತಪಮಾಚರಿಂಚೇ ಜಿತ್ರಮು ಚಿತ್ರಮನಂಗ
ನಂತ ಭಯಭ್ರಾಂತುಲೈ ಯಜಾಚ್ಯುತುಲು
ಸಂತಾಪಚಿತ್ತುಲೈ ಸಕಲ ದೇವತಲು
ಗ್ರಕ್ಕುನ ಮಾಯುನ್ನಕಡಕು ನೇತೆಂಚಿ
ಮ್ರೊಕ್ಕಿ ಸಾಷ್ಟಾಂಗುಲೈ ಮೊಡ್ಡುಂಗೇಲಮರ

(ಗೂ.ವೆಂ.ಸು.(ಸಂ).ಬ.ಪು.ಪ್ರ.ಆ.ಸಾ.೪೨೧–೪೨೮)

(ಹರಿ ತಲ್ಲಣಿಸಲು ಬ್ರಹ್ಮಾಂಡಗಳೇ ಉರುಳಿದವು. ಧರೆಗೆ ಉಲ್ಕೆಗಳು ಬಿದ್ದು, ಸುರರು ಹೆದರಿ ಅಪರಮಿತವೆನಿಸುವ ಅತೀ ಘೋರ ತಪವಾಚರಿಸಿದರು. ಭಯಭ್ರಾಂತರಾದರು ಅಚ್ಯುತರು. ಸಂತಾಪಚಿತ್ತರಾದ ದೇವತೆಗಳು ಬೇಗನೆ ತಾವಿದ್ದಕಡೆಗೆ ಬಂದು ಕೈಗಳ ಮುಗಿದು ಸಾಷ್ಟಾಂಗ ನಮಿಸಿ)

ಹೀಗೆ ನಂದಿಕೇಶ್ವರನ ಅವತಾರವಾದ ಬಳಿಕ ದೇವಲೋಕ ಮರ್ತ್ಯಲೋಕಗಳಲ್ಲಾದ ಅಲ್ಲೋಲ ಕಲ್ಲೋಲವನ್ನು ಕವಿ ಚಿತ್ರಿಸಿದ್ದಾನೆ. ಇದೇ ರೀತಿಯ ಭಯವನ್ನು ಹುಟ್ಟಿಸುವ ಮತ್ತೊಂದು ಸಂದರ್ಭ ವೈಜಕವ್ವೆಯ ಕಥೆಯಲ್ಲಿ ಬರುತ್ತದೆ. ವೈಜಕವ್ವೆಯ ಗಂಡ ಜೈನರಿಗೆ ಪ್ರಸಾದ ನೀಡಬಯಿಸಿ ಅವರನ್ನು ಕರೆತರಲು ಹೋದಾಗ ಶಿವನು ಮಾರುವೇಷದಿಂದ ಬರುವನು. ವೈಜಕವ್ವೆಯು ಮಾರುವೇಷದಿಂದ ಬಂದ ತಪಸ್ವಿಗೆ ಅಡಿಗೆ ಬಡಿಸಿ ಉಣಿಸುತ್ತಿರುವುದನ್ನು ಕಂಡ ಅವಳ ಗಂಡ ನಿಂದಿಸುತ್ತಾ ಅವಳನ್ನು ಚಾಟಿಯಿಂದ ಹೊಡೆಯುವನು. ಅದೃಶ್ಯವಾಗಿದ್ದ ಪರಮೇಶ್ವರನು ತನ್ನ ಮಹಿಮೆಯಿಂದ ಅವಳಿಗೆ ಹೊಡೆಯುವ ಚಾಟಿ ಏಟುಗಳು ಜೈನರಿಗೆ, ಜೈನ ಪಶುಗಳಿಗೆ ಬೀಳುವಂತೆ ಮಾಡುತ್ತಾನೆ. ಆಗ ಅಲ್ಲಿ ಉಂಟಾದ ಭಯವನ್ನು ಸೋಮನಾಥ ಹೀಗೆ ಹೇಳಿದ್ದಾನೆ. "ಬೀದಿಗಳಲ್ಲಿ ತಿರುಗುವ ಜೈನ ಪಶುಗಳನ್ನು ಸೋಕಿ ಬೊಬ್ಬೆಗಳು ಕಟ್ಟಿದವು. ಮೂರು ಬಾರಿ ಸುತ್ತಿ ಹೊಡೆದ ಹೊಡೆತಗಳಿಂದ ಬೆನ್ನು ಮುರಿದುಕೊಳ್ಳುತ್ತ, ಭಯದಿಂದ ಬೆನ್ನನ್ನು

ತುರಿಸಿಕೊಳ್ಳುತ್ತ ಬಿದ್ದ ಏಟುಗಳನ್ನು ವಾಸಿಮಾಡೆಂದು ಅರಚುತ್ತ ಬಾಯೆತ್ತಿ ಅಳುತ್ತಾ ಬಸದಿಗಳನೇರಿ ಅಲ್ಲಿಂದ ಇಳಿಯುತ್ತ ಓಡುತ್ತಿಹರು. ಕೆರೆಗಳಲ್ಲಿ ಮುಳುಗಿ, ಮರಗಳೇರಿ ಒಬ್ಬರು ಒಂದೊಂದು ದಿಕ್ಕಿಗೆ ಸೇರಿ ಹೊಡೆತಕ್ಕೆ ಸಿಲುಕುತ್ತ ವಿಹ್ವಲರಾಗಿ ತಮ್ಮ ಕರ್ಮವೆನ್ನುತ್ತಾ, ಸಾವು ಬಂತು ಎನ್ನುತ್ತಾ, ನೊಂದೆವು ಎನ್ನುತ್ತಾ ಶಾಪವನ್ನು ಅನುಭವಿಸಿ.(ಷ.ಆ.ಸಾ.೧೦೨೧-೧೦೪೦) ಈ ಬಗೆಯಲ್ಲಿ ಭಯಾನಕ ರಸವನ್ನು 'ಬಸವಪುರಾಣ'ಗಳಲ್ಲಿ ಕಾಣಬಹುದು.

**ಅದ್ಭುತ ರಸ :**

ಅದ್ಭುತ ರಸದ ಸ್ಥಾಯಿಭಾವ ವಿಸ್ಮಯ. 'ಬಸವಪುರಾಣ'ಗಳಲ್ಲಿ ಇಂತಹ ವಿಸ್ಮಯವನ್ನು ಉಂಟುಮಾಡುವಂತಹ ಅನೇಕ ಸಂದರ್ಭಗಳು ಬರುತ್ತವೆ. ಈ ವಿಸ್ಮಯ ಒಂದು ರೀತಿಯ ಪವಾಡಗಳಿಗೆ ಸಮಾನವಾದುದು. ಶರಣರ ಮಹಿಮೆ, ಪವಾಡಗಳನ್ನು ಚಿತ್ರಿಸುವಾಗ ಈ ಅದ್ಭುತ ರಸವನ್ನು ಹೆಚ್ಚು ಬಳಸಿದ್ದಾರೆ. ಈ ಪುರಾಣಗಳ ಬಹುಭಾಗಗಳು ಅದ್ಭುತ ರಸಗಳಿಂದ ತುಂಬಿಕೊಂಡಿವೆ. ಕಾರಣ ಇಲ್ಲಿರುವ ಬಸವಣ್ಣನಾದಿಯಾಗಿ ಶರಣರೆಲ್ಲರೂ ಒಂದೊಂದು ಕಾಯಕದಲ್ಲಿ ತೊಡಗಿಕೊಂಡಿರುವುದು. ತಮ್ಮ ಕಾಯಕನಿಷ್ಠೆಯ ಪ್ರತಿಪಾದನೆಯ ಸಂದರ್ಭದಲ್ಲಿ ಬೇರೆಯವರಿಂದ ಸಂಕಷ್ಟಕ್ಕೆ ಸಿಲುಕಿದಾಗ ಅಥವಾ ತಮ್ಮ ಧರ್ಮದವರು ಬೇರೆಯವರಿಂದ ತೊಂದರೆಗೊಳಗಾದಾಗ ತಮ್ಮ ಅದ್ಭುತವಾದ ಶಕ್ತಿ ಮಹಿಮೆಗಳಿಂದ ಪರಿಹಾರಗಳನ್ನು ಕಂಡುಕೊಳ್ಳುತ್ತಾರೆ. ಬಸವಣ್ಣನು ಮಾಡುವ ಪವಾಡಗಳಿಂದ ಜೋಳವು ಮುತ್ತಾದುದು, ಗೊಲ್ಲತಿಯ ಮೊಸರಿನ ಮಡಿಕೆಯನ್ನು ಆಗಸದಲ್ಲಿ ನಿಲ್ಲಿಸಿದುದು, ಬದನೆಕಾಯಿಗಳನ್ನು ಲಿಂಗಗಳಾಗಿ ಪರಿವರ್ತನೆ ಮಾಡಿದುದು, ವಿಷವನ್ನು ಕುಡಿದು ಬದುಕಿದ್ದು, ಭಂಡಾರದ ಹಣವನ್ನು ಮೂರುಪಟ್ಟು ಹೆಚ್ಚು ಮಾಡಿದ್ದು ಮುಂತಾದವು ಇಲ್ಲಿ ನಡೆಯುವ ಅದ್ಭುತಗಳೇ ಆಗಿವೆ. ಇವೆಲ್ಲವು ಓದುಗರನ್ನು ವಿಸ್ಮಯಗೊಳಿಸುತ್ತವೆ.

ಬಸವಣ್ಣನಂತೆಯೇ ಶಿವಧರ್ಮದಲ್ಲಿ ನಿಷ್ಠೆಯಿರಿಸಿಕೊಂಡು ತಮ್ಮ ಸೇವೆಯನ್ನು ನಿತ್ಯವೂ ಅರ್ಪಿಸುತ್ತಿರುವ ಅನೇಕ ಶಿವಶರಣರು ಅದ್ಭುತಗಳನ್ನು ವಿಸ್ಮಯಕಾರಿ ಸನ್ನಿವೇಶಗಳನ್ನು ಸೃಷ್ಟಿಸಿದ್ದಾರೆ ಅನೇಕ ಪವಾಡಗಳನ್ನು ತೋರುವುದರ ಮೂಲಕ ಅದ್ಭುತ ರಸಕ್ಕೆ ಕಾರಣೀಭೂತರಾಗಿದ್ದಾರೆ. ಸೋಮನಾಥ ಮತ್ತು ಭೀಮಕವಿಯರು ಅದ್ಭುತ ರಸವನ್ನು ಒಂದು ಪ್ರಧಾನ ರಸವೆಂಬಂತೆ ಈ ಪುರಾಣಗಳಲ್ಲಿ ಚಿತ್ರಿಸಿರುವುದು ಮೇಲ್ನೋಟಕ್ಕೆ ಗೋಚರಿಸುತ್ತದೆ. ಹಾವಿನಹಾಳು ಕಲ್ಲಯ್ಯ, ಬಬ್ಬಿಬಾಚಯ್ಯ, ಮಾದರ ದೂಡಯ್ಯ, ಕಕ್ಕಯ್ಯ, ಕೆಂಬಾವಿ ಭೋಗಯ್ಯ, ವರದಾನಿ ಗುಡ್ಡವ್ವೆ ಮುಂತಾದವರ ಪಾತ್ರಗಳ ಮೂಲಕ ಅವರ ಮಹಿಮೆಗಳ ಮೂಲಕ ಅನೇಕ ಅದ್ಭುತಗಳನ್ನು ವಿಸ್ಮಯಗಳನ್ನು ಕವಿಗಳು ಸೃಷ್ಟಿಸಿದ್ದಾರೆ. (ಇದಕ್ಕೆ ಪೂರಕವಾಗಿ ಬಸವಪುರಾಣಗಳಲ್ಲಿನ ಪವಾಡಗಳು ಅಧ್ಯಾಯ ನೋಡಿ)

ವೀರರಸ :

ಇದರ ಸ್ಥಾಯಿಭಾವ ಉತ್ಸಾಹ. ವೀರತ್ವವನ್ನು ಪ್ರದರ್ಶಿಸಿ ಯುದ್ಧಮಾಡುವ ಸನ್ನಿವೇಶಗಳು 'ಬಸವಪುರಾಣ'ಗಳಲ್ಲಿಲ್ಲ. ಉಗ್ರಭಕ್ತಿಯ ಶರಣರಲ್ಲಿ ಶಿವದ್ರೋಹಗೈದವರ ವಿರುದ್ಧ ಸೇಡು ತೀರಿಸಿಕೊಳ್ಳುವ ಸಂದರ್ಭಗಳಲ್ಲಿ ಕ್ವಚಿತ್ತಾಗಿ ಈ ವೀರತ್ವದ ಪ್ರದರ್ಶನವಿದೆ. ಉಳಿದಂತೆ ಈ ರಸ ಹೆಚ್ಚು ಬಳಕೆಗೊಂಡಿಲ್ಲ. ಪುರಾಣದ ಕೊನೆಯಲ್ಲಿ ಬಿಜ್ಜಳನು ಹರಳಯ್ಯ ಮತ್ತು ಮಧುವರಸರ ಕಣ್ಣುಗಳನ್ನು ಕೀಳಿಸಿದಾಗ ಜಗದೇವ ದಂಡನಾಯಕನು ಮಲ್ಲಿಬೊಮ್ಮಯ್ಯರ ಜೊತೆ ಸೇರಿ ಬಿಜ್ಜಳನನ್ನು ಕೊಲೆಮಾಡುವ ಸಂದರ್ಭದಲ್ಲಿ ಈ ಮೂವರ ವೀರತ್ವ, ಅವರ ವೀರಾವೇಶದ ಹೋರಾಟವನ್ನು ಕವಿಗಳು ಚಿತ್ರಿಸಿದ್ದಾರೆ. ಇಲ್ಲಿ ಸೋಮನಾಥನಿಗಿಂತ ಭೀಮಕವಿಯೇ ಹೆಚ್ಚು ವೀರರಸ ಪ್ರಧಾನವಾಗಿ ಚಿತ್ರಿಸಿರುವುದನ್ನು ಕಾಣಬಹುದು.

"ದೇವವಸ್ತ್ರವನುಟ್ಟು ಭಸ್ಮಾಂ
ಗಾ ವಿಭೂಷಣರಾಂಕಿತಾ ವೀ
ರಾವತಾರರು ವೀರಭದ್ರಾದಿ ಪ್ರಮಥವರರ
ಭಾವದಲಿ ನೆನೆದುಗ್ರಕೈದುಗ
ಳೋವಿ ಮೂವರು ತಮತಮಗೆ ಪರಿ
ದಾ ವನಿತೆಗೊಲಿದೆಱಗಿ ಹರಕೆಯ ಸೇಸೆಗಳ ಧರಿಸಿ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೬೦.ಪ.೨೨)

ಹೀಗೆ ಯುದ್ಧಕ್ಕೆ ಹೊರಡುವ ಸೈನಿಕರಂತೆ ಹೊರಟು ತಾಯಿ ಆಶೀರ್ವಾದ ಪಡೆದು ಬಿಜ್ಜಳನ ಅರಮನೆಗೆ ಬರುತ್ತಾರೆ. ಬರುವ ದಾರಿಯಲ್ಲಿ ಜನರು, ಆನೆಗಳು, ಮಾವಟಿಗರು ಮುಂತಾದ ಜೀವ ಸಂಕುಲವು ಆ ವೀರರಿಗೆ ದಾರಿಯನ್ನು ನೀಡಿ ಪಕ್ಕಕ್ಕೆ ಸರಿಯುತ್ತವೆ. ಆಯುಧಗಳನ್ನಿಡಿದು ಬರುತ್ತಿರುವ ಅವರ ಆವೇಶಭರಿತವಾದ ನಡಿಗೆ, ಅವರು ಅಲಂಕಾರಭೂಷಿತರಾಗಿರುವ ಚಿತ್ರಣ ಅದ್ಭುತವಾದದ್ದು.(ಸಂ.೬೦.ಪ–೨೫ರಿಂದ ೨೮) ಅತ್ಯಂತ ಕೋಪೋದ್ರಿಕ್ತರಾಗಿ ಬಂದವರೆ ಅರಮನೆಯ ಓಲಗದಲ್ಲಿದ್ದ ಬಿಜ್ಜಳನನ್ನು ಆಯುಧಗಳಿಂದ ಚುಚ್ಚಿ ಗಾಯಗೊಳಿಸಿ ಕೆಡವುತ್ತಾರೆ. ನಂತರ

"ಆರುತಾರುತ ಲಂಘಿಸುತ್ತ ಶ
ರೀರದೊಳು ರೋಮಾಂಚಕಂಚುಕ
ಪೂರವಾಗುತ್ತುಬ್ಬುತಂ ಕೊಬ್ಬುತ್ತ ಬೊಬ್ಬಿಡುತ
ವೀರಭಕ್ತರಿಗಿದಿರು ಮಲೆವವ
ರಾರೆನುತ್ತಂ ಗಹಗಹಿಸುತ ಕ
ಠಾರಿಗಳನುದ್ದಕ್ಕೆ ಚಿಮ್ಮುತ್ತೊಡನೆ ತಿರುಹುತ್ತ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೬೦.ಪ.೩೨)

ಈ ರೀತಿಯಾಗಿ ಬಲದೇವ ಮತ್ತು ಮಲ್ಲೆ ಬೊಮ್ಮಯ್ಯರ ವೀರತ್ವವನ್ನು ಭೀಮಕವಿ ಚಿತ್ರಿಸಿ ವೀರ ರಸವನ್ನುಕ್ಕಿಸಿದ್ದಾನೆ. ಹೀಗೆ ಒಟ್ಟಾರೆಯಾಗಿ ಕವಿಗಳು ಪೋಷಿಸಿರುವ ಮೇಲಿನ ಪ್ರಮುಖ ರಸಗಳನ್ನು ಈವರೆಗೆ ವಿಶ್ಲೇಷಿಸಲಾಯಿತು. ಇವು ಭಕ್ತಿ ಕಾವ್ಯಗಳಲ್ಲಿ ಪರಿಣಾಮಕಾರಿಯಾಗಿ ಅಷ್ಟಾದಶ ವರ್ಣನೆಗಳಿರುವ ಕಾವ್ಯಗಳಲ್ಲಿ ಮೂಡಿರುವ ರಸಭಾವಕ್ಕಿಂತ ಇಲ್ಲಿ ಕಡಿಮೆಯಿದೆ. ಭಕ್ತಿರಸವೊಂದೇ ಈ ಪುರಾಣಗಳ ಮುಖ್ಯ ಧ್ಯೇಯವಾಗಿರುವುದರಿಂದ ಇಲ್ಲಿ ಭಕ್ತಿರಸವೇ ಪ್ರಧಾನ. ಉಳಿದ ರಸಗಳು ಸಂದರ್ಭಕ್ಕನುಗುಣವಾಗಿ ನಿರೂಪಿತವಾದವುಗಳೇ ಆಗಿರುವುದರಿಂದ ಮಾರ್ಗ ಕಾವ್ಯಗಳ ಪ್ರೌಢಿಮೆ ಇಲ್ಲಿ ಕಾಣಸಿಗುವುದಿಲ್ಲ. ಭಕ್ತಿ ಕಾವ್ಯಗಳಲ್ಲಿ ರಸ ಪೋಷಣೆಗೆ ಅವಶ್ಯವಿರುವಡೆಯೆಲ್ಲೆಲ್ಲಾ ಇಬ್ಬರೂ ಕವಿಗಳು ಔಚಿತ್ಯಕ್ಕೆ ತಕ್ಕಂತೆ ಕಥಾ ಸಂವಿಧಾನಕ್ಕೆ ಪೂರಕವಾಗಿರುವಂತೆ ರಸಗಳನ್ನು ಅಭಿವ್ಯಕ್ತಗೊಳಿಸಿರುವುದನ್ನು ಕಾಣಬಹುದು.

**೬.೪. ಕಥನ ಕ್ರಮ :**

'ಬಸವಪುರಾಣ'ಗಳ ಕಥನ ತಂತ್ರವು ವಿಶಿಷ್ಟವಾದುದು. ವಿನೂತನವಾದುದು. ಬಸವಣ್ಣ ಮತ್ತು ಅವನ ಸಮಕಾಲೀನರ ಭವ್ಯ ಚರಿತ್ರೆಯನ್ನು ತಿಳಿದ ಬಳಿಕ ಅವರ ಕುರಿತು ಪುರಾಣ ರಚನೆ ಮಾಡಬೇಕೆಂದುಕೊಳ್ಳುತ್ತಾನೆ ಸೋಮನಾಥ. ತಾನು ರಚಿಸುವ ಪುರಾಣವು ಪಂಡಿತರಿಂದ ಹಿಡಿದು ಪಾಮರರವರೆಗಿನ ಎಲ್ಲಾ ವರ್ಗದ ಜನರೂ ಓದಿ ಅರಗಿಸಿಕೊಳ್ಳುವಂತಿರಬೇಕು ಎಂದು ಬಯಸಿದ ಸೋಮನಾಥ ಮೊದಲು ಮಾರ್ಗ ಕಾವ್ಯ ಪರಂಪರೆಯನ್ನು ದೂರವಿಡುತ್ತಾನೆ. ತಾನು ಸಂಸ್ಕೃತ ಭಾಷೆಯಾದಿಯಾಗಿ ಸೋದರ ಭಾಷೆಗಳಲ್ಲಿ ಸಾಕಷ್ಟು ಪಾಂಡಿತ್ಯವನ್ನು ಗಳಿಸಿದ್ದರೂ ಅವನಿಗೆ ಮಾರ್ಗ ಸಂಪ್ರದಾಯದ ಮೇಲೆ ಮೋಹವಿರಲಿಲ್ಲ. ತಾನು ರಚಿಸುವುದು ಮಹಿಮಾನ್ವಿತ ಪುರುಷರ ಚರಿತ್ರೆ, ಇದು ಹೆಚ್ಚಾಗಿ ಸಾಮಾನ್ಯ ಜನರನ್ನು ತಲುಪುವಂತಿರಬೇಕೆಂದು ಶುದ್ಧ ದೇಸಿ ಮಾರ್ಗದಲ್ಲಿ ಸರಳ ಸುಂದರವಾಗಿ ಪ್ರತಿಯೊಂದು ಅಂಶವು ಸ್ಪಷ್ಟವಾಗಿ ಅರ್ಥವಾಗುವಂತೆ ರಚಿಸಬೇಕೆಂದುಕೊಳ್ಳುತ್ತಾನೆ. ಶ್ರೀಶೈಲದಲ್ಲಿ ಕೂಡಿರುವ ಅನೇಕ ಭಕ್ತಾದಿಗಳಿಂದ ಬಸವಣ್ಣನ ಜೀವನವನ್ನು ಕಥೆಗಳೋಪಾದಿಯಲ್ಲಿ ತಿಳಿದುಕೊಂಡ ಸೋಮನಾಥ ಅದೇ ಕಥೆಗಳ ಮಾದರಿಯಲ್ಲಿ ಪುರಾಣ ರಚಿಸುತ್ತಾನೆ. ಕಥಾ ಸಂವಿಧಾನದಲ್ಲಿ ಮಾರ್ಗ ಸಾಹಿತ್ಯದಂತೆ ಒಂದೇ ಮಾದರಿಯಲ್ಲಿ ರಚಿಸದೆ ಕಥನ ಕಲೆಯಲ್ಲಿ ಹೊಸ ತಂತ್ರಗಾರಿಕೆಯನ್ನು ಮಾಡುತ್ತಾನೆ. ಕಥೆಯನ್ನು ನೇರವಾಗಿ ಹೇಳದೆ ಕಥೆಗಳಲ್ಲಿ ಉಪಕಥೆಗಳು ಬರುವಂತೆ ಚಿತ್ರಣ ಮಾಡಲಾಗಿದೆ. ಈ ಪುರಾಣದ ಕೇಂದ್ರ ವ್ಯಕ್ತಿ ಬಸವಣ್ಣನಾದರೂ ಇಲ್ಲಿ ಬಸವಣ್ಣನ ಸನ್ನಿವೇಶಗಳು ಬರುವುದು ಅತ್ಯಂತ ಕಡಿಮೆ ಸಂದರ್ಭಗಳಲ್ಲಿ. ಉಳಿದಂತೆ ತಮಿಳುನಾಡಿನ ಪುರಾತನರು ಮತ್ತು ಕನ್ನಡ ಮತ್ತು ತೆಲುಗು ನಾಡಿನ ನೂತನ ಶರಣರ ಕಥೆಗಳೇ ಇಲ್ಲಿ ಹೆಚ್ಚಾಗಿವೆ. ಸೋಮನಾಥ ಆರಂಭದಲ್ಲಿ ಹೇಳಿರುವಂತೆ 'ಅಲ್ಪಾಕ್ಷರಗಳಲಿ ಅನಲ್ಪಾರ್ಥಗಳು' ಸೃಜಿಸುವಂತೆ ಇಲ್ಲಿನ ಕಥೆಗಳನ್ನು ಹೆಣೆಯಲಾಗಿದೆ. ಈ ತಂತ್ರಗಾರಿಕೆಯನ್ನು ಕನ್ನಡದಲ್ಲಿ ಹರಿಹರ ಈಗಾಗಲೇ ಬಳಸಿರುವುದನ್ನು ಸೋಮನಾಥ ಗಮನಿಸಿರಬೇಕು.

ಹರಿಹರನ ನಂತರ ತನ್ನ ಪುರಾಣವನ್ನು ರಚನೆ ಮಾಡಿದ ಸೋಮನಾಥನಿಗೆ ಅವನ ಈ ಮಾದರಿ ಹೆಚ್ಚು ಸೂಕ್ತ ಎಂದು ಭಾವಿಸಿರಬೇಕು. ಹೀಗೆ ಹರಿಹರನ ಪ್ರಭಾವಕ್ಕೊಳಗಾಗಿದ್ದರೂ ಸೋಮನಾಥ ತನ್ನ ರಚನಾ ತಂತ್ರಗಾರಿಕೆಯಲ್ಲಿ ಮತ್ತೊಂದು ಹೊಸತನವನ್ನು ಪ್ರಯೋಗಿಸುತ್ತಾನೆ. ಅದೇನೆಂದರೆ ಹರಿಹರ ಒಬ್ಬೊಬ್ಬ ಶಿವಶರಣ ಕಥೆಯನ್ನು ಒಂದೊಂದು ರಗಳೆಯಲ್ಲಿ ಹೇಳಿ ಪ್ರತ್ಯೇಕ ರಗಳೆಗಳನ್ನು ರಚಿಸಿದ್ದಾನೆ. ಆದರೆ ಪಾಲ್ಕುರಿಕೆ ಸೋಮನಾಥನು ಬಸವಣ್ಣನನ್ನು ಕಥಾನಾಯಕನನ್ನಾಗಿ ಮಾಡಿಕೊಂಡು

ಯಕಲಂಕಲಿಂಗ ರಹಸ್ಯ ಸಿದ್ಧಾಂತ
ಸಕಲವೇದ ಪುರಾಣ ಸಮ್ಮತಂಬೈನ
ಯಾತತಸಕಲ ಪುರಾತನ ಭಕ್ತ
ಗೀತಾರ್ಥ ಸಮಿತಿಯೇ ಮಾತೃಕ ಗಾಂಗಂ
ಬೂರಿತಂಬೈ ಯೊಪ್ಪು ಪೂಸಲಲೋನ
ದಾರಂಬು ಕ್ರಿಯಂ ಬುರಾತನ ಭಕ್ತಿವಿತತಿ
ಚರಿತಲಲೋಪಲ ಸಂಧಿಲ್ಲ ಬಸವ
ಚರಿತಮೇ ವರ್ಣಿಂತು ಸತ್ಕೃತಿಯನಂಗ

(ಗೂ.ವೆಂ.ಸು.(ಸಂ),ಬ.ಪು.ಪ್ರ.ಆ.ಸಾ.೧೭೭-೧೮೪)

(ಅಕಳಂಗ ರಹಸ್ಯ ಸಿದ್ಧಾಂತ, ಸಕಲ ವೇದ ಪುರಾಣಕ್ಕೆ ಒಪ್ಪಿತವಾದ ಎಲ್ಲಾ ಸಕಲ ಪುರಾತನ ಭಕ್ತರ ಗೀತಾರ್ಥ ಸಮಿತಿಯೇ ಮಾತೃಕೆಯೆಂದು ಪೂರಕವಾಗಿ ಒಪ್ಪುವ ಮಣಿಗಳಲ್ಲಿರುವ ದಾರದಂತೆಯೇ ಪುರಾತನ ಭಕ್ತರ ಚರಿತೆಗಳಲ್ಲಿ ಬಸವನ ಚರಿತ್ರೆಯನ್ನು ಈ ಸತ್ಕೃತಿಯಲ್ಲಿ ಸೇರಿಸಿ ವರ್ಣಿಸುವೆನು)

ಹೀಗೆ ದಾರಕ್ಕೆ ಮಣಿಗಳನ್ನು ಸೇರಿಸಿ ಪೋಣಿಸುವಂತೆ ಭಕ್ತರ ಕಥೆಗಳನ್ನು ಪೋಣಿಸಿ ಭಕ್ತಿ ಪುರಾಣವಾಗಿ ರಚನೆ ಮಾಡಿದ್ದಾನೆ. ಕಥೆಯನ್ನು ಹೇಳುವಾಗ ಅದನ್ನು ಕೇಳುವ ಒಬ್ಬ ಶ್ರೋತೃವಿರಬೇಕು. ಹಾಗಾಗಿ ಇಲ್ಲಿ ತನ್ನ ಆಪ್ತನಾದ ಗೊಬ್ಬೂರು ವಿಭುವಾದ ಸಂಗನಾಮಾತ್ಯನಿಗೆ ಹೇಳಿದಂತೆ ಹೇಳುವ ಇವನ ಕಥನ ತಂತ್ರ ವಿಶಿಷ್ಟವಾದುದು. ಭೀಮಕವಿಯು ಈ ಒಂದು ವಿಚಾರದಲ್ಲಿ ಭಿನ್ನವಾಗಿದ್ದಾನೆ. ಅವನು ಯಾವುದೇ ಶ್ರೋತೃವಿಗೆ ಕಥೆಯನ್ನು ಹೇಳದೆ ನೇರವಾಗಿ ಕಥೆಯನ್ನು ಹೇಳುತ್ತಾನೆ. ಪ್ರತಿ ಆರಂಭದಲ್ಲಿ ಆ ಸಂಧಿಯ ಕಥೆಯ ವಸ್ತುವನ್ನು ಒಂದು ಶ್ಲೋಕ ರೂಪದ ಮೂರು ನಾಲ್ಕು ಸಾಲುಗಳಲ್ಲಿ ಹೇಳುತ್ತಾನೆ. ಇದು ಭೀಮಕವಿಯ ವಿಶೇಷತೆ. ಉಳಿದಂತೆ ತಂತ್ರ, ಭಾಷೆ, ಶೈಲಿ ಎಲ್ಲವುಗಳಲ್ಲಿಯೂ ಸೋಮನಾಥನ ಜಾಡನ್ನು ಹಿಡಿದು ತನ್ನ ಪುರಾಣವನ್ನು ರಚನೆ ಮಾಡಿದ್ದಾನೆ. ಸೋಮನಾಥನಂತೆ ವಸ್ತುಕವನ್ನು ತಿರಸ್ಕರಿಸಿ ವರ್ಣಕದಲ್ಲಿ ಕಾವ್ಯವನ್ನು ರಚಿಸುತ್ತಿರುವುದಾಗಿ ಹೇಳಿ ತಾನೂ ಕೂಡ ದಾರದಲ್ಲಿ ಮಣಿಗಳನ್ನು ಪೋಣಿಸಿದಂತೆಯೇ

ಬಸವಣ್ಣ ಮತ್ತು ಇತರೆ ಶರಣರ ಚರಿತ್ರೆಯನ್ನು ಹೇಳುವೆನು ಎಂದು ಕಥಾರಂಭದಲ್ಲಿ ಹೇಳುತ್ತಾನೆ. ಹೀಗೆ ಒಟ್ಟಾರೆಯಾಗಿ ಹನ್ನೆರಡನೆಯ ಶತಮಾನದ ಶರಣರ ಭವ್ಯ ಪರಂಪರೆಯ ಚರಿತ್ರೆಯನ್ನು ರಚಿಸಲು ಹೊಸ ಕಥಾತಂತ್ರಗಳನ್ನು ಹೆಣೆದು ಆ ಮೂಲಕ ತೆಲುಗು ಮತ್ತು ಕನ್ನಡ ಸಾಹಿತ್ಯದಲ್ಲಿ ಹೊಸ ಪ್ರಯೋಗದ ಕಾರಣೀಕರ್ತರಾಗಿ ಸೋಮನಾಥ ಮತ್ತು ಭೀಮಕವಿಯರು ಅಗ್ರಗಣ್ಯರಾಗಿದ್ದಾರೆ.

'ಬಸವಪುರಾಣ'ಗಳಲ್ಲಿ ಶರಣರ ಕಥೆಗಳ ನಿರೂಪಣೆ ಮುಖ್ಯವಾಗಿ ನಾಲ್ಕು ಬಗೆಗಳಲ್ಲಿ ಚಿತ್ರಣಗೊಂಡಿರುವುದನ್ನು ಗಮನಿಸಬಹುದು.

೧. ಸಾದೃಶ್ಯಪರ ಕಥೆಗಳು

೨. ದೃಷ್ಟಾಂತ ಕಥೆಗಳು

೩. ಪವಾಡ ಕಥೆಗಳು

೪. ತತ್ವಪ್ರಧಾನವಾದ ಕಥೆಗಳು

ಈ ಮೇಲಿನ ನಾಲ್ಕು ವಿಧದಲ್ಲಿ ಮೂಲ ಕಥೆಯು ಜೊತೆಗೆ ಇವು ಹೆಣೆದುಕೊಂಡು ನಿರೂಪಿತವಾಗಿವೆ.

ಸಾದೃಶ್ಯಪರ ಕಥೆಗಳು ಮೂಲ ಕಥೆಯಲ್ಲಿನ ಕಥಾನಾಯಕ ಅಥವಾ ಕಥೆಯಲ್ಲಿ ಬರುವ ಒಂದು ಘಟನೆಯನ್ನು ವಿವರಿಸುವಾಗ ಅದಕ್ಕೆ ಸದೃಶ್ಯವಾದ ಬೇರೆ ಕಥೆಗಳನ್ನು ಹೇಳುವುದೇ ಆಗಿದೆ. ಇಂತಹ ಸಾದೃಶ್ಯಪರವಾದ ಕಥೆಗಳು 'ಬಸವಪುರಾಣ'ದಲ್ಲಿ ಸಾಕಷ್ಟು ಕಡೆಗಳಲ್ಲಿ ಬರುತ್ತವೆ. ಕಥಾರಾಂಭದಲ್ಲಿ ನಂದಿಯ ಜನ್ಮವೃತ್ತಾಂತವನ್ನು ಪಾರ್ವತಿಗೆ ತಿಳಿಸುವಾಗ ನಂದಿಯ ತಂದೆ ಶಿಲಾದಮುನಿಯ ತಪಸ್ಸು, ಆಗ ದೇವಲೋಕದಲ್ಲಾದ ತಲ್ಲಣಗಳು, ನಂದಿಯ ಜನನದ ಕಥೆಗಳನ್ನು ಹೇಳುವುದು. ಹಾಗೆಯೇ ಬಸವಣ್ಣ ಮುಗ್ಧಸಂಗಯ್ಯನ ಮುಗ್ಧತ್ವವನ್ನು ನೋಡಿದ ಬಳಿಕ ಚೆನ್ನಬಸವನಿಗೆ ಹಿಂದೆ ಈ ರೀತಿ ಮುಗ್ಧತ್ವದಿಂದ ಬದುಕಿದ ಪುರಾತನರ ಕಥೆಗಳನ್ನು ಹೇಳುತ್ತಾ ರುದ್ರಪಶುಪತಿ, ನಕ್ಕೈನೈನಾರು, ಕೋಳೂರು ಕೊಡಗೂಸು, ಬೆಜ್ಜಮಹಾದೇವಿ, ದೀಪದ ಕಲಿಯಾರ, ನಾಟ್ಯಮಿತ್ತಂಡಿ, ಬೇಡರ ಕಣ್ಣಪ್ಪ ಮುಂತಾದವರ ಸಾದೃಶ್ಯಪರ ಕಥೆಗಳನ್ನು ವಿವರಿಸುತ್ತಾನೆ.

ದೃಷ್ಟಾಂತ ಕಥೆಗಳೆಂದರೆ ಒಬ್ಬ ವ್ಯಕ್ತಿ ಹೇಳುವ ಕಥೆಯು ಪರಿಣಾಮಕಾರಿಯಾಗಿ ಕೇಳುಗನ ಮನಸ್ಸಿಗೆ ನಾಟುವಂತೆ ಹೇಳುವ ಕಥೆಗಳಾಗಿವೆ. ಅಂದರೆ ಒಂದು ವಿಷಯವನ್ನು ಮನದಟ್ಟು ಮಾಡುವಾಗ ಅದಕ್ಕೆ ಸಂಬಂಧಿಸಿದ ಬೇರೆ ವಿಷಯಗಳನ್ನು ಹೇಳಿ, ತಾನು ಹೇಳುವ ವಿಷಯವನ್ನು ಪರಿಣಾಮಕಾರಿಯಾಗಿಸುವ ಒಂದು ತಂತ್ರಗಾರಿಕೆ. ಇಂತಹ ಕಥೆಗಳು ಈ ಪುರಾಣಗಳಲ್ಲಿ ಸಾಕಷ್ಟು ಕಡೆಗಳಲ್ಲಿ ನಿರೂಪಿತಗೊಂಡಿವೆ. ಪ್ರಧಾನವಾಗಿ ಕನ್ನಡ ಬಸವಪುರಾಣದಲ್ಲಿ ಗುರು ಭಕ್ತಾಂಡಾರಿಯ ಕಥೆಯಲ್ಲಿ ಪ್ರೌಢವತಿ ತನ್ನ ವೇಶ್ಯಾಸಂಗವನ್ನು ಬಯಸಿ ಬಂದವನಿಗೆ ಹೇಳುವ ಬುದ್ಧಿಮಾತುಗಳು ಮನಸ್ಸಿಗೆ ನಾಟದಿದ್ದಾಗ, ವೇಶ್ಯಾಸಂಗದಿಂದ ಹಾಳಾಗಿ ಬುದ್ಧಿಕಲಿತ ಕೆಲವು ಶರಣರ ಕಥೆಗಳನ್ನು

ದೃಷ್ಟಾಂತ ರೂಪವಾಗಿ ಹೇಳುತ್ತಾಳೆ. ಶ್ವೇತನ ಕಥೆ, ಮಲುಹಣ-ಮಲುಹಣಿಯರ ಕಥೆ, ಓಹಿಲಯ್ಯರ ಕಥೆ, ಉದ್ಭಟ ದೇವನ ಕಥೆ ಮುಂತಾದ ಶರಣರ ಕಥೆಗಳನ್ನು ಹೇಳಿ ಗುರುಭಕ್ತಂಡಾರಿಯ ಮನಸ್ಸನ್ನು ಬದಲಾಯಿಸುತ್ತಾಳೆ. ಹಾಗೆಯೇ ಮಡಿವಾಳ ಮಾಚಿದೇವನು ಶಿವದ್ರೋಹಗೈದವರನ್ನು ಕೊಲ್ಲುವೆನೆಂಬ ತನ್ನ ನೇಮವನ್ನು ಪಾಲಿಸುವಾಗ ಮಡಿಬಟ್ಟೆಗಳನ್ನು ಮುಟ್ಟಿ ಮೈಲಿಗೆ ಮಾಡಿದವನೊಬ್ಬನನ್ನು ಕೊಂದು ಹಾಕುತ್ತಾನೆ. ಆಗ ಬಿಜ್ಜಳ ಬಸವಣ್ಣನನ್ನು ಕರೆಸಿ ಮಾಚಯ್ಯನ ಕೃತ್ಯವನ್ನು ಹೇಳಿದಾಗ ಬಸವಣ್ಣ ಬಿಜ್ಜಳನಿಗೆ ಇರಿಭಕ್ತ, ಬಾಹೂರ ಬೊಮ್ಮಯ್ಯ ಮುಂತಾದವರ ಕಥೆಗಳನ್ನು ಹೇಳುತ್ತಾನೆ.

ಪವಾಡ ಶೈಲಿಯ ಕಥೆಗಳು 'ಬಸವಪುರಾಣ'ದಲ್ಲಿ ಸಾಕಷ್ಟು ನಿರೂಪಿತಗೊಂಡಿವೆ. ವೀರಶೈವ ಕಾವ್ಯ, ಪುರಾಣಗಳಲ್ಲಿ ಈ ರೀತಿಯ ಪವಾಡ ಕಥೆಗಳು ಕಾವ್ಯದಿಂದ ಕಾವ್ಯಕ್ಕೆ ಹೆಚ್ಚಾಗುತ್ತಾ ಪವಾಡ ಕಾವ್ಯಗಳೇ ಆಗಿ ರಚನೆಗೊಂಡಿರುವುದನ್ನು ಕಾಣಬಹುದು. ವೀರಶೈವಧರ್ಮ ಮತ್ತು ಮಹಿಮೆಯ ಮಹೋನ್ನತಿಯನ್ನು ಜಗತ್ತಿಗೆ ಸಾರುವ ಉದ್ದೇಶದಿಂದ ಕವಿಗಳು ಇಲ್ಲಿನ ಶರಣರ ಮೂಲಕ ಅನೇಕ ಪವಾಡ ಮಹಿಮೆಗಳನ್ನು ಮಾಡಿಸುತ್ತಾರೆ. ಇಂತಹ ಪವಾಡಗಳ ಸೃಷ್ಟಿಯ ಮೂಲಕ ಆ ವ್ಯಕ್ತಿ ಅತ್ಯಂತ ಮಹಿಮಾನ್ವಿತನಾಗಿ ಲೋಕ ಪೂಜಿತನಾಗುತ್ತಾನೆ. ಇಲ್ಲಿ ಧರ್ಮದ ಪ್ರತಿಪಾದನೆಯೇ ಮುಖ್ಯ ಅಂಶವಾಗಿರುತ್ತದೆ. ಬಸವಣ್ಣ ಮಾಡುವ ಪವಾಡಗಳು ಬದನೆಕಾಯಿಗಳು ಲಿಂಗಗಳಾಗುವುದು, ಜೋಳವನ್ನು ಮುತ್ತುಗಳನ್ನಾಗಿ ಮಾಡುವುದು, ಗೊಲ್ಲತಿಯ ಮೊಸರಿನ ಗಡಿಗೆಯನ್ನು ಆಗಸದಲ್ಲಿ ನಿಲ್ಲಿಸಿದುದು, ಶಿವನಾಗಮಯ್ಯನ ಕಾರಾಂಗುಲಿನಿಂದ ಹಾಲನ್ನು ಕರೆದುದು, ಭಂಡಾರದ ಹಣವನ್ನು ನೂರುಪಟ್ಟು ಹೆಚ್ಚು ಮಾಡಿದುದು, ವಿಷವನ್ನು ಕುಡಿದು ಜೀವಂತವಾಗಿರುವುದು ಇನ್ನು ಮುಂತಾದದವು. ಹಾಗೆಯೇ ಇಲ್ಲಿನ ಅನೇಕ ಶರಣರು ಇಂತಹ ಮಹಿಮೆಗಳನ್ನು ಮಾಡುವವರಿದ್ದಾರೆ. ಹಾವಿನಹಾಳ ಕಲ್ಲಯ್ಯ, ಬಬ್ಬಿ ಬಾಚಯ್ಯ, ಮಾದರ ದೂಡಯ್ಯ, ಕಕ್ಕಯ್ಯ, ಕೆಂಬಾವಿ ಬೊಗಣ್ಣ, ವರದಾನಿ ಗುಡ್ಡವ್ವೆ ಮುಂತಾದವರು ಅನೇಕ ಮಹಿಮೆಗಳನ್ನು ತೋರಿರುವ ಚಿತ್ರಣಗಳು ಈ 'ಬಸವಪುರಾಣ' ಕಾವ್ಯಗಳಲ್ಲಿ ನಿರೂಪಿತಗೊಂಡಿವೆ.

ತತ್ವಪ್ರಧಾನ ಕಥೆಗಳು ಇಲ್ಲಿನ ಮುಖ್ಯ ಕಥೆಗಳಾಗಿವೆ. 'ಬಸವಪುರಾಣ'ವೇ ಒಂದು ತತ್ವಪ್ರಧಾನ ಪುರಾಣ ಕಾವ್ಯ. ಇಲ್ಲಿ ವೀರಶೈವ ತತ್ವ, ಆಚರಣೆ, ಭಕ್ತಿಯ ವಿವಿಧ ರೂಪಗಳ ವಿಶ್ಲೇಷಣೆಗಳು ಕಂಡುಬರುತ್ತವೆ. ಇವೆಲ್ಲವೂ ತತ್ವ ನಿರೂಪಣೆಯ ಅಂಶಗಳಾಗಿವೆ. ಬಸವಣ್ಣನಾದಿಯಾಗಿ ಇಲ್ಲಿರುವ ಶರಣರೆಲ್ಲರೂ ತಮ್ಮ ಜೀವನದಲ್ಲಿ ಯಾರಿಗೂ ಏನನ್ನೂ ಕೇಡು ಬಯಸಿದವರಲ್ಲ. ನಿತ್ಯ ಪ್ರಸಾದ ಜಂಗಮಾರ್ಚನೆಗಳಲ್ಲಿ ತೊಡಗಿಸಿಕೊಂಡು ಬೇಡಿಬಂದವರಿಗೆ ಇಲ್ಲೆನ್ನದೆ ನೀಡುವ ಮಹಾ ಉದಾರಿಗಳು. ಸಾಮಾಜಿಕ ಅಸಮಾನತೆಯ ವಿರುದ್ಧ ಹೋರಾಡಿದ ಮಹಿಮರು. ಹಾಗಾಗಿ ಇಲ್ಲಿನ ಎಲ್ಲಾ ಶರಣರ ಜೀವನವು ಒಂದೊಂದು ತತ್ವವನ್ನು ಪ್ರತಿಪಾದಿಸುತ್ತವೆ. ಆ ಮೂಲಕ ಸಾಮಾಜಿಕ ಸಮಾನತೆಯನ್ನು ಬಯಸುವ ಗುಣಗಳನ್ನು ಹೊಂದಿರುವಂತಹ ವ್ಯಕ್ತಿಗಳಾಗಿದ್ದಾರೆ.

ಈ ರೀತಿಯಾಗಿ ವಿವಿಧ ಮನೋಭಾವವುಳ್ಳ ಶರಣರ ಕಥೆಗಳನ್ನು ಒಟ್ಟುಗೂಡಿಸಿ ಒಂದು ಸಮಗ್ರ ಚರಿತ್ರೆಯನ್ನು ಕಟ್ಟಿಕೊಟ್ಟಿರುವ ಸೋಮನಾಥ ಮತ್ತು ಭೀಮಕವಿಯರ ಜಾಣ್ಮೆ ನಿಜಕ್ಕೂ ಪ್ರಶಂಶನೀಯವಾದುದು. ತಾವು ಆರಿಸಿಕೊಂಡ ದೇಸಿಭಾಷೆಗೆ ತಕ್ಕಂತೆ ಕಥಾ ನಿರೂಪಣೆಯ ಕ್ರಮಗಳು ಪಂಡಿತರನ್ನು ಆಕರ್ಷಿಸುತ್ತವೆ. ಹಾಗಾಗಿಯೇ ಇಂದು 'ಬಸವಪುರಾಣ'ಗಳು ಮಠಗಳಲ್ಲಿ, ಮಂದಿರಗಳಲ್ಲಿ, ಪಂಡಿತರಲ್ಲಿ ಹೆಚ್ಚು ಪಠಣವಾಗುತ್ತಿದೆ. ಈ ರೀತಿಯ ವಾಚನಕ್ಕೆ ಇಲ್ಲಿನ ಕಥೆಗಳ ನಿರೂಪಣೆ, ದೇಸಿಯ ಹಾಡುಗಾರಿಕೆಯ ಕಲೆಯನ್ನು ಅಡಕ ಮಾಡಿರುವುದೇ ಮುಖ್ಯ ಕಾರಣವಾಗಿದೆ. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ 'ಬಸವಪುರಾಣ'ಗಳ ಕಾವ್ಯ ಸೌಂದರ್ಯವು ನೂರುಪಟ್ಟು ಮಿಗಿಲಾಗಿ ಪ್ರಸಿದ್ಧಿಯನ್ನು ಪಡೆದುಕೊಂಡಿವೆ.

# ಅಧ್ಯಾಯ – ೭

# ಕನ್ನಡ 'ಬಸವಪುರಾಣ'ದ ಭಾಷಾಂತರ ಸ್ವರೂಪ

೭.೧. ನೇರ ಅನುವಾದ
೭.೨. ಸಂಕ್ಷಿಪ್ತ ಅನುವಾದ
೭.೩. ಭಾವಾನುವಾದ
೭.೪. ವಿಸ್ತಾರ ಅನುವಾದ
೭.೫. ವ್ಯತ್ಯಸ್ತ ಅನುವಾದ
೭.೬. ಪದಸಮುಚ್ಚಯಗಳು
೭.೭. ಸಂಸ್ಕೃತೋಕ್ತಿಗಳು
೭.೮. ನುಡಿಗಟ್ಟುಗಳ ಅನುವಾದ
೭.೯. ಅಲಂಕಾರಗಳ ಅನುವಾದ

## ಅಧ್ಯಾಯ – ಏಳು

# ಕನ್ನಡ 'ಬಸವಪುರಾಣ'ದ ಭಾಷಾಂತರ ಸ್ವರೂಪ

ಭಾಷಾಂತರ ಅಥವಾ ಅನುವಾದವು ಒಂದು ವಿಶಿಷ್ಟ ಕಲೆ. ಭಾಷಾಂತರದ ಪ್ರಯೋಜನಗಳು ಆಧುನಿಕ ಜಗತ್ತಿನಲ್ಲಿ ಬಹುಮುಖವೂ ವ್ಯಾಪಕವೂ ಆಗಿವೆ. ಭಾಷಾಂತರದಿಂದ ಭಾಷೆ ಭಾಷೆಗಳ ನಡುವೆ ಬಾಂಧವ್ಯ, ಭಾವೈಕ್ಯವೇರ್ಪಟ್ಟು ಭಾಷೆಗಳ ಸಂಬಂಧವನ್ನು ಸಮಾಜೋ ಸಂಸ್ಕೃತಿಕವಾಗಿ ಗಟ್ಟಿಗೊಳಿಸುತ್ತದೆ. ಪರಸ್ಪರ ಕೊಡುಕೊಳುವಿಕೆಯಿಂದ ರಾಷ್ಟ್ರೀಯ, ಅಂತಾರಾಷ್ಟ್ರೀಯ ಸಂಬಂಧಗಳು ಬೆಳೆಯುತ್ತವೆ. ಹಲವು ಭಾಷೆ, ಸಂಸ್ಕೃತಿಗಳ ಸಂಘಟನೆಗೆ ಭಾಷಾಂತರ ಅತೀ ಮುಖ್ಯ ಮಾಧ್ಯಮವಾಗಿದೆ. ಭಿನ್ನ ಭಿನ್ನ ಸಂಸ್ಕೃತಿ, ನಾಗರಿಕತೆಗಳನ್ನು ಒಳಗೊಂಡ ಆಧುನಿಕ ಪ್ರಪಂಚದಲ್ಲಿ ಪರಸ್ಪರರ ವಿನಿಮಯ ಪ್ರಕ್ರಿಯೆಗಳು ವಿಶ್ವಬಾಂಧವ್ಯವನ್ನು ಸ್ಥಾಪಿಸುತ್ತವೆ. ಹೀಗೆ ವಿಶ್ವಬಾಂಧವ್ಯ ಬೆಳೆಯಬೇಕಾದರೆ ಸಾಹಿತ್ಯ, ವಿಜ್ಞಾನ, ತಂತ್ರಜ್ಞಾನಕ್ಕೆ ಸಂಬಂಧಿಸಿದ ಹಲವಾರು ವಿಷಯಗಳು ಪ್ರಪಂಚದ ಎಲ್ಲಾ ಭಾಷೆಗಳಲ್ಲಿಯೂ ಜನಸಾಮಾನ್ಯರಿಗೆ ತಿಳಿಯುವಂತೆ ಅನುವಾದವಾಗಬೇಕು. ಹೀಗೆ ಅನುವಾದಗೊಂಡ ಮಾದರಿಗಳನ್ನು ಅಭ್ಯಾಸ ಮಾಡಿಕೊಂಡು ಮೂಲ ಸಾಹಿತ್ಯ, ವಿಜ್ಞಾನ, ತಂತ್ರಜ್ಞಾನಗಳ ಸ್ಪಷ್ಟ ಮಾಹಿತಿಯನ್ನು ಪಡೆಯುವುದರ ಮೂಲಕ ನಮ್ಮಲ್ಲಿಯೂ ಅವುಗಳ ಬೆಳವಣಿಗೆಯ ವಾತಾವರಣವನ್ನು ನಿರ್ಮಾಣ ಮಾಡಬಹುದು.

ಕನ್ನಡ ಸಾಹಿತ್ಯದಲ್ಲಿ ಈ ರೀತಿಯ ಪ್ರಯತ್ನ ಸಾಹಿತ್ಯದ ಆರಂಭದಿಂದಲೂ ನಡೆದುಕೊಂಡು ಬಂದಿರುವುದನ್ನು ಗಮನಿಸಬಹುದಾಗಿದೆ.. ಯಾವುದೇ ಭಾಷೆ ಮತ್ತು ಸಾಹಿತ್ಯಗಳು ತನಗಿಂತ ಉತ್ಕೃಷ್ಟವಾಗಿ ಬೆಳೆದ ಭಾಷೆ ಸಾಹಿತ್ಯಗಳಿಂದ ಅನೇಕ ಪ್ರೇರಣೆ ಪ್ರಭಾವಗಳನ್ನು ಪಡೆದುಕೊಂಡಿರುತ್ತದೆ. ಈ ರೀತಿಯ ಪ್ರೇರಣೆಗಳಿಂದ ಭಾಷೆ ಮತ್ತು ಸಾಹಿತ್ಯ ಸಮೃದ್ಧವಾಗಿ ಬೆಳೆಯುತ್ತದೆ. ಹಾಗಾಗಿ ಒಂದು ಸಾಹಿತ್ಯ ವಿಶ್ವಸಾಹಿತ್ಯವಾಗಿ ಬೆಳೆಯುವಲ್ಲಿ ಭಾಷಾಂತರ ಮುಖ್ಯ ಸಾಧನವಾಗಿರುತ್ತದೆ.

ಸೃಜನಶೀಲ ಸಾಹಿತ್ಯದ ಜೊತೆಗೆ ಭಾಷಾಂತರ ಸಾಹಿತ್ಯದಿಂದಲೂ ಸಾಹಿತ್ಯವು ಶ್ರೀಮಂತವಾಗುತ್ತದೆ. ಕನ್ನಡ ಸಾಹಿತ್ಯವು ಪ್ರಾಕೃತ, ಸಂಸ್ಕೃತ ಮುಂತಾದ ಅನೇಕ ಭಾಷೆಗಳಿಂದ ವಸ್ತು, ವಿಷಯ, ತಂತ್ರ ಮುಂತಾದವುಗಳನ್ನು ಸಾಕಷ್ಟು ಎರವಲು ಪಡೆದುಕೊಂಡು ಬೆಳೆದ ಸಾಹಿತ್ಯವಾಗಿದೆ. ಅದರಲ್ಲೂ ಸಂಸ್ಕೃತ ಸಾಹಿತ್ಯವು ಕನ್ನಡಕ್ಕೆ ಸಾಕಷ್ಟು ಕೊಡುಗೆ ನೀಡಿರುವುದನ್ನು ವಿದ್ವಾಂಸರು ಗುರುತಿಸಿದ್ದಾರೆ. ಕನ್ನಡ ಸಾಹಿತ್ಯವು ಆರಂಭಗೊಂಡಿರುವುದೇ ಒಂದು ವಿಧದಲ್ಲಿ ಭಾಷಾಂತರ ಪ್ರಕ್ರಿಯೆಗಳಿಂದ ಎಂಬುದನ್ನು ಕೆಲ ವಿದ್ವಾಂಸರು ಹೇಳುತ್ತಾರೆ. ಕನ್ನಡದ ಮೊದಲ ಗ್ರಂಥ ಕವಿರಾಜಮಾರ್ಗ ದಂಡಿಯ ಕಾವ್ಯಾದರ್ಶದ ಭಾಷಾಂತರ ರೂಪ ಎನ್ನುತ್ತಾರೆ. ಆದರೆ ಮಾರ್ಗಕಾರ ದಂಡಿಯ ಕಾವ್ಯಾದರ್ಶವನ್ನು ಯಥಾವತ್ತಾಗಿ ಅನುವಾದಿಸಿಲ್ಲ. ಅಲ್ಲಿನ ವಸ್ತು ವಿಷಯಗಳನ್ನು ತೆಗೆದುಕೊಂಡು ಸ್ವಂತಿಕೆಯಿಂದ ಲಕ್ಷಣ ಗ್ರಂಥವನ್ನು ರಚನೆ ಮಾಡಿರುವುದು ಕಂಡುಬರುತ್ತದೆ. ಕೆಲವೆಡೆಗಳಲ್ಲಿ ಕಾವ್ಯಾದರ್ಶದ ಪದ್ಯಗಳನ್ನು ನೇರವಾಗಿ ಭಾಷಾಂತರ ಮಾಡಿರುವಂತಹ ಪದ್ಯಗಳನ್ನು ಮುಂದಿಟ್ಟುಕೊಂಡು ಕೆಲವರು ಇದು ದಂಡಿಯ ಅನುವಾದ ಕೃತಿ ಎಂದು ಹೇಳಿರುವುದುಂಟು. ಆದರೆ ಇಲ್ಲಿ ಮಾರ್ಗಕಾರನ ಸ್ವತಂತ್ರ ಸೃಷ್ಟಿಯೂ ಹೆಚ್ಚಾಗಿರುವುದನ್ನು ಗಮನಿಸಬಹುದು. ಹಾಗೆಯೇ ರಾಮಾಯಣ ಮಹಾಭಾರತದ ಕಥೆಗಳು ಕನ್ನಡಕ್ಕೆ ಭಾಷಾಂತರಗಳಾಗಿ ಬಂದರೂ ಕನ್ನಡ ಕವಿಗಳು ತಮ್ಮ ಪಾಂಡಿತ್ಯದಿಂದ ಸ್ವತಂತ್ರ ಕಾವ್ಯಗಳೆನ್ನುವಂತೆ ಚಿತ್ರಿಸಿದ್ದಾರೆ.

ಆಧುನಿಕ ಕನ್ನಡ ಸಾಹಿತ್ಯವು ಕೂಡ ಹಲವು ದೇಶ ಭಾಷೆಗಳ ಸಾಹಿತ್ಯದ ಭಾಷಾಂತರಗಳಿಂದ ತುಂಬಿಹೋಗಿದೆ. ಇದರಿಂದ ನಮ್ಮಲ್ಲಿಲ್ಲದ ಎಷ್ಟೋ ವಿಷಯಗಳು ಇಂತಹ ಭಾಷೆಗಳ ಅನುವಾದಗಳಿಂದ ತಿಳಿಯುವಂತಾಯಿತು. ಮುಖ್ಯವಾಗಿ ಪಾಶ್ಚಾತ್ಯ ಸಾಹಿತ್ಯಗಳ ಭಾಷಾಂತರಗಳು ಆಧುನಿಕ ಕನ್ನಡ ಸಾಹಿತ್ಯಕ್ಕೆ ಸಾಕಷ್ಟು ಕೊಡುಗೆಯನ್ನು ನೀಡಿವೆ. ಭಾಷೆ, ತಂತ್ರ, ವಸ್ತು, ಛಂದಸ್ಸು ಎಲ್ಲವುಗಳಲ್ಲಿಯೂ ಕನ್ನಡ ಸಾಹಿತ್ಯ ಹೊಸತನವನ್ನು ಸ್ವೀಕರಿಸಿ ಬೆಳೆದು ನಿಂತಿದೆ. ಈ ಸ್ವೀಕರಣವೇ ಕನ್ನಡ ಸಾಹಿತ್ಯದ ಬೆಳವಣಿಗೆಗೆ ಮುಖ್ಯ ಕಾರಣವಾಗಿದೆ.

ಕನ್ನಡ ಹಾಗೂ ತೆಲುಗು ಸಾಹಿತ್ಯಕ್ಕೆ ಸಂಬಂಧಿಸಿದಂತೆ ಭಾಷಾಂತರ ಪ್ರಕ್ರಿಯೆಗಳು ಬಹು ಹಿಂದಿನಿಂದಲೂ ನಡೆದುಕೊಂಡು ಬಂದಿವೆ. ಭಾಷೆ ಮತ್ತು ಸಾಹಿತ್ಯಗಳು ಹೆಚ್ಚು ಕಮ್ಮಿ ಒಂದೇ ಅವಧಿಯಲ್ಲಿ ರೂಪಗೊಂಡು ವಿಕಾಸವಾಗಿರುವುದನ್ನು ಗಮನಿಸಬಹುದು. ತೆಲುಗು ಮತ್ತು ಕನ್ನಡ ಸೋದರ ಭಾಷೆಗಳು ಪ್ರಾಚೀನ ಕಾಲದಲ್ಲಿ ಇವೆರಡೂ ಒಂದೇ ಪ್ರದೇಶವಾಗಿ ರೂಪುಗೊಂಡಿತ್ತು. ಕ್ರಮೇಣ ಭಾಷಾ ಗಡಿಗಳನ್ನು ರೂಪಿಸಿಕೊಂಡು ಪ್ರತ್ಯೇಕತೆಯನ್ನು ಗುರುತಿಸಲಾಗಿದೆ. ಲಿಪಿಯಲ್ಲಿ ಈ ಎರಡೂ ಭಾಷೆಗಳು ಹೆಚ್ಚು ಸಾಮ್ಯತೆಯನ್ನು ಹೊಂದಿದ್ದು, ಇವುಗಳ ಸಹೋದರತ್ವವನ್ನು ಮತ್ತಷ್ಟು ಹಿಗ್ಗಿಸಿದೆ. ಹೀಗೆ ಸಾಹಿತ್ಯ, ಸಂಸ್ಕೃತಿ ಆಚಾರ ವಿಚಾರಗಳಲ್ಲಿ ಸಾಮ್ಯತೆಯನ್ನು ಹೊಂದಿರುವ ಈ ಎರಡೂ ಭಾಷೆಯ ಪ್ರದೇಶಗಳು ದ್ರಾವಿಡ ಭಾಷೆಗಳಲ್ಲಿ ಹಿರಿಯ ಸ್ಥಾನವನ್ನು ಪಡೆದುಕೊಂಡಿವೆ.

ಈ ಎರಡೂ ಭಾಷೆಗಳ ಪರಸ್ಪರ ಭಾಷಾಂತರ ಪ್ರಕ್ರಿಯೆ ಪ್ರಾಚೀನ ಕಾಲದಿಂದ ಇಂದಿನವರೆಗೂ ನಿರಂತರವಾಗಿ ವಿನಿಮಯಗೊಳ್ಳುತ್ತಲೇ ಇದೆ. ಅನೇಕ ಕಾವ್ಯಗಳು, ಕಥೆ, ನಾಟಕಗಳು ತೆಲುಗುನಿಂದ ಕನ್ನಡಕ್ಕೆ ಕನ್ನಡದಿಂದ ತೆಲುಗಿಗೆ ಭಾಷಾಂತರಗೊಂಡು ಆಯಾ ಭಾಷೆಗಳ ಸಾಹಿತ್ಯವನ್ನು ಶ್ರೀಮಂತಗೊಳಿಸಿಕೊಂಡಿವೆ. ಈ ಹಿನ್ನಲೆಯಲ್ಲಿ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಸುಮಾರು ಹದಿನಾಲ್ಕನೇ ಶತಮಾನದಲ್ಲಿ ಕನ್ನಡಕ್ಕೆ ಭಾಷಾಂತರಗೊಂಡ ಭೀಮಕವಿಯ 'ಬಸವಪುರಾಣ'ದ ಭಾಷಾಂತರ ಸ್ವರೂಪವನ್ನು ಅರಿಯುವು ಇಲ್ಲಿನ ಮುಖ್ಯ ಉದ್ದೇಶ. ತೆಲುಗು ಭಾಷೆಯಿಂದ ಕನ್ನಡಕ್ಕೆ ಪ್ರಪ್ರಥಮವಾಗಿ ಭಾಷಾಂತರಗೊಂಡ ಮೊದಲ ಪುರಾಣಕಾವ್ಯ ಭೀಮಕವಿಯ 'ಬಸವ ಪುರಾಣ'ವಾಗಿದೆ.

ಹನ್ನೆರಡನೆಯ ಶತಮಾನದಲ್ಲಿ ಸಾಮಾಜಿಕ ಕ್ರಾಂತಿಯನ್ನು ಮಾಡಿ, ಸಮಾಜದ ಉನ್ನತಿಗೆ ಶ್ರಮಿಸಿದ ಶ್ರಮಿಕ ಜೀವಿಗಳು, ಕಾಯಕವೇ ಕೈಲಾಸವೆಂದು ನಂಬಿದವರು ಮತ್ತು ಅದನ್ನು ಚಾಚೂ ತಪ್ಪದೇ ಪಾಲಿಸಿ ಕಾರ್ಯ ರೂಪಕ್ಕೆ ತಂದು ಜನಮಾನಸದಲ್ಲಿ ಚಿರಕಾಲ ಉಳಿದಂತಹ ಮಹಿಮಾನ್ವಿತರಾದ ಬಸವಣ್ಣ ಮತ್ತು ಆತನ ಅನುಯಾಯಿಗಳ ಚರಿತ್ರೆಯನ್ನು ಪಾಲ್ಕುರಿಕೆ ಸೋಮನಾಥ ಸುಮಾರು ಹದಿಮೂರನೇ ಶತಮಾನದ ಆರಂಭದಲ್ಲಿ ರಚನೆ ಮಾಡುತ್ತಾನೆ. ತಾನು ರಚಿಸಿದ ಕೃತಿಗೆ ಬಸವಪುರಾಣ ಎಂದು ನಾಮಕರಣ ಮಾಡುತ್ತಾನೆ. ಶ್ರೀಶೈಲಕ್ಕೆ ಬಂದ ಯಾತ್ರಾತ್ರಿಗಳ ಮೂಲಕ ಕರ್ನಾಟಕದ ಬಸವಣ್ಣನ ಚರಿತ್ರೆಯನ್ನು ತಿಳಿದು ಅವನ ಘನ ಚರಿತ್ರೆಯನ್ನು ರಚಿಸಬೇಕೆಂಬ ಸಂಕಲ್ಪದೊಂದಿಗೆ ಅಲ್ಲಿ ನೆರದಿದ್ದ ಅನೇಕ ಭಕ್ತರ ಸಹಾಯದಿಂದ ಕಥೆಗಳನ್ನು ಕೇಳಿ ತನ್ನ ಪುರಾಣ ರಚನೆ ಮಾಡುತ್ತಾನೆ. ಸೋಮನಾಥನಿಗೆ ಶ್ರೋತೃಗಳು ಹೇಳಿದ ಕಥೆಗಳೇ ಅವನಿಗೆ ವಸ್ತು ವಿಷಯವಾದ್ದರಿಂದ ತಾನು ಕೇಳಿದ, ತಿಳಿದ ಸಂಗತಿಗಳನ್ನು ಮಾತ್ರ ಪುರಾಣದಲ್ಲಿ ಅಡಕಗೊಳಿಸಿದ್ದಾನೆ. ಕರ್ನಾಟಕದ ಒಬ್ಬ ಮಹಿಮಾ ಪುರುಷ ಬಸವಣ್ಣ ತೆಲುಗು ಕವಿಯೊಬ್ಬನ ಪುರಾಣಕ್ಕೆ ವಸ್ತುವಾಗಿ ಆ ನಾಡಿನಲ್ಲಿ ಅಜರಾಮರವಾಗುತ್ತಾನೆ. ದೇಶಭಾಷೆಗಳ ಗಡಿಗಳನ್ನು ಮೀರಿ ಖ್ಯಾತಿ ಗಳಿಸುತ್ತಾನೆ. ಇದೆಲ್ಲವೂ ಆಗಿರುವುದು ಸೋಮನಾಥನ 'ಬಸವಪುರಾಣ'ದ ರಚನೆಯಿಂದ ಎಂಬುದು ಗಮನಾರ್ಹ ಸಂಗತಿ.

ಸೋಮನಾಥನಿಗಿಂತ ಹಿಂದೆ ಕನ್ನಡದಲ್ಲಿ ಹರಿಹರ 'ಬಸವರಾಜದೇವರ ರಗಳೆ' ಎಂಬ ಕೃತಿಯನ್ನು ರಚಿಸಿದ್ದರೂ ಅದು ನಂತರದ ಕೆಲವು ಕವಿಗಳಿಗೆ ಪ್ರಧಾನ ಎನಿಸುವುದಿಲ್ಲ. ಆದರೆ ಸೋಮನಾಥ ರಚಿಸಿದ 'ಬಸವಪುರಾಣ'ವು ಸುಮಾರು ಭಾರತೀಯ ಭಾಷೆಗಳ ವೀರಶೈವ ಮತ್ತು ವೀರಶೈವರಲ್ಲದ ಕವಿಗಳಿಗೆ ಇಷ್ಟವಾಗಿ ಅದನ್ನೆ ಪ್ರಧಾನ ಪ್ರೇರಣೆಯಾಗಿಸಿಕೊಂಡು ಕಾವ್ಯ, ಪುರಾಣ, ಕಥೆ, ನಾಟಕಗಳನ್ನು ರಚಿಸಿದ್ದಾರೆ. ಬಹುಶಃ ಬಸವಣ್ಣನ ಮೇಲೆ ರಚಿತಗೊಂಡಿರುವ ಎಲ್ಲಾ ಭಾಷೆಗಳ ಕಥೆ, ಕಾವ್ಯಗಳು ಈ 'ಬಸವಪುರಾಣ'ದ ಛಾಯೆಯಲ್ಲಿಯೇ ರಚನೆಗೊಂಡಿವೆ ಎಂದರೆ ತಪ್ಪಾಗಲಾರದು. ಈ ಹಿನ್ನೆಯಲ್ಲಿ ತೆಲುಗು 'ಬಸವಪುರಾಣಮು'ದಿಂದ ಪ್ರಭಾವಗೊಂಡು

ಬಸವಣ್ಣನ ಚರಿತ್ರೆಯನ್ನು ರಚಿಸಬೇಕೆಂಬ ಮಹಾದಾಸೆಯನ್ನು ಇಟ್ಟುಕೊಂಡವರಲ್ಲಿ ಕನ್ನಡದ ಭೀಮಕವಿಯೂ ಒಬ್ಬ. ಬಸವಣ್ಣ ಮತ್ತು ಅವನ ಸಹಶರಣರ ಚರಿತ್ರಾಂಶಗಳು ತಿಳಿದು ಪ್ರಭಾವಿತನಾದ ಭೀಮಕವಿಗೆ ಕೃತಿ ರಚನೆ ಮಾಡುವುದು ಹೇಗೆ ಎಂಬ ಗೊಂದಲವುಂಟಾಗಿ ಪರಿತಪಿಸುತ್ತಿರುತ್ತಾನೆ. ಒಮ್ಮೆ ಇದೇ ಸಂಗತಿಯನ್ನು ಮನದಲ್ಲಿ ಚಿಂತಿಸುತ್ತಾ ಮಲಗಿರುವಾಗ ಕನಸಿನಲ್ಲಿ ಪಾಲ್ಕುರಿಕೆ ಸೋಮನಾಥ ಮತ್ತು ಅನಘದೇವಾರ್ಯನಾದ ತಂದೆ ಶಿವದೇವ ಕವಿಯು ಬಂದು ಹೀಗೆ ಹೇಳುತ್ತಾರೆ.

"ಆವುದಕ್ಕನುಮಾನಿಸದಿರೊಲಿ
ದಾವ ಶಬ್ದಾರ್ಥಮುಮನಾದಡೆ
ಭಾವಿಸಲು ನಿನಗಜೆಪಿ ನಿನ್ನಾತ್ಮದೊಳಗಲದಿರ್ದು
ನಾವು ರಚಿಸುವೆವೆಸವ ಬಸವ ಕ
ಥಾವಿಸರಮಂ ಬರೆದುಕೋಯೆಂ
ದೋವಿದವರಾಜ್ಞೆಯನೆ ಶಿರದೊಳು ಧರಿಸಿ ಮುದವೆತ್ತು

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೧.ಪ.೧೫)

ಯಾವುದೇ ರೀತಿಯಲ್ಲಿ ಚಿಂತಿಸದೆ ನಾನು ರಚಿಸಿರುವ ಬಸವನ ಕಥೆಯನ್ನು ಬರೆದುಕೋ ಎಂದು ಹೇಳಿದ ಪಾಲ್ಕುರಿಕೆ ಸೋಮನಾಥನ ಆಜ್ಞೆಯನ್ನು ಒಪ್ಪಿ ಬಸವಣ್ಣನ ಕಾವ್ಯವನ್ನು ರಚನೆಮಾಡಲು ಮುಂದಾಗುತ್ತಾನೆ. ಸೋಮನಾಥನ ಈ ಒಪ್ಪಿಗೆಯಿಂದ ತನ್ನ ಕೃತಿ ರಚನೆಗಾದ ಸಹಕಾರಿಯನ್ನು ನೆನೆಯುತ್ತಾ ಭೀಮಕವಿ ಹೀಗೆ ಹೇಳುತ್ತಾನೆ.

"ಅಸಮಲಿಂಗೈಕಾನುಭಾವ
ಪ್ರಸರಮತಿಕವಿಸೋಮನಾಥನು
ರಸವೊಸರೆ ಮುನ್ನುಸುರ್ದುದನೆ ಕನ್ನಡಿಸಿ ಪೇಳೆಂದು
ಎಸೆವ ಬಸವಪುರಾಣಮಂ ಪಸ
ರಿಸುವ ನಿರ್ಮಳಭೋಧಯಂ ಕರು
ಣಿಸಿದ ಕಾರಣವೆನಗೆ ಪಿರಿದಾಯಾಸವಿನಿತಿಲ್ಲ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೧.ಪ.೧೬)

ಸೋಮನಾಥನು ಈಗಾಗಲೇ ತಾನು ತೆಲುಗಿನಲ್ಲಿ ರಚಿಸಿರುವ 'ಬಸವಪುರಾಣ'ವನ್ನೇ 'ಕನ್ನಡಿಸಿ' ಹೇಳು ಎಂದಿದ್ದರಿಂದ ನಾನು ಯಾವುದೇ ಆಯಾಸವಿಲ್ಲದೆ ಸುಲಭವಾಗಿ 'ಬಸವಪುರಾಣ'ವನ್ನು ರಚಿಸಿದ್ದೇನೆ ಎಂದು ಭೀಮಕವಿ ಹೇಳುತ್ತಾನೆ. ಇಲ್ಲಿ 'ಕನ್ನಡಿಸಿ' ಎಂಬ ಪದ ತುಂಬಾ ಮುಖ್ಯ. ಕನ್ನಡಿಸು ಎಂಬುದು ಉದ್ದಿಷ್ಟ ಭಾಷೆಯಾದ ಕನ್ನಡದಲ್ಲಿ ಭಾಷಾಂತರಿಸು, ಅನುವಾದಿಸು ಎಂಬ ಅರ್ಥ ಬರುತ್ತದೆ. ಕವಿಯೇ ಈ ಮಾತನ್ನು ಹೇಳಿರುವುದರಿಂದ ಇದೊಂದು ಭಾಷಾಂತರಗೊಂಡ

ಕೃತಿ ಎಂಬುದು ಸ್ಪಷ್ಟವಾಗುತ್ತದೆ. ಈ ಹಿನ್ನಲೆಯಲ್ಲಿ ಮೂಲ ತೆಲುಗು ಭಾಷೆಯ ಕೃತಿಯನ್ನು ಕನ್ನಡೀಕರಿಸುವಾಗ ಭೀಮಕವಿಯು ಯಾವ ಸ್ವರೂಪದಲ್ಲಿ ಅದನ್ನು ಭಾಷಾಂತರ ಮಾಡಿದ್ದಾನೆ ಎಂಬುದನ್ನು ತಿಳಿಯುವುದು ಭಾಷಾಂತರ ಅಧ್ಯಯನದ ದೃಷ್ಟಿಯಿಂದ ಅತ್ಯಂತ ಮಹತ್ವವಾದುದು.

ಭೀಮಕವಿಯು ತೆಲುಗು 'ಬಸವಪುರಾಣಮು'ವಿನಿಂದ ಎಲ್ಲಿಯೂ ಬೇರೆಯಾಗಿಲ್ಲ(ಆರನೇ ಕಾಂಡವನ್ನು ಹೊರತುಪಡಿಸಿ) ಕಥೆ, ಪಾತ್ರ ರಚನೆ, ಸನ್ನಿವೇಶಗಳಲ್ಲಿ ಸೋಮನಾಥನನ್ನು ಚಾಚೂತಪ್ಪದೇ ಅನುಸರಿಸಿದ್ದಾನೆ. ಈ ಕಾರಣದಿಂದಲೆ ಕನ್ನಡ 'ಬಸವಪುರಾಣ'ವು ಮೂಲ ನಿಷ್ಠವಾದ ಅಪ್ಪಟ ಭಾಷಾಂತರ ಕಾವ್ಯವಾಗಿದೆ. ಮೂಲಕಥೆಯ ಸಂವಿಧಾನ, ಪಾತ್ರನಿರ್ಮಾಣ ದರ್ಶನಗಳಿಗೆ ಅಪಚಾರವಾಗದಂತೆ, ಲೋಪ ಬರದಂತೆ ಎಚ್ಚರಿಕೆಯಿಂದ ಅನುವಾದ ಕಾರ್ಯವನ್ನು ಮಾಡಿದ್ದಾನೆ ಭೀಮಕವಿ. ಇವನು ಪ್ರತಿಭಾವಂತನಾದ ಅತ್ಯುತ್ತಮ ಭಾಷಾಂತರಕಾರ ತನ್ನನ್ನು "ಉಭಯಕವಿತ್ವ ಸಮರ್ಥ"ನೆಂದು ಹೇಳಿಕೊಂಡಿರುವುದರಿಂದ ಕನ್ನಡ ಭಾಷೆಯಂತೆಯೆ ಚೆನ್ನಾಗಿ, ಸುಲಲಿತವಾಗಿ ತೆಲುಗು ಭಾಷೆಯನ್ನು ಅರಿತಿರಬೇಕು. ಆದ್ದರಿಂದ ಸಮರ್ಥವಾಗಿ ಭಾಷಾಂತರ ಕಾರ್ಯವನ್ನು ನಿರ್ವಹಿಸಿದ್ದಾನೆ. ಭೀಮಕವಿಯು ಮೂಲ ಕೃತಿಯನ್ನು ಹೆಜ್ಜೆ ಹೆಜ್ಜೆಗೂ ಅನುಸರಿಸಿದ್ದಾನೆ. ಆದರೂ ಪೂರ್ಣವಾಗಿ ಪದಶಃ ಭಾಷಾಂತರ ಅಥವಾ ಮಕ್ಕೀ ಕಾ ಮಕ್ಕೀ ಪರಿವರ್ತನೆಯಲ್ಲ. ಮೂಲದಲ್ಲಿರುವ ಸೌಂದರ್ಯ, ಸ್ವಾರಸ್ಯಾದಿ ಗುಣವಿಶೇಷಗಳನ್ನು ಭೀಮಕವಿ ತನ್ನ ಅನುವಾದದಲ್ಲಿ ಯಶಸ್ವಿಯಾಗಿ ತಂದಿದ್ದಾನೆ. ಜೊತೆಗೆ ಅಲ್ಲಲ್ಲಿ ಮೂಲದಲ್ಲಿನ ಕೆಲವಾರು ಭಾಗವನ್ನು ವಿಸ್ತರಿಸಿ ಪುಷ್ಟೀಕರಿಸಿ ಅದರ ಸೊಗಸನ್ನು ಹೆಚ್ಚಿಸಿದ್ದಾನೆ. ಮೂಲ ನೀರಸವಾಗಿದ್ದರೆ ಅದನ್ನು ಸರಸವಾಗಿಸಿ ಚಿತ್ರಿಸಿದ್ದಾನೆ. ಸ್ವತಂತ್ರವಾಗಿ ಎಷ್ಟೋ ವರ್ಣನೆಗಳ ಪದ್ಯಗಳನ್ನು ರಚಿಸಿ ಸ್ವಪ್ರತಿಭೆಯನ್ನು ತೋರ್ಪಡಿಸಿದ್ದಾನೆ. ಈ ಸ್ವಪ್ರತಿಭೆಯಿಂದ ಸೇರಿಸಿದ ಪದ್ಯಗಳಿಂದ ಮೂಲ ಕಥೆಗಾಗಲಿ, ಅದರ ಬಂಧಕ್ಕಾಗಲೀ ಯಾವುದೇ ರೀತಿಯ ಚ್ಯುತಿ ಬರದಂತೆ ಕಾಪಾಡಿದ್ದಾನೆ. ಇವನ ಇಂತಹ ಸ್ವಕಲ್ಪನೆಗಳೇನೇ ಇದ್ದರೂ ಮೂಲ ಕಾವ್ಯದ ಚೌಕಟ್ಟಿನೊಳಗೇ ವ್ಯಕ್ತವಾಗುವಂಥದು. ಮುಖ್ಯವಾದ ಬದಲಾವಣೆ ಎಂದರೆ ಭೀಮಕವಿ ಆರನೆಯ ಕಾಂಡವನ್ನು ಹೊಸದಾಗಿ ಸೇರಿಸಿರುವುದು. ಹೀಗೆ ಸೇರಿಸಿದ ಕಥೆಗಳಿಂದ ಮೂಲ ಕಥೆಯ ಸ್ವರೂಪಕ್ಕೆ ಯಾವುದೇ ತೊಂದರೆಯಾಗದಂತೆ ಎಚ್ಚರವಹಿಸಿದ್ದಾನೆ. ಭೀಮಕವಿಯು ಸೋಮನಾಥನನ್ನು ಆರಂಭದಿಂದಲೂ ಅನುಸರಿಸಿಕೊಂಡು ಬರುತ್ತಾನಾದರೂ ತೆಲುಗಿನ ಐದನೆಯ ಆಶ್ವಾಸವು ತೆಲುಗು ಜೊಮ್ಮಯ್ಯನ ಕಥೆಯೊಂದಿಗೆ ಮುಗಿಯುತ್ತದೆ. ಆದರೆ ಕನ್ನಡದಲ್ಲಿ ಐದನೆಯ ಕಾಂಡದ ಜೊಮ್ಮಯ್ಯನ ಕಥೆಯ ನಂತರ ಬಸವೇಶ್ವರನ ನಿದ್ರಾಮುದ್ರೆಯ ಪವಾಡದ ಕಥೆ, ಮಡಿವಾಳ ಮಾಚಿದೇವರು ಮತ್ತು ಕಿನ್ನರಿ ಬೊಮ್ಮಯ್ಯ ಹಾಗೂ ಬಸವೇಶ್ವರನ ಪ್ರಾಣವ ಪಡೆದ ಕಥೆಗಳನ್ನು ಹೊಸದಾಗಿ ಸೇರಿಸಿ ಐದನೆಯ ಆಶ್ವಾಸವನ್ನು ಮುಗಿಸುತ್ತಾನೆ. ಅನಂತರ ಆರನೆಯ ಆಶ್ವಾಸದ ಸಂಧಿ ೩೭ ರಿಂದ ೪೭ರವರೆಗಿನ ಎಲ್ಲಾ ಕಥೆಗಳನ್ನು ಹೊಸದಾಗಿ ಸೇರಿಸುತ್ತಾನೆ. ಈ ಬದಲಾವಣೆಯೊಂದೇ ಭೀಮಕವಿ

ಮಾಡಿಕೊಂಡಿರುವುದು. ಉಳಿದಂತೆ ಸೋಮನಾಥನ ಪುರಾಣವನ್ನು ಅನುಸರಿಸುರುವುದು ಕಂಡುಬರುತ್ತದೆ.

ಈ ಹಿನ್ನಲೆಯಲ್ಲಿ ಸೋಮನಾಥನ 'ಬಸವಪುರಾಣಮು' ಕನ್ನಡಕ್ಕೆ ಕನ್ನಡೀಕರಣಗೊಂಡ ಸ್ವರೂಪವನ್ನು ಮುಂದೆ ವಿವಿಧ ಅನುವಾದದ ಅಂಶಗಳ ಹಿನ್ನಲೆಯಲ್ಲಿ ಗುರುತಿಸಲು ಪ್ರಯತ್ನಿಸಲಾಗಿದೆ.

ಕನ್ನಡ 'ಬಸವಪುರಾಣ'ದ ಭಾಷಾಂತರ ಸ್ವರೂಪವನ್ನು ಮುಖ್ಯವಾಗಿ ಈ ಕೆಳಗಿನ ಪ್ರಮುಖ ಅಂಶಗಳ ಹಿನ್ನಲೆಯಲ್ಲಿ ವಿವೇಚಿಸಲಾಗಿದೆ.

೧. ನೇರ ಅನುವಾದ

೨. ವಿಸ್ತಾರಾನುವಾದ

೩. ಭಾವಾನುವಾದ

೪. ಸಂಕ್ಷಿಪ್ತ ಅನುವಾದ

೫. ವ್ಯತ್ಯಸ್ತ ಅನುವಾದ

೬. ಪದ ಸಮುಚ್ಚಯಗಳು

೭. ಸಂಸ್ಕೃತ ಪದಗಳ ಬಳಕೆ(ಅನುವಾದ)

೮. ನುಡಿಗಟ್ಟುಗಳ ಅನುವಾದ

೯. ಅಲಂಕಾರಗಳ ಅನುವಾದ

**೭.೧. ನೇರ ಅನುವಾದ**

ವರ್ಣನೆಯ ವಿಧಾನಗಳು ಬೇರೆಯಾಗಿದ್ದರೂ ಬಹುತೇಕ ಕನ್ನಡ 'ಬಸವಪುರಾಣ'ವು ನೇರ ಅನುವಾದ ಆಗಿರುವುದನ್ನು ಗಮನಿಸಬಹುದು. ಇದಕ್ಕೆ ಕಾರಣ ತಾನು ಮೂಲವನ್ನು ಕನ್ನಡೀಕರಿಸುತ್ತೇನೆಂದು ಹೇಳಿರುವುದು. ಜೊತೆಗೆ ಪಿರಿದಾಯಸವಿಲ್ಲದೆ ರಚಿಸಿರುವೆ ಎಂಬ ಮಾತು. ಭೀಮಕವಿಯು ಹೆಚ್ಚು ಯೋಚಿಸದೆ ಮೂಲದಲ್ಲಿರುವುದನ್ನು ಅನುವಾದಿಸಿರುವುದು ಕಂಡುಬರುತ್ತದೆ. ಹಾಗಾಗಿ ಮೂಲವನ್ನು ನೇರವಾಗಿ ಅನುವಾದ ಮಾಡಿರುವ ಕೆಲವು ಸಂದರ್ಭ ಸನ್ನಿವೇಶಗಳನ್ನು ಮುಂದೆ ನೀಡಲಾಗಿದೆ.

ಪುರಾಣದ ಆರಂಭದಲ್ಲಿ ಸೋಮನಾಥ ತಾನು ರಚಿಸುವ ಬಸವನ ಚರಿತ್ರೆಯ ರೂಪುರೇಶೆಯನ್ನು ಕುರಿತು ಹೇಳುವ ಮಾತುಗಳು ಹೀಗಿವೆ.

"ಅಲ್ಪಾಕ್ಷರಮುಲ ನನಲ್ಪಾರ್ಥ ರಚನ
ಕಲ್ಪಿಂಚುಟಯೇ ಕಾದೆ ಕವಿವಿವೇಕಂಬು

(ಗೂ.ವೆಂ.ಸು.(ಸಂ),ಬ.ಪು.,.ಪ್ರ.ಆ.೧೭೩-೧೭೪)

(ಅಲ್ಪಾಕ್ಷರಗಳಿಂದ ಅಲ್ಪಾರ್ಥ ರಚನೆಯನ್ನು ಕಲ್ಪಿಸುವುದಲ್ಲವೇ ಕವಿವಿವೇಕ)

ಎಂದು ಎರಡು ಪಾದಗಳಲ್ಲಿ ಹೇಳಿರುವುದನ್ನು ಭೀಮಕವಿಯು ಕೂಡ ಎರಡು ಸಾಲಿನಲ್ಲಿಯೇ ಹೇಳುತ್ತಾನೆ. "ಪರಿಮಿತಾಕ್ಷರತತಿಯೊಳಪರಿಮಿತಾರ್ಥಾರಚನೆಯಲಿ/ವಿರಚಿಸುವುದು ಕವಿಯ ಚತುರತೆ" ಎಂಬಲ್ಲಿ "ಅಲ್ಪ" ಎಂಬುದಕ್ಕೆ "ಪರಿಮಿತ" ಎಂದೂ "ಕವಿಯ ಚತುರತೆ" ಎಂಬ ಪದಕ್ಕೆ ಬದಲಾಗಿ "ಕವಿ ವಿವೇಕ" ಎಂಬ ಪದವನ್ನು ಅಳವಡಿಸಿದ್ದಾನೆ ಭೀಮಕವಿ. ಇಲ್ಲಿ 'ಕವಿವಿವೇಕ' ಎಂಬ ಪದಕ್ಕಿಂತಲೂ ಕವಿಯ ಚತುರತೆ ಎಂಬ ಪದ ಹೆಚ್ಚು ಪರಿಣಾಮಕಾರಿಯಾಗಿದೆ. ಹಾಗೂ ತನ್ನ ಪಾಂಡಿತ್ಯದ ಪ್ರೌಢಿಮೆಯನ್ನು ಆ ಪದ ಹೆಚ್ಚು ಸೂಕ್ತವಾಗಿ ತಿಳಿಸುತ್ತದೆ. ಮುಂದುವರೆದು ಸೋಮನಾಥ ಹೇಳುವುದು ತನ್ನ ಪುರಾಣವು

ಯಕಲಂಕಲಿಂಗ ರಹಸ್ಯ ಸಿದ್ಧಾಂತ
ಸಕಲವೇದ ಪುರಾಣ ಸಮ್ಮತಂಬೈನ
ಯಾತತಸಕಲ ಪುರಾತನ ಭಕ್ತ
ಗೀತಾರ್ಥ ಸಮಿತಿಯೇ ಮಾತೃಕ ಗಾಂಗಂ
ಬೂರಿತಂಬೈ ಯೊಪ್ಪು ಪೂಸಲಲೋನ
ದಾರಂಬು ಕ್ರಿಯಂ ಬುರಾತನ ಭಕ್ತಿವಿತತಿ
ಚರಿತಲಲೋಪಲ ಸಂಧಿಲ್ಲ ಬಸವ
ಚರಿತಮೇ ವರ್ಣಿಂತು ಸತ್ಕೃತಿಯನಂಗ

(ಗೂ.ವೆಂ.ಸು.(ಸಂ),ಬ.ಪು.ಪ್ರ.ಆ.ಸಾ.೧೭೭-೧೮೪)

(ಅಕಳಂಗ ರಹಸ್ಯ ಸಿದ್ಧಾಂತ, ಸಕಲ ವೇದ ಪುರಾಣಕ್ಕೆ ಒಪ್ಪಿತವಾದ ಎಲ್ಲಾ ಸಕಲ ಪುರಾತನ ಭಕ್ತರ ಗೀತಾರ್ಥ ಸಮಿತಿಯೇ ಮಾತೃಕೆಯೆಂದು ಪೂರಕವಾಗಿ ಒಪ್ಪುವ ಮಣಿಗಳಲ್ಲಿರುವ ದಾರದಂತೆಯೇ ಪುರಾತನ ಭಕ್ತರ ಚರಿತೆಗಳಲ್ಲಿ ಬಸವನ ಚರಿತ್ರೆಯನ್ನು ಈ ಸತ್ಕೃತಿಯಲ್ಲಿ ಸೇರಿಸಿ ವರ್ಣಿಸುವೆನು)

ಈ ಸಾಲುಗಳನ್ನು ಭೀಮಕವಿಯು ನೇರವಾಗಿ ಅನುವಾದಿಸುರುವುದು ಹೀಗೆ.

"ಆದಿಲಿಂಗರಹಸ್ಯಸಿದ್ಧಾಂ
ತಾದಿ ವೇದಪುರಾಣಸಮ್ಮತ
ವಾದ ಬಸವಪುರಾತನರ ಗೀತಾರ್ಥಮಾತೃಕದಿ
ಕೋದ ಮಣಿಗಣ ಸೂತ್ರದಂತಿರೆ
ಆದಿಗಣಚರಿತಂಗೊಳೊಳು ಸಂ
ವೇದಿಸಲು ಬಸವನ ಚರಿತೆಯಂ ಬಣ್ಣಿಸುವೆನೊಸೆದು"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೧.ಪ.೨೩)

ಬಸವಣ್ಣನನ್ನು ನೆನೆದರೆ ಪಾಪವು ನಾಶವಾಗುವುದು ಭಾಗ್ಯವು ಸಿದ್ಧಿಸುವುದು ಎಂದು ಮುಂತಾಗಿ ಹೇಳುವ ಸೋಮನಾಥನ(ಪಾ.ಸೋ.ಪ್ರ.ಆ.ಸಾ.೧೮೯-೨೧೦) ಭಾಗವನ್ನು ಭೀಮಕವಿಯು ಸೋಮನಾಥನ ದ್ವಿಪಾದಗಳನ್ನು ಷಟ್ಪದಿಗಳಾಗಿ ಪರಿವರ್ತಿಸಿ ಕನ್ನಡೀಕರಿಸಿದ್ದಾನೆ.(ಭೀ.ಸಂ.೧ ಪ.೨೫ರಿಂದ ೨೭)

ಪರಮೇಶ್ವರನು ಪಾರ್ವತೀದೇವಿಗೆ ಶಿಲಾದಮುನಿಯ ಉಗ್ರ ತಪಸ್ಸನ್ನು ಕುರಿತು ಹೇಳುವಾಗಿನ ಮಾತನ್ನು ಸೋಮನಾಥ ಹೇಳಿರುವುದು ಹೀಗೆ,

ಯಾದಿ ನನೇಕ ಯುಗಾಲನಾಂಡು
ನಾದಿರಿಕಮುನ ಶಿಲಾದುಂಡನಂಗಂ
ದಾಪಸ ಮುಖ್ಯುಂಡು ದಪ ಮೊನರಿಂಚೆ
ಶ್ರೀಪರ್ವತಂಬು ನೈರುತ್ಯಭಾಗಮುನಂ
ಗಂದ ಮೂಲಾದುಲು ಗಾಲಿಯು ನೀರು
ನಿಂದು ರಶ್ಮಿಲುನು ದಿನೇಶ್ವರಶ್ಮುಲುನು
ನಾಹಾರಮುಗಂ ದ್ರಿಕೋಟ್ಯಬ್ದಮುಲ್ ಸಲಿಪಿ

(ಗೂ.ವೆಂ.ಸು.(ಸಂ),ಬ.ಪು.ಪ್ರ.ಆ.ಸಾ.೩೨೭-೩೩೩)

(ವಿವಿಧ ಯುಗಗಳ ಆದಿಯಲ್ಲಿ ಪ್ರೀತಿಯಿಂದ ಶಿಲಾದ ತಾನೆಂಬ ಪಾಪ ಸಮುಖ್ಯನು ತಪವನಾಚರಿಸಿದ ಶ್ರೀ ಪರ್ವತದ ನೈಋತ್ಯ ಭಾಗದಲ್ಲಿ ಕಂದ ಮೂಲಾದಿಗಳನ್ನು ಗಾಳಿ, ನೀರು, ಸೂರ್ಯ ಕಿರಣಗಳನ್ನೇ ಆಹಾರವಾಗಿಸಿಕೊಂಡು ಮೂರು ಕೋಟಿ ವರ್ಷಗಳನ್ನು ಕಳೆದನು)

ಭೀಮಕವಿಯ ನೇರವಾದ ಅನುವಾದ ಹೀಗಿದೆ.

"ಆದಿ ವಿವಿಧ ಯುಗಂಗಳಲ್ಲಿ ಶಿ
ಲಾದನುಗ್ರತಪಸವನೊಡರ್ಚಿದ
ನಾದಿಯೆನಿಪ ಶ್ರೀಗಿರಿಯ ನೈರುತ್ಯಭಾಗದಲ್ಲಿ
ಆದರಣೆಯಿಂ ಕಂದಮೂಲಫ
ಲಾದಿಗಳನಿನಶಶಿಕಿರಣಪವ
ನೋದಕಾಹಾರಂಗಳಿಂ ವರುಷತ್ರಿಕೋಟಿಗಳ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೧.ಪ.೬೪)

ಇಂದು(ಶಶಿ) ಪರ್ವತ(ಗಿರಿ) ದಿನೇಶ(ಇನ) ರಶ್ಮಿ(ಕಿರಣ), ಗಾಳಿ(ಪವನ) ಎಂಬ ನಾಮರೂಪಗಳಿಗೆ ಸಮನಾರ್ಥಕವಾದ ಬೇರೊಂದು ಹೆಸರುಗಳನ್ನು ನೀಡುವ ಮೂಲಕ ಭೀಮಕವಿಯು ಕನ್ನಡಕ್ಕೆ ಅನುವಾದಿಸಿದ್ದಾನೆ.

ನಂದಿಕೇಶ್ವರನ ಅವತಾರದ ಭಾಗದಲ್ಲಿ ಸೋಮನಾಥನ ಮೂಲ ನಿರೂಪಣೆ ಹೀಗಿದೆ:

ಪರಮತತ್ವಾಮೃತಂ ಬಯ ಚನ್ನುಂಬಾಲು
ಗುರುಪದಧ್ಯಾನ ವಿಸ್ಫುರಣಯ ವೆನ್ನ
ವೇದಾಂತ ಸೂಕ್ತುಲ ವೆಡ ದೊಕ್ಕುಂಬಲ್ಕು

(ಗೂ.ವೆಂ.ಸು.(ಸಂ),ಬ.ಪು.,ಪ್ರ.ಆ.ಸಾ.೩೯೭-೩೯೯)

(ಪರಮ ತತ್ವಾಮೃತವೇ ಮೊಲೆಹಾಲು, ಗುರುವಿನ ಪಾದ ಧ್ಯಾನವೇ ಬೆಣ್ಣೆ, ವೇದಾಂತ ಸೂಕ್ತಿಗಳೇ ತೊದಲ ನುಡಿ)

"ಪರಮ ತತ್ವಾಮೃತವೆ ಮೊಲೆವಾಲ್
ಗುರುಪಾದಾಂಬುಜ ಧ್ಯಾನ ಸುಸ್ಥಿರ
ದಿರವೆ ಬೆಣ್ಣೆ ರಹಸ್ಯ ಮೃದುಸೂಕ್ತಿಗಳೆ ತೊದಲುನುಡಿ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೨-ಪ-೧೧)

ಇಲ್ಲಿ ಭೀಮಕವಿ ನೇರವಾಗಿ ಪದಶಃ ಅನುವಾದ ಮಾಡಿರುವುದನ್ನು ಕಾಣಬಹುದು. ವೀರಶೈವಾಚಾರವನ್ನು ತಿಳಿಸುವಾಗ ಸೋಮನಾಥನ ಮಾತುಗಳನ್ನೇ ನೇರವಾಗಿ ಹೇಳಿದ್ದಾನೆ. ಪರಮೇಶ್ವರನ ತತ್ವಗಳೇ ಅಮೃತದ ಹಾಲು, ಗುರುವಿನ ಪಾದಸೇವೆಯೇ ಧ್ಯಾನ. ಬೆಣ್ಣೆಯಂತೆ ಶುಭ್ರ, ವೇದ ಸೂಕ್ತಿಗಳೇ ತೊದಲನುಡಿ ಎಂಬ ಮಾತುಗಳು ಮೂಲದಂತೆ ಕನ್ನಡದಲ್ಲೂ ಹಾಗೆಯೇ ನೀಡಲಾಗಿದೆ.

ಉಪಮೆ ರೂಪಕಾದಿಗಳ ವರ್ಣನೆಗಳನ್ನು ಮಾಡುವಾಗಲೂ ಭೀಮಕವಿ ಕೆಲವೊಂದು ಕಡೆಗಳಲ್ಲಿ ನೇರವಾಗಿ ಭಾಷಾಂತರ ಮಾಡಿರುವುದನ್ನು ಗಮನಿಸಬಹುದು. ತಂದೆಯ ಮುಂಜಿ ಕಟ್ಟುವ ಕಾರ್ಯವನ್ನು ತಿರಸ್ಕರಿಸಿ 'ವೀರಶೈವಾಚಾರವೇ ನನ್ನ ನಿಜವಾದ ಕಾಯಕ' ಅದೇ ನನ್ನ ಧರ್ಮ ಎಂದು ವಾದಿಸುತ್ತಾನೆ ಬಸವಣ್ಣ. ತಂದೆಯ ಬಲವಂತಕ್ಕೆ ಪ್ರತಿಯಾಗಿ ಬಸವಣ್ಣ ಕೊಡುವ ರೂಪಕ ಸೋಮನಾಥನಲ್ಲಿ ಹೀಗಿದೆ:

"ಗಾಕಲು ಪೆಂಚಿನ ಕೋಕಿಲಪಿಲ್ಲ
ಕಾರುಲಂ ಬೋಲುನೇ ಕಾವುಕಾವನಚು"

(ಗೂ.ವೆಂ.ಸು.(ಸಂ),ಬ.ಪು.,ಪ್ರ.ಆ.ಸಾ.೧೦೧೫-೧೬)

(ಕಾಗೆ ಬೆಳಿಸಿದ ಕೋಗಿಲೆ ಮರೆಯು ಕಾಗೆಯಂತೆ ಕಾವು ಕಾವು ಎಂದು ಅರಚುತ್ತದೆಯೇ)

"ಕಾಗೆ ಸಾಗಿಪ ಕೋಗಿಲೆಯ ಮಱಿ
ಕೂಗುವುದು ಸುಸ್ವರದೊಳಲ್ಲದೆ
ಕಾಗೆಯಂದದಿ ಕಾವುಕಾವೆಂದಱಚುವುದೆ ಹೇಳಾ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೩.ಪ.೭೯)

ಈ ರೀತಿಯಾಗಿ ಭೀಮಕವಿ ಅನೇಕ ಕಥಾ ಭಾಗಗಳನ್ನು ಕನ್ನಡಕ್ಕೆ ನೇರವಾಗಿ ಅನುವಾದ ಮಾಡಿದ್ದಾನೆ. ಬಸವಣ್ಣ ಮಾಡುವ ಪವಾಡಗಳು, ಮುಗ್ದಭಕ್ತರು, ಮಹಿಮಾ ಭಕ್ತರ ಕಥೆಗಳಲ್ಲಿನ ಅನೇಕ ದ್ವಿಪಾದಗಳನ್ನು ಷಟ್ಪದಿ ರೂಪಕ್ಕೆ ಪರಿವರ್ತಿಸಿದ್ದಾನೆ. ಈ ಮೂಲಕ ತೆಲುಗಿನ ಬಸವಪುರಾಣಕ್ಕೆ ಮೂಲನಿಷ್ಠವಾಗಿರುವುದನ್ನು ಕಾಣಬಹುದು.

**೭.೨. ವಿಸ್ತಾರಾನುವಾದ :**

ತೆಲುಗು 'ಬಸವಪುರಾಣಮು'ವಿನ ಪ್ರತಿಯೊಂದು ಆಶ್ವಾಸದಲ್ಲಿ ಬರುವ ಶರಣರ ಕಥಾಭಾಗವನ್ನು ಭೀಮಕವಿ ಸಾಧ್ಯವಿದ್ದಷ್ಟು ವಿಸ್ತರಿಸಿ ತನ್ನ ಕಾವ್ಯವನ್ನು ಹಿಗ್ಗಿಸಿದ್ದಾನೆ. ಸೋಮನಾಥ ಕೆಲವು ಸಂದರ್ಭ ಸನ್ನಿವೇಶಗಳನ್ನು ಸಂಕ್ಷಿಪ್ತವಾಗಿ ವಿವರಿಸಿದ್ದಾನೆ. ಇಂತಹ ಕಡೆಗಳಲ್ಲಿ ಹಾಗೂ ಕಥೆಯ ರಸದೌತಣಕ್ಕೆ ಕಾರಣವಾಗುವ ಸಂದರ್ಭಗಳಲ್ಲಿ ಭೀಮಕವಿ ವಿಸ್ತಾರವಾಗಿ ವರ್ಣಿಸಿದ್ದಾನೆ. ಭೀಮಕವಿ ವರ್ಣನಾಪ್ರಿಯ. ವರ್ಣನೆಗಳಿಗೆ ಅವಕಾಶವಿರುವಡೆಗಳಲ್ಲಿ ಅತ್ಯಂತ ಸೊಗಸಾಗಿ ತನ್ನ ಸೋಪಜ್ಞತೆಯನ್ನು ತೋರಿಸಿದ್ದಾನೆ. ಪ್ರಕೃತಿ ಮತ್ತು ಸ್ತ್ರೀವರ್ಣನೆಗಳನ್ನು ಮಾಡುವಾಗ ಮಾರ್ಗ ಕವಿಗಳನ್ನು ಮೀರಿಸುವಷ್ಟು ವರ್ಣನಾ ಪ್ರೌಢಿಮೆಯನ್ನು ಮೆರೆದಿದ್ದಾನೆ. ಇಂತಹ ಕೆಲವು ವರ್ಣನೆಗಳು ಕನ್ನಡ 'ಬಸವಪುರಾಣ'ದಲ್ಲಿ ಹೆಚ್ಚಾಗಿರುವುದರಿಂದ ಮೂಲಕ್ಕಿಂತ ಮೂರುಪಟ್ಟು ಹೆಚ್ಚಾಗಿ ಬೃಹತ್ ಪುರಾಣವಾಗಿ ರೂಪಗೊಳ್ಳಲು ಸಾಧ್ಯವಾಗಿರುವುದು. ಮೂಲ ತೆಲುಗು ಪುರಾಣವು ಏಳು ಆಶ್ವಾಸಗಳಲ್ಲಿ ಸುಮಾರು ಆರು ಸಾವಿರದ ಮುನ್ನೂರಕ್ಕೂ ಹೆಚ್ಚಿನ ದ್ವಿಪದಿಗಳನ್ನು ಹೊಂದಿದೆ. ಕನ್ನಡ 'ಬಸವಪುರಾಣ'ವು ಎಂಟು ಕಾಂಡ, ಅರವತ್ತು ಸಂಧಿ ಮೂರುಸಾವಿರದ ಆರುನೂರ ಇಪ್ಪತ್ತೊಂದು ಷಟ್ಪದಿಗಳನ್ನು ಒಳಗೊಂಡ ಬೃಹತ್ ಕಾವ್ಯವಾಗಿದೆ. ಈ ರೀತಿಯ ಬೃಹತ್ ಗಾತ್ರಕ್ಕೆ ಕಾರಣ ಭೀಮಕವಿಯ ಉಭಯಭಾಷಾ ಕವಿತ್ವದ ಪಾಂಡಿತ್ಯ ಹಾಗೂ ಸೋಮನಾಥನಿಗೆ ತಿಳಿಯದೇ ಇರುವ ಕೆಲವಾರು ಅಂಶಗಳನ್ನು ಕಥಾಸಂದರ್ಭಕ್ಕೆ ಅನುಗುಣವಾಗಿ ಹೊಸದಾಗಿ ಸೇರಿಸಿರುವುದೇ ಆಗಿದೆ. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಕನ್ನಡ 'ಬಸವಪುರಾಣ'ದ ವಿಸ್ತಾರಾನುವಾದದ ಸ್ವರೂಪವನ್ನು ಪ್ರಮುಖ ಸಂದರ್ಭ ಮತ್ತು ಸನ್ನಿವೇಶಗಳನ್ನಿಟ್ಟುಕೊಂಡು ಉದಾಹರಣೆಗಳೊಂದಿಗೆ ಮುಂದೆ ವಿಶ್ಲೇಷಿಸಲಾಗಿದೆ.

ಪುರಾಣದ ಆರಂಭದಲ್ಲಿ ಕೈಲಾಸದ ಶಿವನ ಒಡ್ಡೋಲಗ ಮತ್ತು ಅಲ್ಲಿಗೆ ಆಗಮಿಸುವ ನಾರದನ ಸನ್ನಿವೇಶವನ್ನು ಸೋಮನಾಥ ಹೇಳುವುದು "ಮಾರಾರಿಯಾದ ಶಿವನು, ಉಮೆಯಾದ ಪಾರ್ವತಿ ದೇವಿಯು ಮಾನಿತ ಕ್ರೀಡೆಯಿಂದ ಸುಖಸಂಕಥಾ ವಿನೋದದಲ್ಲಿ ಕಾಲ ಕಳೆಯುವಾಗ ಅಲ್ಲಿ ಉಪಮನ್ಯು, ಭೃಂಗಿ, ನಂದಿಕೇಶ್ವರನಾದಿಯಾಗಿ ಇದ್ದರು. ಅಲ್ಲಿಗೆ ನಾರದನೆಂಬ ಮುನಿನಾಯಕೋತ್ತಮನು ಬಂದನು"(ಪಾ.ಸೋ.ಪ್ರ.ಆ.ಸಾ.೨೭೩-೨೭೪) ಎಂದು ಮಾತ್ರ ಹೇಳುತ್ತಾನೆ. ಆದರೆ ಭೀಮಕವಿಯು ಕೈಲಾಸದ ವರ್ಣನೆ, ಶಿವನ ಸಭೆಯ ಸೌಂದರ್ಯ ಮತ್ತು ಅಲ್ಲಿನ ಗಣ್ಯಾತಿಗಣ್ಯರ ಹೆಸರುಗಳನ್ನು ಹೇಳುವುದರ ಮೂಲಕ ಕೈಲಾಸದ ಶಿವನ ಒಡ್ಡೋಲಗದ ಇಡೀ ಚಿತ್ರಣವನ್ನು ನಮ್ಮ ಮುಂದೆ ಇಡುತ್ತಾನೆ. ಕೈಲಾಸವನ್ನು ಸೋಮನಾಥ "ಶ್ರೀರಜತಾಚಲಶೃಂಗ" ಎಂದು ಮಾತ್ರ ಹೇಳಿರುವುದು

ಭೀಮಕವಿಗೆ ರುಚಿಸುವುದಿಲ್ಲ. ಹಾಗಾಗಿ ಅಲ್ಲಿನ ಸಂಪೂರ್ಣ ಚಿತ್ರಣವನ್ನು ನೀಡುವ ಸಲುವಾಗಿ ಭೀಮಕವಿಯು ಮೂರು ಷಟ್ಪದಿಗಳಲ್ಲಿ ಶಿವನ ಕೈಲಾಸ ಸಭೆಯನ್ನು ವರ್ಣಿಸುವುದು ಹೀಗೆ: "ಕೆಲಾಸವು ಚಂದ್ರನ ತುಂಬು ಬೆಳದಿಂಗಳನ್ನು ತುಂಬಿಕೊಂಡಿದೆಯೋ, ದಟ್ಟವಾದ ಹಿಮದಿಂದ ಆವೃತವಾಗಿದೆಯೋ, ಅಮೃತವು ಬೆಳೆದು, ಅಚಲವಾಗಿದೆಯೋ, ಜಾಜಿಮಲ್ಲಿಗೆ, ಶ್ರೀಗಂಧಮಲ್ಲಿಗೆ ಮುಂತಾದ ಹೂಗಳಿಂದ, ಸಾಗರಗಳಿಂದ ತುಂಬಿ ಚೆಲುವಿನ ರೂಪವಾಯ್ತೋ ಎಂಬಂತೆ ರಜತಾದ್ರಿ ರಂಜಿಸುತ್ತಿತ್ತು"(ಭೀ.ಸಂ.೧.ಪ.೩೮) ಎನ್ನುತ್ತಾನೆ. ಮುಂದುವರೆದು,

"ಕಣಿಯೋ ಪರುಷದ ನಿಧಿಯೋ ಚಿಂತಾ
ಮಣಿಯ ನಂದನಮೋ ದಿವಿಜ ಧಾ
ರುಣಿರುಹಂಗಳ ನೆಲೆಯೊ ಕಡವರದಿರವೊ ಶೋಭನದ
ದೊಣೆಯೊ ಸಿದ್ಧರಸದ ಸದನಮೋ
ಪ್ರಣವಮಂತ್ರಾಗಮದ ಕಳೆಗಳೊ
ಪ್ರಣುತಿಸಲ್ಕಿಂತೊಪ್ಪುವಾ ಕಲಾಧೌತಶೈಲದಲಿ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೧ಪ.೩೯)

ಇಂತಹ ಸದನದ ರಮ್ಯಸ್ಥಾನ ಮಂಟಪದಲ್ಲಿದ್ದ ರತ್ನಮಯ ಸಿಂಹಾಸನದ ಮೇಲೆ ಗಜೇಂದ್ರನಿದ್ದನು ಎಂದು ಭೀಮಕವಿ ಹೇಳುತ್ತಾನೆ. ಹಾಗೆಯೇ ಆ ಓಲಗದಲ್ಲಿ ಸೇರಿದ್ದ ಗಣ್ಯರನ್ನು ಹೇಳುವಾಗ ಸೋಮನಾಥ ಹೆಸರಿಸುವುದು "ಉಪಮನ್ಯು, ಭೃಂಗಿ ಮತ್ತು ನಂದಿಕೇಶ್ವರನಾದಿಯಾಗಿದ್ದರು" (ಪಾ.ಸೋ.ಪ್ರ.ಆ.೨೬೯-೨೭೦) ಎಂದು ಮಾತ್ರ ಹೇಳುತ್ತಾನೆ. ಆದರೆ ಭೀಮಕವಿಯು ಆ ಓಲಗದಲ್ಲಿರುವ ಎಲ್ಲಾ ಮುಖ್ಯ ಗಣ್ಯರನ್ನು ಹೆಸರಿಸುತ್ತಾನೆ. ತೋಯಜಪ್ರಭ (ಬ್ರಹ್ಮ), ಸುಧಾಶನ(ದೇವೇಂದ್ರ) ದಿಶಾಧಿಪರು, ವರುಣಾದಿ ವಸುವುಗಳು, ಧೀಯುತರು, ನವನಾಥಸಿದ್ಧರು, ಮಹಾಯತೀಂದ್ರರು ಹಾಗೂ ದ್ವಾದಶಾದಿತ್ಯರು(ಧಾತೃ, ಮಿತ್ರ, ಆರ್ಯಮಾನ್, ರುದ್ರ, ವರುಣ, ಸೂರ್ಯ, ಭಗ, ವಿವಸ್ವಾನ್, ಪೂಷನ್, ಸವಿತೃ, ತ್ವಷ್ಟ್ಯ, ವಿಷ್ಣು(ಭೀ.ಬ.ಪು.ಪು.೮೨೨) ಮತ್ತು ನವಬ್ರಹ್ಮರು(ಮರೀಚಿ ಭೃಗು, ಅಂಗೀರಸ, ಪುಲಸ್ತ್ಯ, ಪುಲಹ, ಕ್ರತು, ದಕ್ಷ, ವಸಿಷ್ಠ(ಭೀ.ಬ..ಪು.೮೨೩), ಬುಧ ಸಪ್ತ ಋಷಿಗಳು, ರುದ್ರರು, ಸನಂದ ಶುಕಾದಿ ಮುನಿವರರು, ಗ್ರಹಾವಳಿಯಾದಿ ನಕ್ಷತ್ರಗಳು, ವೇದಾದಿ ವೇದ್ಯರು, ಕಿನ್ನರರು, ಗಂಧರ್ವರು, ಕಿಂಪುರುಷಗಣ, ರಾಕ್ಷಸ ಸಮೂಹ, ಉರುಗಕುಲ, ಗರುಡೌಘ, ವಿಯಚ್ಚರ(ವಿದ್ಯಾದರ), ವೃಂದ ಮುಂತಾದವರು ಸೇರಿದ್ದರು. ತರಣಿ ಶಶಿಗಳು ಚಾಮರ ಬೀಸುತ್ತಿರುವಾಗ, ಅನುಮಿಷರು ಜಯ ಜಯ ಘೋಷಗಳನ್ನು ಕೂಗುತ್ತಿದ್ದರು ಎಂದು ಭೀಮಕವಿ ಹೇಳುತ್ತಾನೆ. ಇಂತಹ ವಿಸ್ತಾರವಾದ ಅನುವಾದದ ಮೂಲಕ ಭೀಮಕವಿ ಒಂದು ಸಂದರ್ಭದ ಸಮಗ್ರ ಚಿತ್ರಣವನ್ನು ನೀಡುತ್ತಾನೆ. ಪುರಾಣದ ವಸ್ತುವೇ ಶಿವಧರ್ಮನೀತಿ. ಹಾಗಾಗಿ ಶಿವನ ಸನ್ನಿಧಿಯನ್ನು ಸಮಗ್ರವಾಗಿ ಮನಮುಟ್ಟುವಂತೆ ಚಿತ್ರಿಸಿರುವ ಭೀಮಕವಿಯ ಜಾಣ್ಮೆ ಮೆಚ್ಚುವಂತಹದ್ದು.

ಇಂತಹ ಮಹೋನ್ನತ ಸಭೆಗೆ ಆಗಮಿಸುವ ನಾರದನನ್ನು ಸೋಮನಾಥ ಹೇಳುವುದು 'ನಾರದನೆನೆ ಮುನಿನಾಯಕೋತ್ತಮನು ಬಂದನು' ಎಂದು ಮಾತ್ರ ಹೇಳಿದರೆ, ಭೀಮಕವಿಯು ನಾರದನ ಬಾಹ್ಯ ಸೌಂದರ್ಯ, ಅವನ ವೇಶಭೂಷಣ, ಮಂದಸ್ಮಿತನಗು, ಅವನು ಸಭೆಗೆ ಬರುವ ರೀತಿಯನ್ನು ವರ್ಣಿಸುವುದರ ಮೂಲಕ ಭಾಷಾಂತರದ ಜೊತೆಗೆ ಅಳವಡಿಕೆಯ ಕಾರ್ಯವನ್ನು ಸಮರ್ಥವಾಗಿ ನಿಭಾಯಿಸಿ ಸನ್ನಿವೇಶದ ಸ್ಪಷ್ಟತೆಯನ್ನು ನೀಡುತ್ತಾನೆ. ಅವನು ನಾರದನನ್ನು ವರ್ಣಿಸಿದ ರೀತಿ,

"ಮಿಸುಪ ರನ್ನದ ಕುಂಡಲಂ ಸಿತ
ಭಸಿತ ಲಲಿತಾಂಗಂ ತ್ರಿಪುಂಡ್ರದ
ನೊಸಲರುಣಪಟವೇಕಜಡೆ ತೊಳತೊಳಗುವುಪವೀತ
ಎಸೆವ ನಸುನಗೆ ದಶನರುಚಿ ದೆಸೆ
ದೆಸೆಗೆ ಪಸರಿಸೆ ವೀಣೆಯಂ ಬಾ
ಜಿಸುತ ಮೆಲ್ಲನೆ ಪಾಡುತಾಡುತ ಮಂದಗತಿಗಳಲಿ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೧.ಪ.೫೩).

ಮಿನುಗುವ ಬಂಗಾರದ ಕುಂಡಲಗಳು, ಹಣೆಯಲಿ ವಿಭೂತಿ, ಏಕಜಡೆಯ ತುರುಬು, ನಸುನಗೆಯ ಮೊಗ, ದಶದಿಕ್ಕುಗಳಿಗೂ ಹರಡುವ ವೀಣೆಯ ನಾದ, ಸುಸ್ವರವಾಗಿ ಹಾಡನ್ನು ಹಾಡುತ್ತಾ ಮಂದಗತಿಯಲ್ಲಿ ಶಿವನ ಸಭೆಗೆ ನಾರದನು ಬಂದನು ಎಂದು ಹೇಳಿರುವುದರಿಂದ ನಾರದನ ಸ್ಪಷ್ಟಚಿತ್ರಣ ಓದುಗರಿಗೆ ಸಿಕ್ಕಂತಾಗಿದೆ. ಆ ಕಾರಣವಾಗಿ ಭೀಮಕವಿ ಎಲ್ಲಾ ವಿಚಾರಗಳನ್ನು, ಸಂದರ್ಭಗಳನ್ನು, ಸೂಕ್ಷ್ಮ ಮತ್ತು ಸ್ಪಷ್ಟಚಿತ್ರಣಗಳ ಮೂಲಕ ಗುರುತಿಸಲು ಸಹಕಾರಿಯಾಗುವಂತೆ ತನ್ನ ಪುರಾಣವನ್ನು ಅನುವಾದ ಮಾಡಿದ್ದಾನೆ.

ಬಸವಣ್ಣನ ತಂದೆ ತಾಯಿಯರಾದ ಮಾದಿರಾಜ ಮತ್ತು ಮಾದಾಂಬೆಯನ್ನು ಸೋಮನಾಥ ಹೇಳುವುದು ಹೀಗೆ.

"..... ಹಿಂಗುಳೇಶ್ವರ ಭಾಗವಾಟಿ
ಯನುನಗ್ರಹಾರಂಬುನಂದು ವಿಖ್ಯಾತಿ
ಮನುಚುಂಡು ಮಂಡೆಂಗ ಮಾದಿರಾಜನಂಗ
ನತನಿ ಪರಮಸಾಧ್ವಿ ಯತಿವ ಮಾದಾಂಬ
ಸತತ ಶಿವಾಚಾರ ಸಂಪನ್ನ ಧನ್ಯ
ಕೊತ್ತಡಿ ನೆಲ್ಲನು ಗೊಂಡೊಕ್ಕೆವೆದ್ದ
ಯುತ್ತಮರಾಲು ಧರ್ಮೋಪೇತಗಾತ್ರಿ"

(ಗೂ.ವೆಂ.ಸು.(ಸಂ),ಬ.ಪು.ಪ್ರ.ಆ.ಸಾ.೫೮೪-೫೯೦)

(ಹಿಂಗುಳೇಶ್ವರದ ಬಾಗೇವಾಡಿ ಎಂಬ ಅಗ್ರಹಾರದಲ್ಲಿ ವಿಖ್ಯಾತಿಯಿಂದ ಇದ್ದ ಮಂಡಗೆ ಮಾದಿರಾಜನೆಂಬುವನು ಅವನ ಪ್ರೀತಿಯ ಹೆಂಡತಿ ಮಾದಾಂಬೆ ಸತತ ಶಿವಾಚಾರ ಸಂಪನ್ನೆಯವಳು. ಹದಿಬದೆತನವನು ಗಳಿಸಿದ ಹಿರಿಯಳು. ಧರ್ಮವನ್ನು ಉತ್ತಮವಾಗಿ ಆಚರಿಸುವಳು)

ಇಲ್ಲಿ ಸೋಮನಾಥ ಮಾದಿರಾಜನನ್ನು ವಿಖ್ಯಾತನಾದ ಎಂದು ಮಾತ್ರ ಹೇಳಿ ಮಾದಾಂಬೆಯ ಕೆಲವು ಉತ್ತಮ ಗುಣಗಳನ್ನು ಮಾತ್ರ ಹೇಳುತ್ತಾನೆ. ಭೀಮಕವಿಗೆ ಬಸವಣ್ಣನಂತಹ ಒಬ್ಬ ಮಹಾಪುರುಷನ ತಂದೆ-ತಾಯಿಗಳಿಗೆ ಬಸವಣ್ಣನಷ್ಟೇ ಪ್ರಾಮುಖ್ಯತೆಯನ್ನು ನೀಡಬೇಕೆಂದು ಎರಡು ಷಟ್ಪದಿಗಳಲ್ಲಿ ಅವರ ಗುಣಾತಿಶಯಗಳನ್ನು ಮಾಡಿದ್ದಾನೆ:

"ಆ ಮಹಾ ಬಹುಳಗ್ರಹಾರದ
ಗ್ರಾಮಣೀಮಣಿ ವಿತರಣದ ಕಣಿ
ಭೂಮಿದೇವಾಗ್ರಣಿ ಪರಮ ಶೈಲಾಂಬುರುಹತರಣಿ
ನೇಮಿಸುವ ಷಟ್‌ಕರ್ಮಮಾರ್ಗ
ಪ್ರೇಮಿ ಸಂತತ ವರತನೂಭವ
ಕಾಮಿ ಮಂಡಗೆಮಾದಿರಾಜನೆಲಕ್ಕೆ ಸನ್ನಾಮಿ"

"ಆತನುತ್ತಮ ಸತಿ ವಿಶೇಷಪು
ನೀತೆ ಮಾದಾಂಬಿಕೆ ಸವಿನಯಾ
ನ್ವಿತೆ ಸತ್ಕುಲಜಾತೆ ಸಜ್ಜನಭಕ್ತಿನಿರ್ಣೀತೆ
ಪಾತಕಕ್ಕತಿಭೀತೆ ಧರ್ಮ
ಸ್ರೋತೆ ಪುಣ್ಯಸಮೇತ ಸತ್ಯವಿ
ನೀತೆ ಸುಗುಣವ್ರಾತೆ ವಿಮಾಚಾರವಿಖ್ಯಾತೆ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೨.ಪ.೪೬-೪೭)

ಹೀಗೆ ಮಾದಿರಾಜ ಮತ್ತು ಮಾದಾಂಬೆಯರ ಗುಣಗಳನ್ನು ಹೇಳುವ ಸಲುವಾಗಿ ಇಲ್ಲಿ ವಿಸ್ತಾರಾನುವಾದ ಮಾಡಿದ್ದಾನೆ.

ಬಸವಣ್ಣನು ಮಾದಿರಾಜ ಮತ್ತು ಮಾದಾಂಬೆಯರ ಮಗನಾಗಿ ಜನಿಸಿ ಶಿವತತ್ವ ಆಚಾರಗಳನ್ನು ಹೇಳುತ್ತಾ ತನ್ನ ಬಾಲಲೀಲೆಗಳನ್ನು ತೋರುತ್ತಾ ಬೆಳೆಯುತ್ತಾನೆ. ಬೆಳೆದ ಬಾಲಕ ಬಸವಣ್ಣನ ವಿದ್ಯಾಭ್ಯಾಸವನ್ನು ಕುರಿತು ಸೋಮನಾಥ ಹೇಳುವುದು ಹೀಗೆ:

"ಸರ್ವಜ್ಞುಂಡೈನ ವೃಷಭ ಮೂರ್ತಿಗಾನ
ಸ್ವರವಿದ್ಯಲು ಸಹಜಂಬ ಪಾಟಿಲ್ಲ"

(ಗೂ.ವೆಂ.ಸು.(ಸಂ),ಬ.ಪು.,ಪ್ರ.ಆ.ಸಾ.೮೪೯-೮೫೦)

(ಸರ್ವಜ್ಞನಂತೆ ವೃಷಭ ಮೂರ್ತಿಯಾದ ಬಸವಣ್ಣನಿಗೆ ಎಲ್ಲಾ ವಿದ್ಯೆಗಳು ಸಹಜವಾಗಿ ಬರುತ್ತವೆ)

ಭೀಮಕವಿಯ ವಿಸ್ತಾರಾನುವಾದ ಹೀಗಿದೆ:

"ಬರೆಹ ವಾಚನ ಗಣಿತ ಶಬ್ದಾ
ರ್ಥ ರಸ ಭಾವೋಕ್ತಿ ಪ್ರವೀಣತೆ
ಭರತ ಛಂದೋ ವ್ಯಾಕರಣ ಸಂಗೀತ ಸಾಹಿತ್ಯ
ಹರರಹಸ್ಯಾಗಮನ ಪುರಾಣೋ
ತ್ಕರ ಸಕಳ ವೇದಾದಿ ಕಲೆಗಳು
ಸ್ಮರಿಸಲೊಡನೆ ಮುಖೋದ್ಗತಂ ಬಸವಂಗದೇವೊಗಳ್ವೆ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೩.ಪ.೪೨)

ಭೀಮಕವಿಗೆ ಬಸವಣ್ಣ 'ಸರ್ವ ಕಲೆಗಳನ್ನು ಕಲಿತನು' ಎಂಬ ಸೋಮನಾಥನ ಹೇಳಿಕೆಯಿಂದಷ್ಟೆ ತೃಪ್ತಿಯಾಗಿರಲಿಕ್ಕಿಲ್ಲ. ಅದಕ್ಕಾಗಿ ಬಸವಣ್ಣ ಕಲಿತ ಎಲ್ಲಾ ವಿದ್ಯೆಗಳನ್ನು ಪರಿಚಯಿಸಬೇಕೆಂಬ ದೃಷ್ಟಿಯಿಂದ ಎಲ್ಲವನ್ನೂ ಹೇಳುತ್ತಾನೆ. ಅದೂ ಬಸವಣ್ಣನಿಗೆ ಈ ಎಲ್ಲಾ ವಿದ್ಯೆಗಳು 'ಸ್ಮರಿಸಲೊಡನೆ ಎಲ್ಲವೂ ಅವನಿಗೆ ತಿಳಿದವು' ಎಂಬ ಮಾತನ್ನು ಸೇರಿಸುತ್ತಾನೆ. ಇದರಿಂದ ಬಸವಣ್ಣನ ಬುದ್ಧಿಶಕ್ತಿ ಮತ್ತು ದೈವಗುಣದ ಸ್ಪಷ್ಟ ಅರಿವು ಓದುಗರಿಗೆ ಲಭಿಸುತ್ತದೆ.

ಬಸವಣ್ಣನ ಉಪನಯನದ ಸಂದರ್ಭವು ಎರಡೂ ಪುರಾಣಗಳಲ್ಲಿ ವಿಸ್ತೃತ ವರ್ಣನೆಗಳಿಂದ ಚಿತ್ರಿತವಾಗಿದ್ದರೂ ಕನ್ನಡದಲ್ಲಿ ಇನ್ನೂ ಕೆಲವು ಪದ್ಯಗಳನ್ನು ಭೀಮಕವಿ ಹೊಸದಾಗಿ ಸೇರಿಸುತ್ತಾನೆ. ಉಪನಯನದ ವಿಷಯದಲ್ಲಿ ತಂದೆ ಮಗನ ನಡುವೆ ವಾದ ಪ್ರತಿವಾದಗಳು ನಡೆಯುತ್ತಿರುವಾಗ ವಿಪ್ರಾಚಾರದ ಮಹತ್ವವನ್ನು ಕುರಿತು ತಂದೆ ವಾದಿಸಿದರೆ, ಶೈವಾಚಾರದ ಶ್ರೇಷ್ಠತೆಯನ್ನು ಮಗನು ವಾದಿಸುತ್ತಾನೆ. ಈ ಭಾಗದ ಭಾಷಾಂತರದಲ್ಲಿ ಸೋಮನಾಥನ ದ್ವಿಪಾದಗಳನ್ನು ಭೀಮಕವಿ ಒಂದೊಂದು ಷಟ್ಪದಿಯ ಮೂಲಕ ಅನುವಾದಿಸಿ ಹೇಳುತ್ತಾನೆ. ಕೆಲವೊಮ್ಮೆ ಸಂದರ್ಭಕ್ಕೆ ಅನುಗುಣವಾಗಿ ಹೊಸ ಹೊಸ ಪದ್ಯಗಳನ್ನೂ ಸೇರಿಸುತ್ತಾನೆ. ಅದರಲ್ಲಿನ ಒಂದು ಮುಖ್ಯ ಪದ್ಯ ಬಸವಣ್ಣ ತಂದೆಗೆ ಹೇಳುವಂಥದ್ದು ಗಮನಾರ್ಹ.

"ಗುರುಪಾದಾರ್ಚನೆಗೊಲಿದು ಹಾರುವ
ಪರಮ ಶೈವೊನ್ನತಿಗೆ ಹಾರುವ
ಶರಣಸ್ವಾನುಭವಕ್ಕೆ ಹಾರುವ ತತ್‌ಪ್ರಸಾದಕ್ಕೆ
ಹರಿದು ಹಾರುವ ವೀರಭಕ್ತಿಗೆ
ಪಿರಿದು ಹಾರುವ ನಾನದೆಂದುಂ
ಬೆರಸಿ ಹಾರುವ ಕುಲಕೆ ಹಾರುವನಲ್ಲ ನುಡಿಯದಿರು"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೩.ಪ.೮೦)

ಕೊನೆಗೆ ನೀವು ನನ್ನ ತಂದೆ ತಾಯಿಗಳಲ್ಲ ಚೆನ್ನಯ್ಯನೇ ತಾತ, ಚೇರಮ ತಂದೆ, ಚಿಕ್ಕಪ್ಪ ಕಕ್ಕಯ್ಯ ಎಂದು ಮೂಲದಲ್ಲಿದ್ದರೆ ಅನುವಾದದಲ್ಲಿ ಭೀಮಕವಿ ನೀವು ನನ್ನ ತಂದೆ ತಾಯಿಗಳಲ್ಲ 'ಎನಗಿನ್ನು ಈಶಭಕ್ತರೇ' ತಂದೆ ತಾಯಿಗಳು ಎಂಬ ಮಾತನ್ನು ಹೇಳುತ್ತಾ ಬಸವಣ್ಣನ ಸರ್ವಪ್ರೀತಿಯ ಮಹತ್ವವನ್ನು ಹೆಚ್ಚಿಸುತ್ತಾನೆ ಭೀಮಕವಿ. ನಂತರ, ಚೆನ್ನಯ್ಯ, ಚೇರಮ ಕಕ್ಕಯ್ಯನ ಜೊತೆಗೆ 'ತೆಲುಗು ಜೊಮ್ಮಯ್ಯನಯ್ಯನು', 'ನಿಂಬಿ ತಾಯಿ' ಎಂದು ಹೇಳುವ ಮೂಲಕ ತಾಯಿಯ ಪ್ರಸ್ತಾಪವನ್ನು ಬಿಟ್ಟಿದ್ದ ಸೋಮನಾಥ ದೋಷವನ್ನು ಭೀಮಕವಿ ತುಂಬುತ್ತಾನೆ.

ಬಸವಣ್ಣ ಮತ್ತು ಗಂಗಾಂಬಿಕೆಯರ ಮದುವೆಯ ಪ್ರಸಂಗವನ್ನು ಭೀಮಕವಿ ಹೃದಯಂಗಮವಾಗಿ ಚಿತ್ರಿಸಿದ್ದಾನೆ. (ಈ ಭಾಗದ ವಿಸ್ತಾರಾನುವಾದ ವರ್ಣನೆಗಳ ಹೆಚ್ಚಿನ ವಿವರಕ್ಕೆ ಕಾವ್ಯ ಸೌಂದರ್ಯ ಅಧ್ಯಾಯದ ವಿವಾಹ ವರ್ಣನೆಯನ್ನು ನೋಡಬಹುದಾಗಿದೆ)

ಬಿಜ್ಜಳನ ಆಸ್ಥಾನದ ಭಂಡಾರದ ಪದವಿಯನ್ನು ಅಲಂಕರಿಸಲು ಒಪ್ಪಿಗೆಯನ್ನು ಕೊಟ್ಟು ಕಲ್ಯಾಣಪುರಕ್ಕೆ ಆಗಮಿಸುವ ಸಂದರ್ಭದಲ್ಲಿ ಸೋಮನಾಥನು ಹೇಳುವುದು ಹೀಗೆ:

"ಗಲಯಂಗಂಗಲ್ಯಾಣಕಟಕ ಮುಂತಯುನು
ಶ್ರೀರಮ್ಯಮುಗ ವಲಂಕಾರಿಂಪಂ ಬಂಚಿ"

(ಗೂ.ವೆಂ.ಸು.(ಸಂ),ಬ.ಪು.,ದ್ವಿಆ.ಸಾ.೫೨-೫೩)

(ಉನ್ನತವಾದ ಕಲ್ಯಾಣ ಕಟಕವೆಲ್ಲವನ್ನು ರಮ್ಯವಾಗಿ ಅಲಂಕರಿಸಿದರು)

ಈ ಸಂದರ್ಭವನ್ನು ಭೀಮಕವಿ ಅನುವಾದಿಸಿದ ರೀತಿ ಸಂದರ್ಭಕ್ಕೆ ಹೆಚ್ಚು ಉಚಿತ ಎನಿಸುತ್ತದೆ. ಭೀಮಕವಿ ವಿಸ್ತಾರಾನುವಾದ ಹೀಗಿದೆ.

"ಕೇರಿಕೇರಿಗೆ ಮನೆಮನೆಗೆ ಗುಡಿ
ತೋರಣಂಗೆಳನೆತ್ತಿ ಮಣಿಮಯ
ತೋರಣಂಗಳನಳವಡಿಸುತಂ ಕಳಶಕನ್ನಡಿಯ
ತೋರಣಂಗಳನಲ್ಲಿಗಲ್ಲಿಗ
ಪಾದರಚನೆಗಳಿಂದೆ ತತ್ತ
ದ್ವಾರಶಿಖರಂಗಳೊಳಮರ್ಚಿಸಿ ನಗರಿಯಗಲದಲಿ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೫.ಪ.೧೨)

ಬಸವಣ್ಣನನ್ನು ಕಲ್ಯಾಣಪುರದ ಬೀದಿಗಳಲ್ಲಿ ಮೆರವಣಿಗೆಯ ಮೂಲಕ ಕರೆದೊಯ್ಯುತ್ತಾ ಇರುವಾಗ ಕಲ್ಯಾಣದ ಸ್ತ್ರೀಯರು ಆ ಮೆರವಣಿಗೆಯ ನೋಡಲು ಬರುವುದನ್ನು ಸೋಮನಾಥನು ತುಂಬಾ ಶೃಂಗಾರಮಯವಾಗಿ ವರ್ಣಿಸಿದ್ದಾನೆ. ಆದರೆ ಅಲ್ಲಿಗೆ ನೋಡಲು ಬಂದಿರುವ ಸ್ತ್ರೀಯರ ದೇಹ ಸೌಂದರ್ಯವನ್ನು ಸೋಮನಾಥ ವರ್ಣಿಸುವುದಿಲ್ಲ. ಭೀಮಕವಿ ತನ್ನ ಅನುವಾದದಲ್ಲಿ

ಅವರ ಸೌಂದರ್ಯವನ್ನು ವಿಶೇಷವೆಂಬಂತೆ ವರ್ಣಿಸುತ್ತಾನೆ:

"ಅಳಿಗಳೋ ಅಳಕಂಗಳೋ ಶಶಿ
ಕಳೆಗಳೋ ಅಳಿಕಂಗಳೋ ಉ
ತ್ಪಳದಳಂಗಳೊ ಕಂಗಳೋ ಕಂಬುಗಳೊ ಕೊರಳುಗಳೊ
ಹೊಳೆವ ಕನ್ನಡಿಗಳೊ ಮೊಗಂಗಳೊ
ಜಲರುಹಂಗಳೊ ಕರತಳಂಗಳೊ
ತಳಿರುಗಳೊ ಮೆಲ್ಲಡಿಗಳೋಯೆನೆ ನೆರೆದರ ಬಲೆಯರು"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೫.ಪ.೨೦)

ಮುಂದುವರೆದು,

"ಮುಡಿದ ಮುಡಿಗಳರಳ್ಗಳುಗೆ ಬಿಗಿ
ವಡೆದ ತೋರ ಕುಚಂಗಳಲುಗಲು
ತೊಡಿಗೆಗಳು ಥಳಥಳಸೆ ಕಡೆಗಂಗಳ ಬೆಳಗು ಹೊಳೆಯೆ
ನಡು ನಡುಗೆ ನಿಜೆ ಸಡಿಲೆ ನಡೆಗಳು
ಸಡಗರಿಸೆಯಂದುಗೆಗಳುಲಿಯಲ್
ಮಡದಿಯರು ಹರಿತಪ್ಪ ಕಡು ಸಂಭ್ರಮವನೇನೆಂಬೆ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೫.ಪ.೨೮)

ಬಸವನ ಆಗಮನದಿಂದ ಕಲ್ಯಾಣದ ಸ್ತ್ರೀಪುರುಷರು ಸಂತೋಷಗೊಂಡು ಅವನಿಗೆ ಭಕ್ತಿಯಿಂದ ನಮಿಸುತ್ತಾ ಸ್ವಾಗತಿಸುತ್ತಾರೆ. ವಿವಿಧ ವಾದ್ಯಗಳನ್ನು ನುಡಿಸುತ್ತಾ, ನಂದಿಕೋಲು ಮುಂತಾದ ಆಟಗಳನ್ನು ಆಡುತ್ತಾ ವಿನೋದಗಳನ್ನು ಮಾಡುತ್ತಾರೆ. ಇಂತಹ ಸದ್ಭಕ್ತನೊಬ್ಬನನ್ನು ಕಂಡು ಕಲ್ಯಾಣದ ಜನರು ಹರ್ಷಗೊಳ್ಳುತ್ತಾರೆ. ಇಲ್ಲಿಯವರೆಗೆ ಭೀಮಕವಿ ಸೋಮನಾಥನ ಮೂಲವನ್ನು ಅನುಸರಿಸುತ್ತಾನೆ. ಇಲ್ಲಿಂದ ಮುಂದೆ ಅದೇ ಕಥೆಯ ಭಾಗಕ್ಕೆ ಹೊಸ ಕಥೆಯೊಂದನ್ನು ಭೀಮಕವಿ ಸೇರಿಸುತ್ತಾನೆ. ಬಿಜ್ಜಳನ ಭಂಡಾರಿ ಹುದ್ದೆಯನ್ನು ಅಲಂಕರಿಸಿದ ಬಸವಣ್ಣನನ್ನು ಮತ್ತು ಅವನ ಕೀರ್ತಿಯನ್ನು ಮತ್ತಷ್ಟು ಹೆಚ್ಚಿಸಬೇಕೆಂಬ ಉತ್ಸಾಹದಲ್ಲಿ ಭೀಮಕವಿ ಈ ಭಾಗದಲ್ಲಿ ಲಿಪಿಯ ಪವಾಡ ಮಾಡಿರುವುದನ್ನು ಸೇರಿಸುತ್ತಾನೆ. ಅದು ಹೀಗಿದೆ, ಮೆರವಣಿಗೆ ಮೂಲಕ ಬಿಜ್ಜಳನ ಅರಮನೆಯನ್ನು ಪ್ರವೇಶಿಸಿದಾಗ ಹರಲಿಖಿತವೊಂದು ಅವರಿರುವ ಜಾಗಕ್ಕೆ ಬೀಳುತ್ತದೆ. ಅದನ್ನು ಅಲ್ಲಿದ್ದ ಪಂಡಿತರು, ಕವಿಗಳು, ಪುರೋಹಿತರು ಯಾರಿಂದಲೂ ಓದಲು ಸಾಧ್ಯವಾಗುವುದಿಲ್ಲ. ಹಲವು ಲಿಪಿಗಳನ್ನು ಓದುವಂತಹ ಪಂಡಿತರೂ ಅದನ್ನು ಓದಲು ವಿಫಲರಾಗುತ್ತಾರೆ. ಆಗ ಬಸವಣ್ಣ ತಾನು ಅದನ್ನು ಓದುತ್ತೇನೆಂದು ಹೇಳಿ ಅದರಲ್ಲಿರುವ ಅಂಶವನ್ನು ರಾಜನಿಗೆ ಹೀಗೆ ಹೇಳುತ್ತಾನೆ. ನಿಮ್ಮ ಸಿಂಹಾಸನದ ಕೆಳಗೆ ಎಂಬತ್ತೆಂಟು ಕೋಟಿ ಧನವಿದೆ ಎಂದು ಹೇಳಿ

ಮಂಚದ ಕೆಳಗೆ ಅಗೆಸುತ್ತಾನೆ. ಬಸವಣ್ಣ ಹೇಳಿದ್ದು ನಿಜವಾಗಿರುತ್ತದೆ. ಇದರಿಂದ ಅತ್ಯಂತ ಸಂತೋಷಗೊಂಡ ಬಿಜ್ಜಳ ನನ್ನ ಸಕಲ ಒಡೆತನಕ್ಕೆ ನೀನೆ ಒಡೆಯನೆನುತಾ,

"ಈ ಪುರುಷನಲ್ಲಾ ಯುಗಾದಿಮ
ಹಾಪುರುಷರಿಗೆ, ಮೊದಲ ಪುರುಷನು
ಈ ಪುರುಷನಲ್ಲಾ ತ್ರಿಪುರುಷ ಗುಣತ್ರಯದ ಪುರುಷ
ಈ ಪುರುಷನಲ್ಲಾ ತ್ರಿಭುವನ
ಸ್ಥಾಪನಾಚಾರ್ಯಕ್ಕೆ ಪುರುಷನು
ಈ ಪುರುಷನೈತಂದನಿಂದೆಮ್ಮಂ ಸಲಹೆಲೆಂದು"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೫.ಪ.೬೨)

ಈ ಹೊಸ ಅಂಶಗಳನ್ನು ವಿಸ್ತಾರನುವಾದದಲ್ಲಿ ಸೇರಿಸಿದ ಉದ್ದೇಶ ಬಸವಣ್ಣನನ್ನು ಒಬ್ಬ ಮಹಿಮಾ ಪುರುಷನೆಂದು ತೋರಿಸುವುದಾಗಿದೆ. ಈ ವಿಚಾರದಲ್ಲಿ ಇಂತಹ ಅನುವಾದಗಳ ಮೂಲಕ ಭೀಮಕವಿ ಯಶಸ್ವಿಯೂ ಆಗುತ್ತಾನೆ.

ಅಲ್ಲಮಪ್ರಭುವು ಬಸವಣ್ಣನಲ್ಲಿಗೆ ಬಂದಾಗ ಹರಿವಾಣದಲ್ಲಿ ಪಂಚಭಕ್ಷ್ಯಾನ್ನಗಳನ್ನು ಎಲ್ಲಾ ರೀತಿಯ ಪದಾರ್ಥಗಳನ್ನು ಪ್ರಭುವಿಗೆ ಬಡಿಸುತ್ತಾನೆ. ಪ್ರೀತಿಯಿಂದ ಆರೋಗಿಸಿದ ಪ್ರಭುವು ಬಸವಣ್ಣನ ಜಂಗಮ ಪ್ರೀತಿ ಮತ್ತು ದಾಸೋಹದ ಸೇವೆಯನ್ನು ಮನಸಾರೆ ಕೊಂಡಾಡುತ್ತಾನೆ. ಬಸವಣ್ಣನ ಕೀರ್ತಿಯನ್ನು ಹೊಗಳುವಾಗ ಸೋಮನಾಥನ ದ್ವಿಪಾದಗಳನ್ನು ಭೀಮಕವಿ ಒಂದೊಂದು ಷಟ್ಪದಿಯಲ್ಲಿ ವಿಸ್ತರಿಸಿ ಅನುವಾದಿಸುತ್ತಾನೆ. ಈ ಭಾಗದ ಕೆಲವು ಉದಾಹರಣೆಗಳನ್ನು ನೋಡಿ.

"ಪಂಡಿತ ಬಸವ ಸತ್ಪಾತ್ರದ ಬಸವ
ಭಂಡಾರಿ ಬಸವ ಸೌಭಾಗ್ಯದ ಬಸವ"

(ಗೂ.ವೆಂ.ಸು.(ಸಂ),ಬ.ಪು.,ದ್ವಿ.ಆ.ಸಾ.೫೭೧-೭೨)

ಭೀಮಕವಿಯ ವಿಸ್ತಾರ ಅನುವಾದ ಹೀಗಿದೆ.

"ದಂಡನಾಯಕ ಬಸವ ವಿದ್ಯಾ
ಪಂಡಿತೋತ್ತಮ ಬಸವ ಪಶುಪತಿಯ
ಪಿಂಡ ಬಸವಾ ತ್ರಿಜಗದುದ್ಧರಣಾಭರಣ ಬಸವ
ಮಂಡಿತಾಮಳಭಕ್ತಿರತ್ನಕ
ರಂಡನೇ ಕುಸುಮಶರ ಮದವೇ
ದಂಡಕಂಠೀರವ ಬಸವ ಭಂಡಾರಿ ಬಸವಣ್ಣ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೭.ಪ.೧೯)

ಪಂಡಿತ, ಭಂಡಾರಿ, ಸೌಭಾಗ್ಯದ ಬಸವ ಎಂಬುವು ಬಸವಣ್ಣನ ಚಾರಿತ್ರ್ಯವನ್ನು ಪರಿಣಾಮಕಾರಿಯಾಗಿ ಹೇಳುವುದಿಲ್ಲವೆಂದು ಭೀಮಕವಿ ದಂಡನಾಯಕ ಎಂದೂ 'ಪಂಡಿತ' ಎಂಬುದಕ್ಕೆ ಬದಲಾಗಿ ಪಂಡಿತೋತ್ತಮ(ಪಂಡಿತರಲ್ಲೇ ಉತ್ತಮನಾದವನು) ಎಂದೂ ತ್ರಿಜಗದುದ್ಧರಣಾಭರಣ(ಮೂರು ಲೋಕಗಳನ್ನು ಉದ್ಧರಿಸುವವನೂ ಆಭರಣದಂತೆ ಶೋಭಿಸುವವನೂ), ಭಕ್ತಿರತ್ನಕ, ಕುಸುಮಶರ, ಕಂಠೀರವ ಎಂದು ಅನುವಾದಿಸುವ ಮೂಲಕ ಬಸವಣ್ಣನ ಚಾರಿತ್ರ್ಯದ ಔನ್ನತ್ಯವನ್ನು ಹೆಚ್ಚಿಸಿದ್ದಾನೆ ಭೀಮಕವಿ. ಇಂತಹ ಕೆಲವು ವಿಸ್ತಾರಾನುವಾದಗಳಿಂದ ಭೀಮಕವಿಯು ಈ ಭಾಗವನ್ನು ಹೆಚ್ಚಿಸಿದ್ದಾನೆ.

ಭಂಡಾರದ ಹಣವನ್ನು ಶಿವಭಕ್ತರಿಗೆ ಕೇಳಿದಷ್ಟು ಕೊಟ್ಟು ಹಾಳುಮಾಡುತ್ತಿದ್ದಾನೆಂದು ರಾಜನಿಗೆ ದೂರು ನೀಡುವ ಸಂದರ್ಭ ಹೀಗಿದೆ. ಬಸವಣ್ಣ ಅರಮನೆಯ ಪೆರ್ಬಲಕೆ (ಕೆಲಸಗಾರರಿಗೆ) ಸಂಬಳವನ್ನು ನೀಡುವಾಗ ಅವರು ಕೇಳಿದಷ್ಟನ್ನು ಬಸವಣ್ಣ ನೀಡುತ್ತಾನೆ. ಇದನ್ನು ಕಂಡ ಅರಮನೆಯ ಇತರರು,

"ದಂತ್ರಸಮೇಲ್ಯೈ ಧರಣೀಶುಕಡಕು
ಮಂತ್ರವರ್ಗ್ಗಂ ಬೋಂಗಿ ಮಜೆಯಿಟ್ಟು ಲನಿರಿ"

(ಗೂ.ವೆಂ.ಸು.(ಸಂ),ಬ.ಪು.,ಬ.ಪು.ತೃ.ಆ.ಸಾ.೧೧-೧೨)

(ತನ್ನ ಸೇವಕ ವರ್ಗ ಸಮೇತವಾಗಿ ಧರಣೀಶನಾದ ಬಿಜ್ಜಳನ ಬಳಿಗೆ ಮಂತ್ರಿ ವರ್ಗವು ಹೋಗಿ ಹೀಗೆಂದರೆ)

ಇದರ ಬಗೆಗೆ ಭೀಮಕವಿಯ ಅನುವಾದ:

"ಕಾಳಿಮರಸಂ ಕರಿಯಕೇಶವ
ಚೋಳಿಯಣ್ಣಂ ಕುಂದತಮಿಭೂ
ಪಾಳ ಹೆಮ್ಮಡಿಯುಗ್ರಚಂಡಿಯು ಕಸವಮಂತ್ರಿಗಳು
ಮೇಳಿ ಗರಸನು ಸಹಿತ ತಮ್ಮೊಳು
ಮೇಳವಿಸಿ ಬಿಜ್ಜಳ ಮಹೀಶಗೆ
ಹೇಳಿದರು ದೂಜೆದರು ಬಸವಣದಂಡನಾಯಕ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೧೦.ಪ.೪)

ಸೋಮನಾಥ 'ಮಂತ್ರಿವರ್ಗ' ಎಂದು ಹೇಳಿ ಸುಮ್ಮನಾಗುತ್ತಾನೆ. ಆದರೆ ಭೀಮಕವಿಯು ಅಲ್ಲಿನ ಮಂತ್ರಿ ವರ್ಗವನ್ನು ಅವರ ಹೆಸರುಗಳನ್ನು ಹೇಳಿ ಬಿಜ್ಜಳನ ಮಂತ್ರಿಗಳ ಪರಿಚಯವನ್ನು ಮಾಡುತ್ತಾನೆ. ಕಾಳಿಮರಸ, ಕರಿಯ ಕೇಶವ, ಚೋಳಿಯಣ್ಣ, ಕುಂದತಮಿಭೂಪಾಲ, ಉಗ್ರಚಂಡಿ, ಕಸವ ಮಂತ್ರ, ಗರಸ ಇಲ್ಲಿ ಹೆಸರಿಸದವರಲ್ಲಿ 'ಕಸವ ಮಂತ್ರಿಗಳು' ಎಂಬುವರು ಪ್ರಾಚೀನ ಕಾಲದ

ಶಿಕ್ಷಣವನ್ನು ಹೇಳುವ ಚಾಲುಕ್ಯ ಅರಸರ ಕಾಲದ ದಾಖಲೆಯಾದ 'ಕೋಡಿಮಠ' ಶಾಸನದಲ್ಲಿ ಕಸಪಯ್ಯಮಂತ್ರಿ ಎಂದು ಉಲ್ಲೇಖಗೊಂಡವರೇ ಆಗಿದ್ದಾರೆ. ಈ ಶಾಸನದಲ್ಲಿ ಬಿಜ್ಜಳನು ಶಿಕ್ಷಣಕ್ಕೆ ನೀಡದ ಪ್ರೋತ್ಸಾಹದ ಕುರಿತು ಮಾಹಿತಿಯಿದೆ. ಹೀಗೆ ಭೀಮಕವಿಯು ಕೆಲವೊಂದು ನಿಖರವಾದ ಮಾಹಿತಿಗಳನ್ನು ತನ್ನ 'ಬಸವಪುರಾಣ'ದಲ್ಲಿ ನೀಡುತ್ತಾನೆ.

ಭೀಮಕವಿಯು ಸೋಮನಾಥನ ಮೂಲದ ಐದನೇ ಆಶ್ವಾಸದ ಕೊನೆಯವರೆಗೂ ಚಚೂ ತಪ್ಪದೆ ಅನುಸರಿಸುತ್ತಾನೆ. ಕೆಲವೊಂದು ಮುಗ್ಧಭಕ್ತರ ಕಥೆಗಳನ್ನು ಹಿಂದುಮುಂದಾಗಿಸಿದುದ್ದನ್ನು ಬಿಟ್ಟರೆ ಉಳಿದಂತೆ ಸೋಮನಾಥನ ಕಥಾ ಹಂದರವೇ ಭೀಮಕವಿಯಲ್ಲೂ ಇದೆ. ಈ ನಿಯಮವನ್ನು ತನ್ನ ಪುರಾಣದ ಐದನೆಯ ಕಾಂಡ ೩೩ನೇ ಸಂಧಿಯವರೆಗೆ ಅನುಸರಿಸಿದ್ದಾನೆ. ಮೂಲದಲ್ಲಿ ತೆಲುಗು ಜೊಮ್ಮಯ್ಯನ ಕಥೆಗೆ ಐದನೇ ಆಶ್ವಾಸ ಮುಗಿಯುತ್ತದೆ. ಆದರೆ ಭೀಮಕವಿ ಬಸವಣ್ಣನ ಭಕ್ತಿಯ ಪ್ರಭಾವಲಯ, ಜಂಗಮಪ್ರೇಮದ ಮಹತ್ವವನ್ನು ತಿಳಿಸುವ ಮಹಾದಾಸೆಯಿಂದ ಐದನೇ ಕಾಂಡಕ್ಕೆ ಮತ್ತೆರಡು ಹೊಸ ಕಥೆಗಳನ್ನು ಸೇರಿಸುತ್ತಾನೆ. ಅವುಗಳೆಂದರೆ, ೧. ಶಿವಯೋಗ ನಿದ್ರಾಮುದ್ರೆಯ ಕಥೆ ೨. ಕಿನ್ನರಯ್ಯಗಳ ಪ್ರಾಣದಾನದ ಕಥೆ ಈ ಎರಡು ಹೆಚ್ಚುವರಿ ಕಥೆಗಳೊಂದಿಗೆ ಭೀಮಕವಿಯ ಐದನೆಯ ಕಾಂಡವು ಮುಗಿಯುತ್ತದೆ.

ಐದನೆಯ ಕಾಂಡದ ಅನಂತರ ಆರನೆಯ ಕಾಂಡವು ಸಂಪೂರ್ಣವಾಗಿ ಭೀಮಕವಿ ಸ್ವಂತ ಸೃಷ್ಟಿ. ಇಲ್ಲಿನ ಯಾವ ಕಥೆಯು ಮೂಲದಲ್ಲಿಲ್ಲ. ಈ ಹೊಸ ಕಥೆಗಳ ಸೇರ್ಪಡೆಗೆ ಪ್ರಮುಖವಾಗಿ ಎರಡು ಕಾರಣಗಳಿರಬಹುದು. ೧. 'ಬಸವಪುರಾಣ'ದ ಶರಣರ ಕಥೆಗಳನ್ನು ಪಾಲ್ಕುರಿಕೆ ಸೋಮನಾಥ ಶ್ರೀಶೈಲಕ್ಕೆ ಬಂದ ವಿವಿಧ ಯಾತ್ರಾತ್ರಿಗಳಿಂದ ಕೇಳಿ ತಿಳಿದದ್ದು. ಆ ಕಾರಣವಾಗಿ ಈ ಆರನೆಯ ಕಾಂಡದಲ್ಲಿ ಬರುವ ಶರಣರ ಕುರಿತು ಸೋಮನಾಥನಿಗೆ ತಿಳಿಯದೇ ಇರುವುದು. ೨. ಭೀಮಕವಿಯು ಕರ್ನಾಟಕದಲ್ಲಿ ಬೆಳೆದುದು ಕನ್ನಡ ಪರಿಸರದಲ್ಲಿ ಜೀವಿಸಿದ್ದರಿಂದ ಇವನಿಗೆ ಈ ಶರಣರ ವಿಷಯಗಳು ತಿಳಿದು ಇವರ ಚರಿತ್ರೆಯು ಪ್ರಮುಖ ಎನಿಸಿರುವುದರಿಂದ ಭೀಮಕವಿ ಸೇರಿಸಿರಬಹುದು. ಭೀಮಕವಿಯು ಹೊಸದಾಗಿ ಸೇರಿಸಿದ ಕಥೆಗಳಲ್ಲಿ ಕೆಲವೊಂದು ಸೋಮನಾಥನ ಪಂಡಿತಾರಾಧ್ಯ ಚರಿತೆಯಲ್ಲಿ ರಚನೆಗೊಂಡಿವೆ. ಹಾಗಾಗಿ ಸೋಮನಾಥನಿಗೆ 'ಬಸವಪುರಾಣಮು' ರಚನಾ ಕಾಲಕ್ಕೆ ಇವರ ಕುರಿತು ಮಾಹಿತಿಯಿಲ್ಲ. ಅನಂತರ ಪಂಡಿತಾರಾಧ್ಯರ ಚರಿತ್ರೆಯನ್ನು ರಚಿಸುವಾಗ ಇವರ ಕುರಿತು ಕಥೆಗಳು ಹೆಚ್ಚು ಪ್ರಚಾರದಲ್ಲಿತ್ತು ಎನಿಸುತ್ತದೆ. ಹಾಗಾಗಿ ಅವರ ಕಥೆಗಳನ್ನು 'ಪಂಡಿತಾರಾಧ್ಯ ಚರಿತ್ರೆ'ಯಲ್ಲಿ ಸೇರಿಸಿದ್ದಾನೆ. ಭೀಮಕವಿ ಪಂಡಿತಾರಾಧ್ಯ ಚರಿತ್ರೆಯ ರಚನೆಯ ನಂತರ ಕಾಲದಲ್ಲಿ ತನ್ನ ಪುರಾಣವನ್ನು ರಚನೆ ಮಾಡಿರುವುದರಿಂದ ಹೊಸ ಕಥೆಗಳನ್ನು ಈ 'ಪಂಡಿತಾರಾಧ್ಯ ಚರಿತ್ರೆ'ಯಿಂದಲೂ ಎರವಲು ಪಡೆದಿರಬಹುದು.

ಭೀಮಕವಿ ಹೊಸದಾಗಿ ತನ್ನ ವಿಸ್ತಾರಾನುವಾದದಲ್ಲಿ ಸೇರಿಸಿರುವ ಹೊಸ ಕಥೆಗಳು ಕೆಳಗಿನಂತಿವೆ:

೧. ಮಾಯಿದೇವಿಯ ಮುತ್ತಿನ ಓಲೆಯನ್ನು ಬೇಡಿದ ಜಂಗಮನಿಗೆ ನೀಡಿದ ಕಥೆ

೨. ಶಿವಯೋಗ ನಿದ್ರಾಮುದ್ರೆಯ ಕಥೆ(ಜಂಗಮಪ್ರಾಣಿ ಕಥೆ)

೩. ಕಿನ್ನರಯ್ಯಗಳ ಪ್ರಾಣವ ಪಡೆದ ಕಥೆ

೪. ತಂಗಟೂರಿ ಮಾರಿದೇವನ ಕಥೆ

೫. ನುಲಿಯ ಚಂದಯ್ಯನ ಕಥೆ

೬. ಕೊಂಡಗುಳಿ ಕೇಶಿರಾಜನ ಕಥೆ

೭. ಮೇದಾರ ಕೇತಯ್ಯನ ಕಥೆ

೮. ದಸರಯ್ಯನ ಕಥೆ

೯. ಗುರುಭಕ್ತಯ್ಯನ ಕಥೆ

೧೦. ಗುರುಭಕ್ತಾಂಡರಿಯ ಕಥೆ

೧೧. ಶ್ವೇತನ ಕಥೆ

೧೨. ಮಲುಹಣನ ಕಥೆ

೧೩. ಓಹಿಲಯ್ಯನ ಕಥೆ

೧೪. ಉದ್ಭಟದೇವನ ಕಥೆ

೧೫. ವೇಮನರಾಧ್ಯರ ಕಥೆ

೧೬. ಚಿಕ್ಕಮಾದಣ್ಣನ ಕಥೆ

೧೭. ಕದಿರೆ ರೇವಣ್ಣನ ಕಥೆ

೧೮. ಕಜ್ಜಾಯದ ಪವಾಡದ ಕಥೆ

ಈ ಮೇಲಿನ ಕಥೆಗಳಲ್ಲಿ 'ಪಂಡಿತಾರಾಧ್ಯ ಚರಿತ್ರೆ'ಯಲ್ಲಿರುವ ಕಥೆಗಳೆಂದರೆ ೧. ದಸರಯ್ಯನ ಕಥೆ ೨. ಗುರುಭಕ್ತಯ್ಯನ ಕಥೆ ೩. ಗುರುಭಕ್ತಾಂಡರಿ ಕಥೆ ೪. ಶ್ವೇತನ ಕಥೆ ೫. ಮಲುಹಣನ ಕಥೆ ೬. ಓಹಿಲಯ್ಯನ ಕಥೆ ೬. ಉದ್ಭಟ ರೇವನ ಕಥೆ ೮. ವೇಮನಾರಾಧ್ಯರ ಕಥೆ ೯. ಕದಿರೆ ರೇವಣ್ಣನ ಕಥೆ. ಉಳಿದ ಕಥೆಗಳು ಭೀಮಕವಿಯ ಸ್ವಂತ ಸೃಷ್ಟಿಯ ಕಥೆಗಳು. ಹೀಗೆ ಈ ಮೇಲಿನ ಕಥೆಗಳು ವಿಸ್ತಾರಾನುವಾದದಲ್ಲಿ ಸೇರಿಕೊಂಡಿವೆ.

'ಬಸವಪುರಾಣ'ದ ಕೊನೆಯ ಭಾಗದಲ್ಲಿ ಜಗದೇವ ದಂಡನಾಯಕನ ಕಥೆಯಲ್ಲಿ ಬಸವಣ್ಣನನ್ನು ಆರೋಗಣೆಗೆ ಕರೆದು ವಿಪ್ರರಿಗೆ ಮೊದಲು ದಾಸೋಹವನ್ನು ನೀಡುತ್ತಾನೆ. ಇದು ತಿಳಿದ ಬಸವಣ್ಣ ತುಂಬಾ ಕೋಪಿಷ್ಟನಾಗಿ ಜಗದೇವನನ್ನು ನಿಂದಿಸುತ್ತಾನೆ. ಶಿವನನ್ನು ಪೂಜಿಸುವ ಕೈಗಳಿಂದ ವಿಪ್ರರ

ಕಾಲು ತೊಳೆದ ಜಗದೇವನ ಕ್ರಮವನ್ನು ತಪ್ಪು ಎಂಬುದನ್ನು ಹೇಳುತ್ತಾ ಹಲವು ರೀತಿಯಲ್ಲಿ ಶಿವಪಾರಮ್ಯವನ್ನು ಕುರಿತು ಹೇಳುತ್ತಾನೆ. ಇದರಿಂದ ಮನನೊಂದ ಜಗದೇವ ತಪ್ಪಿನ ಅರಿವಾಗಿ ಪ್ರಾಯಶ್ಚಿತ್ತಕ್ಕಾಗಿ ಬಸವಣ್ಣನಿಗೆ ಕೇಳುವ ಮಾತನ್ನು ಸೋಮನಾಥ ಹೀಗೆ ಹೇಳುತ್ತಾನೆ:

"ಗರ್ಮಬದ್ಧುಂಡು ನೈತಿಂಗಪ್ಪುಂಡ ಖಲುಂಡ
ದುರ್ಮದೋಪೇತುಂಡ ದುಷ್ಕೃತಾಲಯುಂಡಂ
ಬ್ರಜ್ಞಾವಿಹೀನುಂಡ ಬರಮ ಪಾತಕುಂಡ
ನಜ್ಞಾನಿ ನಧಿಕ ಸರ್ವಾಪರಾಧುಂಡ
ಶಂಕಮಾಲಿನ ಯನಾಚಾರುಂಡ ದೀನಿ
ಕಿಂಕಂ ಬ್ರಾಯಶ್ಚಿತ್ತ ಮೇಮಿಯು ಲೇದು
ಪಾನ ಲೇಟಿಕಿ ವಿಡ್ತುಂ ಬ್ರಾಣಂಬುಗೆಲಸ
ಮಾನತಿಯಿಂಡು ನಾಕನಿ ಮ್ರೊಕ್ಕಿ ನಿಲುವಂ"

(ಗೂ.ವೆಂ.ಸು.(ಸಂ),ಬ.ಪು.,.ಸ.ಆ.ಸಾ.೬೪೩-೬೫೦)

(ಕರ್ಮಬದ್ಧನಾದೆ, ಧರ್ಮವನ್ನು ಪಾಲಿಸದೆ ದುಷ್ಕೃತ್ಯವೆಸಗಿದೆನು. ಬ್ರಹ್ಮವಿಹಿನನಾದೆ, ಪರಮ ಪಾತಕನಾದೆ, ಅಜ್ಞಾನಿಯಾಗಿ ಸರ್ವಪರಾಧಗಳನ್ನು ಮಾಡಿದೆ. ಶಂಕೆಯಿಲ್ಲದೆ ಅನಾಚಾರಿಯಾದೆ. ಇನ್ನು ಪ್ರಾಯಶ್ಚಿತ ಯಾವುದೂ ಇಲ್ಲ. ಅದಕ್ಕಾಗಿ ಪ್ರಾಣವನ್ನು ಬಿಡುವೆನು. ನನಗೆ ಅಪ್ಪಣೆಯನ್ನು ನೀಡೆಂದು ಕೈಮುಗಿದು ನಿಂತನು)

ಸೋಮನಾಥ ಜಗದೇವನ ಈ ವೇದನೆಯ ಮಾತುಗಳಿಗಿಂತ ಭೀಮಕವಿ ತುಂಬಾ ಶೋಕಭರಿತನಾಗಿ ಈ ಸನ್ನಿವೇಶವನ್ನು ಮೂರು ಷಟ್ಪದಿಗಳಲ್ಲಿ ವಿಸ್ತರಿಸುತ್ತಾನೆ.

"ಎನ್ನನೇನಂ ಮಾಡಿಕೊಂಬೆನೊ
ಎನ್ನ ದೋಷಕ್ಕಾವುದೋ ವಿಧಿ
ಯೆನ್ನ ಭಕ್ತಿವಿಹೀನತೆಗೆ ಪರಿಹಾರವೆಂತಹುದೋ
ಪನ್ನಗೇಂದ್ರಾಹುತಿಗೆ ಬೀಳ್ವೆನೊ
ಛಿನ್ನ ಛಿನ್ನಂ ಕುಡಿದುಕೊಂಬೆನೊ
ಎನ್ನವೊಡಲಂ ಲಿಂಗಪೂಜಾನಿಷ್ಠೆಯಿಲ್ಲದಕೆ"

"ತಿರುಗಿ ಬಾಹೆನೊ ಧರೆಯನೆಲ್ಲವ
ನುರಿವ ಬೇಗೆಯೊಳೆಯ್ದೆ ಬೇವೆನೊ
ಶರಧಿಯೊಳು ಮಕರಾಶನಕ್ಕೆನೊಡಲನಿಕ್ಕುವೆನೊ

ಗಿರಿಯ ಶಿಖರವನೇಜೆ ಕೆಡೆವೆನೊ
ದುರುಳ ಮದಕರಿಗಾಂತು ಮಡಿವೆನೊ
ಗುರುಭಜನಯಿಲ್ಲದಕೆ ಶಾಂತಿಯದಾವುದವಧರಿಸಿ”

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೩೯.ಪ.೫೭.೫೮)

ಇಲ್ಲಿನ ಜಗದೇವನ ನೋವಿನ ನುಡಿಗಳು ಮನಸ್ಸಿಗೆ ನಾಟುವಂತಿವೆ. ಭೀಮಕವಿಯ ಈ ಮಾತುಗಳು ಸಂದರ್ಭಕ್ಕೆ ತಕ್ಕನಾದ ಅರ್ಥವನ್ನು ನೀಡುತ್ತವೆ. ಜಗದೇವನ ಈ ಪ್ರಾಯಶ್ಚಿತಕ್ಕೆ ಪರಿಹಾರವಾಗಿ ಬಸವಣ್ಣ ಇನ್ನು ಕೆಲ ದಿನಗಳಲ್ಲಿ ಶಿವದ್ರೋಹವೊಂದು ನಡೆಯುವುದು. ಆಗ ಆ ಶಿವದ್ರೋಹ ಮಾಡಿದವನನ್ನು ಕೊಂದು ಪ್ರಾಯಶ್ಚಿತವನ್ನು ಮಾಡಿಕೊ ಎಂದು ತ್ರಿಕಾಲಜ್ಞಾನಿಯಂತೆ ಹೇಳುವನು.

ಇದಾದ ಕೆಲ ದಿನಗಳಲ್ಲಿ ಬಿಜ್ಜಳ ಹರಳಯ್ಯ, ಮಧುವರಸರ ಕಣ್ಣುಗಳನ್ನು ಕೀಳಿಸುತ್ತಾನೆ. ಆಗ ಬಸವಣ್ಣ ಜಗದೇವನನ್ನು ಕರೆದು “ಮುನ್ನಿನ ಭಾಷೆಯಂ ಸಲಿಸಿನ್ನು ತದ್ರೋಹಿಯನಪಹರಿಸಿ ನನ್ನಿಯಂ ಮೆರೆ ಎನುತ” ಹೇಳಿ ತಾನು ಕಲ್ಯಾಣವನ್ನು ತೊರೆಯುತ್ತಾನೆ. ನಂತರ ಜಗದೇವನ ತಾಯಿ ಶಿವದ್ರೋಹಿಯನ್ನು ಕೊಲ್ಲದೇ ಮನೆಗೆ ಉಣ್ಣಲು ಬಂದಿರುವೆಯಲ್ಲ ನಾಚಿಕೆಯಾಗುವುದಿಲ್ಲವೆ ಎಂದು ನಿಂದಿಸಿ ಅನ್ನವನ್ನು ಹಿತ್ತಲಿನಲ್ಲಿ ನೆಲದ ಮೇಲೆ ಹಾಕಿ ತಿನ್ನು ಎನ್ನುತ್ತಾಳೆ. ನಾಯಿಗಿಂತ ಕೀಳಾಗಿ ಹೋದ ಜಗದೇವ ಆ ಅನ್ನವನ್ನು ತಿನ್ನುವ ಸಮಯದಲ್ಲಿ ಮಲ್ಲೆಬೊಮ್ಮಯ್ಯರು ಬರುತ್ತಾರೆ. ಇಲ್ಲಿಯವರೆಗೂ ಎರಡೂ ಪುರಾಣಗಳ ಕಥೆಯು ಏಕರೀತಿಯಾಗಿದೆ. ಆಮೇಲೆ ಸೋಮನಾಥನು ಮಲ್ಲೆಬೊಮ್ಮಯ್ಯರು ನೇರವಾಗಿ ಬಿಜ್ಜಳ ಆಸ್ಥಾನಕ್ಕೆ ಬಂದು ಬಿಜ್ಜಳನನ್ನು ಹಿಡಿದು ಕೊಲ್ಲುತ್ತಾರೆ ಎಂದು ಒಂದೇ ಮಾತಿನಲ್ಲಿ ಹೇಳುತ್ತಾನೆ. ಆದರೆ ಭೀಮಕವಿಯು ಶಿವಶರಣ ದ್ರೋಹ ಮಾಡಿದವನನ್ನು ಕೊಲ್ಲಲು ಸಿದ್ಧರಾದ ಜಗದೇವ, ಮಲ್ಲೆಬೊಮ್ಮರ ಉಡುಪು, ಕತ್ತಿ, ಕಠಾರಿಗಳ ಸಮೇತ ದಾರಿಯಲ್ಲಿ ಹೋಗುವುದು, ದಾರಿಯಲ್ಲಿ ಇವರಿಗೆ ಸಿಕ್ಕ ಗೌರವ, ಎದುರು ಬಂದ ತುರುಗ, ಗಜಾವಳಿಗಳನ್ನು ಕೊಲ್ಲುವ ರೀತಿ, ದ್ವಾರ ಬಾಗಿಲುಗಳಲ್ಲಿದ್ದ ದ್ವಾರಪಾಲಕರನ್ನು ಕೊಲ್ಲುತ್ತಾರೆ. ನಂತರ,

“ಲಾಳ ಮಾಳವ ಗೌಳ ಕುರು ನೇ
ಪಾಳ ಖರ್ಪರ ಬರ್ಬರಂ ಪಾಂ
ಚಾಳ ಗುರ್ಜರ ಸಿಂಹಳಂ ಭೂಪಾಳರೋಲೈಸೆ
ಸಾಲ ಕೈದೀವಿಗೆಗಳಿಕ್ಕೆಲ
ದಾಲವಟ್ಟಂ ಚವರ ಕುಂಚಂ
ಥಾಳಯಿಸೆ ಗದ್ದುಗೆಯ ಮೇಲಿಹ ಬಿಜ್ಜಳನ ಕಂಡು”

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೬೦.ಪ.೩೦)

ಹೀಗೆ ಜಗದೇವ ಮತ್ತು ಮಲ್ಲೆಬೊಮ್ಮರು ಬಿಜ್ಜಳನನ್ನು ಕೊಲ್ಲಲು ಬರುವ ಸನ್ನಿವೇಶವನ್ನು ಸುಮಾರು ಹತ್ತು ಷಟ್ಪದಿಗಳಲ್ಲಿ(ಸಂ.೬೦.ಪ.೨೧ರಿಂದ ೩೦) ವಿಸ್ತರಿಸಿದ್ದಾನೆ. ಆನಂತರ ಬಿಜ್ಜಳನನ್ನು ಕತ್ತಿಗಳಿಂದ ಹಿರಿದು ಕೊಲ್ಲುವ ಚಿತ್ರಣವನ್ನು ಸೋಮನಾಥನಂತೆಯೇ ಚಿತ್ರಿಸಿದ್ದಾನೆ. ಭೀಮಕವಿಯ ಈ ವಿಸ್ತರಣೆಗೆ ಪ್ರಮುಖ ಕಾರಣ ಈ ಸಂದರ್ಭವನ್ನು ವೀರರಸ ಪ್ರಧಾನವಾಗಿ ಚಿತ್ರಿಸುವುದಾಗಿದೆ. ಅಷ್ಟು ಮಾತ್ರವಲ್ಲ, ಸಾಮಾನ್ಯರಾದ ಈ ಶರಣರು ಒಬ್ಬ ರಾಜನನ್ನು ಕೊಲ್ಲುವುದು ವಿಶೇಷವಾದ್ದರಿಂದ ಅವರ ವೀರ ಪರಾಕ್ರಮವನ್ನು ಚಿತ್ರಿಸುವುದು ಭೀಮಕವಿಯ ಉದ್ದೇಶವಾಗಿರಬಹುದು. ಹೀಗೆ ಸನ್ನಿವೇಶ ಪಾತ್ರಚಿತ್ರಣಗಳನ್ನು ಸಂದರ್ಭಕ್ಕನುಗುಣವಾಗಿ ಭೀಮಕವಿ ವಿಸ್ತರಿಸಿದ್ದಾನೆ.

ಹಾಗೆಯೇ ಸೋಮನಾಥನಲ್ಲಿದ್ದ ಸ್ತೋತ್ರ ಭಾಗವು ಭೀಮಕವಿಯಲ್ಲಿ ಬಂದಿದೆ. ಇದು ಕೂಡ ವಿಸ್ತಾರವಾದ ಭಾಗವೇ ಆಗಿದೆ. ಈ ಸ್ತೋತ್ರ ಭಾಗವು ಅರವತ್ತನೆಯ ಸಂಧಿಯ ೪೨ನೇ ಪದ್ಯದಿಂದ ೫೪ನೇ ಪದ್ಯದವರೆಗೆ ವಿಸ್ತರಿಸಿಕೊಂಡಿದೆ. ನಂತರದ ಕಥೆಯು ಎರಡು ಪುರಾಣಗಳಲ್ಲಿ ಸಮಾನವಾಗಿ ಮೂಡಿಬಂದಿದೆ.

**೭.೩. ಭಾವಾನುವಾದ :**

ಕನ್ನಡ 'ಬಸವಪುರಾಣ'ದಲ್ಲಿ ಭಾವಾನುವಾದವಾಗಿರುವ ಸನ್ನಿವೇಶಗಳು ಇಲ್ಲವೇ ಇಲ್ಲವೆನ್ನುವಷ್ಟರ ಮಟ್ಟಿಗೆ ಇದೆಯಾದರೂ ಕೆಲವೊಂದೆಡೆಗಳಲ್ಲಿ ಭಾವಾನುವಾದವಾಗಿರುವ ಪದ್ಯಗಳ ಛಾಯೆಯನ್ನು ಗುರುತಿಸಬಹುದಾಗಿದೆ. ಹೀಗೆ ಭಾವಾನುವಾದವಾಗಿರುವ ಒಂದು ಸನ್ನಿವೇಶವನ್ನು ಕೆಳಗೆ ನೀಡಿದೆ. ಇದು ಚೆನ್ನಬಸವಣ್ಣನು ಬಸವಣ್ಣನನ್ನು ಸ್ತುತಿಸಿದ ಸಂದರ್ಭ.

"ಶಾಶ್ವತ ಸರ್ವಜ್ಞ ಶಶ್ವದ್ಗುಣಾಂಕ
ವಿಶ್ವೇಶ ಶ್ರೀ ಗುರುವೇ ನಮೋಯನುಚು
"ಸದ್ಯಃ ಪ್ರಸನ್ನಾನವದ್ಯವೇದಾಂತ
ವೇದ್ಯಾತ್ಮ ಶ್ರೀಗುರುವೇ ನಮೋಯನುಚು
"ದತ್ತಕೈವಲ್ಯ ಯುದಾತ್ತಸದ್ಭಕ್ತಿ
ವಿತ್ತೇಶ ಶ್ರೀಗುರುವೇ ನಮೋ"ಯನುಚು
ನಮಿತ ಪರಂಜ್ಯೋತಿರಾಕಾರ ದಿವ್ಯ
ವಿಮಲಾಂಗ ಶ್ರೀ ಗುರುವೇ ನಮೋ"ಯನುಚು
ಸ್ಥಿರತರಸೃಷ್ಟಿಸ್ಥಿತಿಲಯ ಪ್ರಪಂಚ
ವಿರಹಿತ ಶ್ರೀ ಗುರುವೇ ನಮೋಯನುಚು
ಸಕಳ ನಿಷ್ಕಳ ಚರಾಚರರೂಪವಿಗತ
ವಿಕೃತಾಂಗ ಶ್ರೀ ಗುರುವೆ ನಮೋಯೆನುತ

ನಾದ್ಯಂತರಹಿತನಿತ್ಯಾಮಲ ತೇಜ
ವಿದ್ಯಾತ್ಮ ಶ್ರೀ ಗುರುವೇ ನಮೋಯನುಚು"

(ಗೂ.ವೆಂ.ಸು.(ಸಂ),ಬ.ಪು.,ದ್ವಿಆ.ಸಾ.೨೯೧-೩೦೪)

ಭೀಮಕವಿಯ ಭಾವಾನುವಾದ ಹೀಗಿದೆ.

"ಮಾನಿತಧುವಕೀರ್ತಿ ಸರ್ವ
ಜ್ಞಾನ ಶಾಶ್ವದ್ಗುಣಗಣಾಂಕಾ
ನೂನ ವಿಶ್ವೇಶ್ವರ ಮಹಾತ್ಮ ಶ್ರೀಗುರುವೆ ಜಯತು
ಧ್ಯಾನನಿಧಿಸದ್ಯಪ್ರಸನ್ನ ಸ
ದಾನವದ್ಯಾಗಮರಹಸ್ಯನಿ
ಧಾನ ತತ್ವಕಳಾದಿವೇತ್ತ ಶ್ರೀ ಗುರುವೆ ಜಯತು"

"ದತ್ತ ಮಹದಿಪವರ್ಗಮಹಿಮೋ
ದಾತ್ತ ಸದ್ಭಕ್ತಿಪ್ರಪೂರಿತ
ಚಿತ್ತನಾಥ ಅನಾಥನಾಥಾ ಶ್ರೀಗುರುವೆ ಜಯತು
ಉತ್ತಮಜ್ಯೋತಿರ್ಮಯಾ ವು
ತ್ಪತ್ತಿ ಗುಪ್ತಿ ವಿಪತ್ತಿರಹಿತ ಜ
ಗತ್ತಿಮಿರಹರಣಪ್ರದೀಪ ಶ್ರೀಗುರುವೆ ಜಯತು"

"ಚಿರ ಸಕಳ ನಿಃಕಳ ಚರಾಚರ
ಪರಮರೂಪು ವಿರೂಪತತ್ಪರ
ಪರವಗತ ವಿಕೃತಾಂಗ ನಿತ್ಯ ಶ್ರೀಗುರುವೆ ಜಯತು
ನಿರುಪಮಿತಪದ ಆದಿಮಧ್ಯಾಂ
ತರಹಿತಪ್ರಕಟೋರುತೇಜ
ಸ್ಫುರಣ ವಿದ್ಯಾತ್ಮಪ್ರಗಲ್ಭ ಶ್ರೀಗುರುವೆ ಜಯತು"

(ಎಸ್.ವಿದ್ಯಾಶಂಕರ(ಸಂ),ಪು.ಸಂ.೬.ಪ.೪೫,೪೬,೪೭)

ಮುಂದುವರೆದಂತೆ ಸೋಮನಾಥನ ಸ್ತುತಿ ಪದ್ಯಗಳು(ಪಾ.ಸೋ.ದ್ವಿಆ.ಸಾ.೪೭೬ರವರೆಗೆ) ಭೀಮಕವಿಯಲ್ಲಿ ಮುಂದುವರೆದ ಪದ್ಯಗಳು(ಭೀ.ಸಂ.೬.ಪ.೪೮ ರಿಂದ ೫೧ರವರೆಗೆ) ಭಾವಾನುವಾದದ ಛಾಯೆಯಲ್ಲಿಯೇ ಮೂಡಿಬಂದಿದೆ.

೭.೪. ಸಂಕ್ಷಿಪ್ತ ಅನುವಾದ :

ಕನ್ನಡ 'ಬಸವಪುರಾಣ'ದಲ್ಲಿ ಸಂಕ್ಷಿಪ್ತ ಅನುವಾದವಾಗಿರುವ ಭಾಗಗಳ ತುಂಬಾ ಕಡಿಮೆ. ಭೀಮಕವಿಯು ಮೂಲವನ್ನು ಸಾಕಷ್ಟು ವಿಸ್ತರಿಸಿಯೇ ಅನುವಾದ ಮಾಡಿದ್ದಾನೆ. ಕೆಲವೊಂದು ಸಂದರ್ಭಗಳಲ್ಲಿ ಸಂಕ್ಷಿಪ್ತ ಅನುವಾದ ಕಂಡುಬಂದರೂ ಅದಕ್ಕೆ ಅಲ್ಲಿನ ಸಂದರ್ಭವೇ ಕಾರಣವಾಗಿರುತ್ತದೆ. ಬಸವಣ್ಣ ಬಿಜ್ಜಳನ ಭಂಡಾರಿಯಾಗಲು ಅರಮನೆಗೆ ಬರುವಾಗ ಮೂಲದಲ್ಲಿ ಬಸವಣ್ಣನನ್ನು ಹಲವು ಬಿರುದುಗಳ ಮೂಲಕ ಸೋಮನಾಥ ಕೀರ್ತಿಸುತ್ತಾನೆ. ಆದರೆ ಭೀಮಕವಿ ಈ ಭಾಗದಲ್ಲಿ ಕೇವಲ ಎರಡು ಷಟ್ಪದಿಗಳಲ್ಲಿ ಬಸವಣ್ಣನನ್ನು ಹೊಗಳುತ್ತಾನೆ. ಕಾರಣ ಇಲ್ಲಿ ಭೀಮಕವಿಯು ಬಸವಣ್ಣನ ವ್ಯಕ್ತಿತ್ವವನ್ನು ಪುರಜನರ ಬಾಯಲ್ಲಿ ಹೊಗಳಿಸಿರುವುದೇ ಆಗಿರುತ್ತದೆ. ಪುರಜನರು ಬಸವಣ್ಣನ ರೂಪ, ಸೌಂದರ್ಯ, ಅವನ ಘನ ಮಹಿಮೆಯನ್ನು, ಹೊಗಳುವುದನ್ನು ಸಾಕಷ್ಟು ವಿಸ್ತರಿಸಿದ್ದಾನೆ. ಜೊತೆಗೆ ಕಲ್ಯಾಣದ ವೈಭವವನ್ನು, ಅವನ ಮೆರವಣಿಗೆಯ ವೈಭವವನ್ನು, ಸ್ತ್ರೀಯರು ಅವನನ್ನು ಕಾಣಲು ಪರಿತಪಿಸುತ್ತಿರುವುದನ್ನು ಸಾಕಷ್ಟು ವಿಸ್ತರಿಸಿದ್ದಾನೆ. ಈ ಕಾರಣದಿಂದಾಗಿ ಬಸವಣ್ಣನ ಬಿರುದುಗಳ ವರ್ಣನೆಯನ್ನು ಭೀಮಕವಿಯು ಸೋಮನಾಥನಿಗಿಂತ ಸಂಕ್ಷಿಪ್ತಗೊಳಿಸಿದ್ದಾನೆ. ಸೋಮನಾಥ ಬಸವಣ್ಣನನ್ನು ಕೀರ್ತಿಸಿರುವುದು ಹೀಗೆ.

"ಬಸವಕುಮಾರು ಸದ್ಭಕ್ತಿಶೃಂಗಾರು
ನಸದೃಶಾಕಾರುಂ ದತ್ತಾರ್ಥವಿಚಾರು
ನೇಕಾಂಗವೀರು ದೇಹೇಂದ್ರಿಯದೂರು
ಲೋಕನಿಸ್ತಾರ ನಲೋಕಾನುಸಾರು
ಜಂಗಮವ್ಯಾಪಾರು ಸಜ್ಜನಾಧಾರು
ಲಿಂಗಗಂಭೀರು ಗತಾಂಗವಿಕಾರು
ವಿಮಲಶಿವಾಚಾರುಂ ದ್ರಿಮಲಧಿಕ್ಕಾರು
ನಮಿತ ಮಹಾಚಾರು ನಚಲಿತಿ ಧೀರು
ವಿರಹಿತಸಂಸಾರು ವೀರಾವತಾರುಂ
ಬರಿಹೃತಾಹಂಕಾರ ಭಕ್ತಿವಿಹಾರು
ಶಿವ ಭಕ್ತಿಸಾರು ವಿಶಿಷ್ಟಪ್ರಕಾರು
ನವಿನಾಶ ಸಂಸ್ಕಾರು ನತುಲಿತಶೂರು
ವಿಪುಲಕ್ಷಮಾಗಾರು ವಿನಯ ಪ್ರಚಾರು
ಸುಪಥೈಕವಿಸ್ತಾರು ಶುದ್ಧಶರೀರುಂ
ಗುಜನವಿದಾರು ಸದ್ಗುಣಮಣಿಹಾರು
ವೃಜಿನತರುಕುಠಾರು ವಿಹಿತೋಪಕಾರು

ನತಿದಯಾಲಂಕಾ ರನಘ ಸಮುತ್ಸಾರು
ಶೃತಿಪರಿಚಾರು ನಿರ್ಮೋಹಾಂಧಕಾರುಂ
ಗೃತರಿಪುಸಂಹಾರು ದೃತನಯಾಚಾರುಂ
ಜಾರುನಿರ್ಮಲಕೀರ್ತಿ ಸತ್ಯಪ್ರಪೂರ್ತಿ
ಸಾರಸದ್ಗುಣವರ್ತಿ ಶಾಶ್ವತಮೂರ್ತಿಂ"

(ಗೂ.ವೆಂ.ಸು.(ಸಂ),ಬ.ಪು.,ದ್ವಿಆ.ಸಾ.೬೧-೮೨)

ಭೀಮಕವಿಯ ಸಂಕ್ಷಿಪ್ತ ಅನುವಾದ ಹೀಗಿದೆ:

"............ನಿಜ ಭಕ್ತಿಸಾರನನತ್ಯುದಾರನನು
ಸೂರಿಜನಮಂದಾರನಂ ಭವ
ದೂರನಂ ಕರುಣಾರಸಾಮೃತ
ಪೂರಿತಾಕಾರನನತುಳಿತಾಪಾರಶೂರನನು"

"ಚಾರು ನಿಶ್ಚಲಧೀರನಂ ಗಂ
ಭೀರಗುಣಮಣಿಹಾರನಂ ಸಂ
ಸಾರಭೂಜಕುಠಾರನಂ ಸುಜನೋಪಕಾರನನು
ವಾರಿತಾಹಂಕಾರನಂ ಹೂಂ
ಕಾರ ಮದ ದಿಕ್ಕಾರನಂ ಗತ
ಮಾರಕರ್ಮವಿಕಾರನಂ ವೀರಾವತಾರನನು"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂಧಿ.೫.ಪ.೧೫,೧೬)

ಈ ರೀತಿಯ ಕೆಲವು ಸಂಕ್ಷಿಪ್ತವಾದ ಉದಾಹರಣೆಗಳು ಅಲ್ಲಲ್ಲಿ ಸಿಗುತ್ತವೆಯಾದರೂ ಪೂರ್ಣವಾಗಿ ಎಲ್ಲಿಯೂ ಇಲ್ಲ.

**೭.೫. ವ್ಯತ್ಯಸ್ತ ಅನುವಾದ :**

ಕನ್ನಡ 'ಬಸವಪುರಾಣ'ದಲ್ಲಿ ಕೆಲವೊಂದು ಕಡೆಗಳಲ್ಲಿ ವ್ಯತ್ಯಸ್ತ ಅನುವಾದವಾಗಿರುವುದು ಕಂಡುಬರುತ್ತದೆ. ವ್ಯತ್ಯಸ್ತ ಅನುವಾದವೆಂದರೆ ಮೂಲದಲ್ಲಿಯ ಅಂಶವನ್ನು ಬೇರೆ ರೀತಿಯಲ್ಲಿ ಹೇಳಿರುವುದು. ಅಥವಾ ಹೇಳುವ ವಿಧಾನದಲ್ಲಿ ಬದಲಾವಣೆಗಳನ್ನು ಮಾಡಿಕೊಂಡಿರುವುದು. ಈ ರೀತಿಯ ಬದಲಾವಣೆಗಳ ಕೆಲವೊಂದು ಭಾಗಗಳನ್ನು ಮುಂದೆ ವಿವರಿಸಲಾಗಿದೆ.

ಪಾಲ್ಕುರಿಕೆ ಸೋಮನಾಥನು ಪುರಾಣದ ಆರಂಭದಲ್ಲಿ ಇಷ್ಟದೈವ ಸ್ತುತಿ, ಗುರುಸ್ತುತಿಗಳನ್ನು ಮಾಡಿದ ನಂತರ ತನ್ನ ಆಪ್ತವಲಯವನ್ನು ಪರಿಚಯಿಸುತ್ತಾನೆ. ಸಾಮಾನ್ಯವಾಗಿ ಪ್ರಾಚೀನ

ಕವಿಗಳು ಅಥವಾ ಮಾರ್ಗಕವಿಗಳು ದೈವಸ್ತುತಿಯ ನಂತರ ಹಿಂದಿನ ಕವಿಗಳನ್ನು ಅಥವಾ ತಮ್ಮ ಮೇಲೆ ಪ್ರೇರಣೆ ಪ್ರಭಾವಗಳನ್ನು ಬೀರಿರುವ ಕವಿಗಳನ್ನು ಹೆಸರಿಸುತ್ತಾರೆ. ಆದರೆ ಸೋಮನಾಥ ದೇಸೀ ಚಿಂತನೆಯ ಹಿನ್ನಲೆಯಲ್ಲಿ ರಚನೆ ಮಾಡಿರುವುದರಿಂದ ಕವಿಸ್ತುತಿ ಪದ್ಧತಿಯನ್ನು ಮುರಿಯುತ್ತಾನೆ. ತನ್ನೊಂದಿಗಿದ್ದ ಆಪ್ತರಾದ ಕರಸ್ಥಲಿ ಸೋಮನಾಥ, ಮಲ್ಲಿನಾಥಯ್ಯ, ರೆಂಟಾಲ ಮಲ್ಲಿನಾಥ, ದೋಚಮಾಂಜೆ ಗೋಡಗಿ ತ್ರಿಪುರಾರಿ ಎಂಬುವರನ್ನು ನೆನೆಯುತ್ತಾನೆ. ಜೊತೆಗೆ ಮಲ್ಲಿಕಾರ್ಜುನ ಪಂಡಿತಾರಾಧ್ಯರನ್ನು ಮತ್ತು ಮಂಡಿಗೆ ವಾದಿರಾಜನನ್ನು ವಿಶೇಷವಾಗಿ ನೆನೆಯುತ್ತಾನೆ. ಆದರೆ ಭೀಮಕವಿ ತಾನು ದೇಸಿಯಲ್ಲಿ ರಚನೆ ಮಾಡಿದ್ದರೂ ಮಾರ್ಗಕವಿಗಳ ಸಂಪ್ರದಾಯವನ್ನು ಮುಂದುವರೆಸುತ್ತಾನೆ. ತನ್ನ ಕಾವ್ಯವು ಸೋಮನಾಥನ ಅನುವಾದವಾಗಿದ್ದರೂ ಸೋಮನಾಥನ ಬದಲಾವಣೆಯನ್ನು ಸ್ವೀಕರಿಸುವುದಿಲ್ಲ. ದೈವಸ್ತುತಿಯ ನಂತರ ಸಾಮಾನ್ಯವಾಗಿ ಬರುವ ಕವಿಸ್ತುತಿಯಲ್ಲಿ ಮಾಡುತ್ತಾನೆ. ಭೀಮಕವಿಯು ಕವಿಸ್ತುತಿಗಿಂತ ಪೂರ್ವದ ಕೊಂಡಗುಳಿ ಕೇಶಿರಾಜ, ಶ್ರೀಪತಿಪಂಡಿತ, ಮಲ್ಲಿಕಾರ್ಜುನ ಪಂಡಿತನನ್ನು ನೆನೆದ ನಂತರ,

"ಸರಸಮೃದುಮಧುರೋಪಮೆಗಳಂ
ಕುರಿಸೆ ವಸ್ತುಕವರ್ಣಕಂಗಳ
ನೆರಪಿ ಹರನಂ ಹರಣಗಣಂಗಳನೆಯ್ದೆ ಕೀರ್ತಿಸಿದ
ಧರೆಗಹುಭಯಕವಿಶರಭಭೇರುಂ
ಡರಸುಕವಿ ಹರಿಬುಧವರನ ತ
ದ್ವರಸುತನ ರಾಘವನ ಕೃಪೆಯಂ ರಚಿಸುವೆಂ ಕೃತಿಯ"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೧.ಪ.೧೧)

ಎಂದು ಹೇಳಿ "ಶಿವಕವಿಗಳೆನಿಸಿದ ಪುರಾತನ ಕವಿಗಳಂ, ಶಿವಭಕ್ತಿ ನೂತನ ಕವಿಗಳಂ, ಶಿವ ಧರ್ಮಶಾಸ್ತ್ರ ಕಳಾವಿಶಾರದರ, ಶಿವರಹಸ್ಯ ಶಿವತತ್ವದರಂ. ಸಕಲಾಗಮಜ್ಞ ಪ್ರವರರನ್ನು ನೆನೆಯುತ್ತಾನೆ.

ಈ ವ್ಯತ್ಯಸ್ತ ಅನುವಾದಕ್ಕೆ ಕಾರಣ ಭೀಮಕವಿಯು ಕವಿಗಳ ಆಶ್ರಯದಲ್ಲಿ ಬೆಳೆದಿರುವುದು(ಸಿದ್ದನಂಜೇಶನ ರಾಘವಾಂಕ ಚರಿತೆಯ ಪ್ರಕಾರ) ಒಂದು ಕಾರಣವಾಗಿರಬಹುದು. ಅಥವಾ ಕಾವ್ಯಸ್ವರೂಪವನ್ನು ಚೆನ್ನಾಗಿ ತಿಳಿದವನಾಗಿ ಪೂರ್ವಕವಿಗಳನ್ನು ನೆನೆಯುವುದು ಸಮಂಜಸವೆಂದು ಭಾವಿಸಿ ಈ ವ್ಯತ್ಯಸ್ತ ಅನುವಾದ ಮಾಡಿದ್ದಾನೆಂದು ನಂಬಬಹುದು. ಪಾಲ್ಕುರಿಕೆ ಸೋಮನಾಥನಿಗೆ ಈ ರೀತಿಯ ಕವಿ ಆಶ್ರಯವಾಗಲಿ, ಪಂಡಿತರ ಆಶ್ರಯವಾಗಲೀ ಇರಲಿಲ್ಲ. ಅಥವಾ ಸೋಮನಾಥನೇ ಉದ್ದೇಶಪೂರ್ವಕವಾಗಿ ಪೂರ್ವಕವಿಸ್ತುತಿಯನ್ನು ನಿರಾಕರಿಸಿ ತನ್ನ ಕೃತಿ ರಚನೆಗೆ ಸಹಕರಿಸಿದ ಆಪ್ತರನ್ನು ಹೆಸರಿಸಿರಬಹುದು.

ತಂದೆ ಮಗನಿಗೆ ಮಾದಿರಾಜಯ್ಯ ಬಸವಣ್ಣನಿಗೆ ಮುಂಜಿ ಮಾಡಬೇಕೆಂದು ನಿಶ್ಚಯಿಸಿದಾಗ ಬಸವಣ್ಣ ಅದನ್ನು ತಿರಸ್ಕರಿಸುತ್ತಾನೆ. ಇದರಿಂದ ತಂದೆ ಮಗನ ನಡುವೆ ಸಾಕಷ್ಟು ವಾದವಿವಾದ

ಉಂಟಾಗುತ್ತದೆ. ವಿಪ್ರಕುಲದ ಶ್ರೇಷ್ಠತೆಯ ಬಗ್ಗೆ ತಂದೆ ವಾದಿಸಿದರೆ, ಶಿವಕುಲದ ಘನತೆಯ ಬಗ್ಗೆ ಮಗ ವಾದಿಸುತ್ತಾನೆ. ಕೊನೆಗೆ ಮಾದಿರಾಜಯ್ಯ ಮಗನ ಈ ಅಚಲ ನಿರ್ಧಾರಕ್ಕೆ ಕೋಪಗೊಂಡು,

ಯುಕ್ತಿ ಸೆಪ್ಪಿತಿ ಮಿಪ್ಪು ಡೊಲ್ಲವೈತೇನಿ
ಭಕ್ತಿಯು ನೀವುನು ಬಡ್ಡಟ್ಲು ಪಡುಮು
ಅನಿ ನಿಷ್ಠರೊಕ್ತುಲ ನಂದಂದ ಪಲುಕ

(ಗೂ.ವೆಂ.ಸು.(ಸಂ),ಬ.ಪು.ಪ್ರ.ಆ.ಸಾ.೯೨೩-೯೨೫)

(ಬುದ್ಧಿ ಹೇಳಿರುವೆ ಇನ್ನು ಭಕ್ತಿ ಬೇಡವೆಂದರೆ ನೀನಿನ್ನು ಹಾಳಾಗಿ ಹೋಗು ಎಂದು ನಿಷ್ಟುರವಾದ ಮಾತುಗಳನ್ನಾಡಿದ)

ಸೋಮನಾಥನ ಮೇಲಿನ ಮಾತುಗಳನ್ನು ಭೀಮಕವಿ ಹೀಗೆ ಹೇಳುತ್ತಾನೆ.

"ಯುಕ್ತಿಯಿಂ ಹೇಳಿದೆವು ನಿನಗೀ
ಯುಕ್ತಿಯಂ ಕಡೆಗೊಲ್ಲದಿರ್ದಡೇ
ಭಕ್ತಿಯುಂ ನೀನಿಂತು ಬಲ್ಲಂತಾಗುತಿರು ನಿನ್ನ
ಭಕ್ತತನಕಂಜುವೆವೆನುತ............"

(ಎಸ್.ವಿದ್ಯಾಶಂಕರ(ಸಂ),ಬ.ಪು.ಸಂ.೩.ಪ.೬೧)

ಇಲ್ಲಿ ಸೋಮನಾಥನು 'ಹಾಳಾಗಿ ಹೋಗು' ಎಂಬ ಕಠಿಣವಾದ ಮಾತನ್ನು ಭೀಮಕವಿಯು "ನೀನಿಂತು ಬಲ್ಲಂತಾಗಿರು" ಎಂಬ ನಿರಾಶೆಯ ನುಡಿಯಾಗಿ ಪರಿವರ್ತಿಸುತ್ತಾನೆ. ದೈವ ಸ್ವರೂಪಿ ಬಸವಣ್ಣನಿಗೆ 'ಹಾಳಾಗಿ ಹೋಗು' ಎಂದು ಹೇಳಿದರೆ ಅವನ ವ್ಯಕ್ತಿತ್ವಕ್ಕೆ ಸರಿಹೊಂದುವುದಿಲ್ಲವೆಂಬ ಕಾರಣಕ್ಕೆ ಈ ರೀತಿಯ ವ್ಯತ್ಯಾಸವನ್ನು ಭೀಮಕವಿಯು ಮಾಡಿರುವುದು ಕಂಡುಬರುತ್ತದೆ.

ಭೀಮಕವಿಯು ಶರಣರ ಹೆಸರುಗಳು ಮತ್ತು ವಿವಿಧ ಸಂದರ್ಭಗಳಲ್ಲಿ ಬರುವ ಕೆಲವು ವ್ಯಕ್ತಿಗಳ ಹೆಸರುಗಳನ್ನು ವ್ಯತ್ಯಾಸ ಮಾಡಿದ್ದಾನೆ. ಅಂತಹ ಪ್ರಮುಖ ಹೆಸರುಗಳನ್ನು ಈ ಕೆಳಗೆ ಕೊಡಲಾಗಿ:

| ತೆಲುಗು | ಕನ್ನಡ |
|---|---|
| ಅಂಕ ಬ್ರಹ್ಮಯ್ಯ | ಅಂಕದೇವಯ್ಯ |
| ಅಮೃತ ದೇವಯ್ಯ | ಅವಸರದ ಕೇತಯ್ಯ |
| ಇಂಡೆಸೋಮಣ್ಣ | ಆಯ್ದಕ್ಕಿ ಮಾರಯ್ಯ |
| ಏವೇಶ ಬ್ರಹ್ಮಯ್ಯ | ಏಲೇಶ್ವರದ ಕೇತಯ್ಯ |
| ಕಕ್ಕಯ್ಯ | ಡೋಹರ ಕಕ್ಕೆದೇವಯ್ಯ |
| ಕಲಿಕೇತ ಬ್ರಹ್ಮಯ್ಯ | ಕಲಕೇತ ಬೊಮ್ಮಯ್ಯ |
| ಕಿನ್ನರಿ ಬ್ರಹ್ಮಯ್ಯ | ಕಿನ್ನರಿ ಬ್ರಹ್ಮದೇವಯ್ಯ |

| | |
|---|---|
| ಗಣದಾಸಿ ಮಾದಣ್ಣ | ಗಣದಾಸಿ ಭೀಮಯ್ಯ |
| ತೆಲುಗು ಜೊಮ್ಮಯ್ಯ | ತೆಲುಗು ಬೊಮ್ಮಯ್ಯ |
| ಬಾಲ ಬ್ರಹ್ಮಯ್ಯ | ಭಾಷೆವಂತ ಅಲ್ಲಯ್ಯ |
| ಮಾದಿರಾಜಯ್ಯ | ಸಕಲೇಶ ಮಾದಿರಾಜಯ್ಯ |
| ವೆಂಕಮಂಚಯ್ಯ | ಲೆಂಕಬೊಮ್ಮಯ್ಯ |
| ಗುಡ್ಡಲದೇವಿ | ಗಂಗಾದೇವಿ |
| ಗೊಗ್ಗವ್ವೆ | ಗಣದಾಸವ್ವೆ |
| ಚಿಕ್ಕಲರಾಮವ್ವೆ | ಚಾಕಲದೇವಿ |
| ದುಗ್ಗಳದೇವಿ | ಚಕ್ಕಲಿಗೆ ಮಾದಾಯಿ |
| ನಿಮ್ಮವ್ವೆ | ಚಿಕ್ಕಾದೇವಿ |
| ಮಹಾದೇವಿ | ಬೊಂತಾದೇವಿ |
| ಶಿವದೇವಿ | ಷೊಡಶ ಬಸವಮ್ಮ |
| ಸೋಮಲದೇವಿ | ಸೋವರಸಿ |
| ಹಲ್ಲವ್ವೆ | ಹುಗ್ಗಿಯ ದುಗ್ಗಳವ್ವೆ |
| ಹೊನ್ನಲದೇವಿ | ಹೂವಿನಲ್ಲಿಮದೇವಿ |

(ಎಸ್.ವಿದ್ಯಾಶಂಕರ(ಸಂ),ಬ.ಪು,ಪೀಠಿಕೆ.ಪು.೬೭–೭೫)

ಹಾಗೆಯೇ ಕಥಾ ಶೀರ್ಷಿಕೆಗಳಲ್ಲಿನ ವ್ಯತ್ಯಾಸಕ್ಕೆ ಕೆಲವು ಉದಾಹರಣೆಗಳು.

| **ತೆಲುಗು** | | **ಕನ್ನಡ** |
|---|---|---|
| ನಕ್ಕಿಲು ಗುರ್ರಮುಲೈನ ಕಥ | – | ಚೊಕ್ಕನಾಥನ ಕಥೆ |
| ಇರುವ ದಂಡಾರಿಯ ಕಥ | – | ಇರಿಭಕ್ತನ ಕಥೆ |
| ಮಿಂಡನ್ಯೆನಾರು ಕಥ | – | ಮೆರೆಮಿಂಡದೇವ ಕಥೆ |
| ಅರಿವಾಳು ನಯನಾರ ಕಥ | – | ಅರಿವಾಳು ತಾಂಡಿಯ ಕಥೆ |
| ಚೇದಿವಲ್ಲಭನ ಕಥ | – | ಸೇದಿರಾಜನ ಕಥೆ |
| ಕರಿಯೂರಿ ಚೋಡನ ಕಥ | – | ಕರಮಾರಿ ಚೋಳನ ಕಥೆ |
| ಸವರದ ನಾಚಯ ಕಥ | – | ಸೌಂದರನಾಚಯ್ಯ ಕಥೆ |
| ಚೌಡರಾಯನ ಕಥ | – | ಮುಸುಟಿ ಚೌಡಯ್ಯ ಕಥೆ |
| ಅಲ್ಲಯ್ಯ ಮಧುಪಯ್ಯ | – | ಹರಳಯ್ಯ, ಮಧುವಯ್ಯ |

(ಎಸ್.ವಿದ್ಯಾಶಂಕರ(ಸಂ),ಬ.ಪು.ಪೀಠಿಕೆ, ಪುಟ.೭೬)

**೭.೬. ಪದ ಸಮುಚ್ಚಯಗಳು :**

ಕಾವ್ಯಗಳ ಭಾಷಾಂತರ ಕ್ರಿಯೆಗಳಲ್ಲಿ ಪದಶಃ ಅನುವಾದಗಳು ಮಾಡುವ ಸಂದರ್ಭಗಳು ಬರುತ್ತವೆ. ಅಂತಹ ಸಂದರ್ಭಗಳಲ್ಲಿ ಭಾಷಾಂತರಕಾರ ಸಂದರ್ಭಕ್ಕನುಗುಣವಾಗಿ ಕೆಲವೊಂದು ಬಾರಿ ಮೂಲದ ಪದಸಮುಚ್ಚಯಗಳನ್ನು ಹಾಗೆಯೇ ಉಳಿಸಿಕೊಳ್ಳುತ್ತಾನೆ. ಮತ್ತು ಕೆಲವೊಮ್ಮೆ ಅದನ್ನು ತನ್ನ ಭಾಷೆಗೆ ಅನುವಾದಿಸಿಕೊಳ್ಳುವಾಗ, ಬದಲಾವಣೆಗಳನ್ನೂ ಮಾಡಿಕೊಳ್ಳುತ್ತಾನೆ. ಭೀಮಕವಿಯು ಈ ರೀತಿಯ ಪದಸಮುಚ್ಚಯಗಳನ್ನು ಭಾಷಾಂತರಿಸಿರುವ ಕ್ರಮವನ್ನು ತಿಳಿಯುವುದು ಭಾಷಾಂತರ ಅಧ್ಯಯನದಲ್ಲಿ ಅತೀ ಮುಖ್ಯ. ಹಾಗಾಗಿ ಭೀಮಕವಿಯು ಮೂಲದ ಪದಸಮುಚ್ಛಯಗಳನ್ನು ನೇರವಾಗಿ ಅನುವಾದಿಸಿದ ಕ್ರಮವನ್ನು ಮತ್ತು ಮೂಲ ಪದಸಮುಚ್ಚಗಳನ್ನು ಕನ್ನಡಕ್ಕೆ ತರುವಾಗ ಮಾಡಿಕೊಂಡ ಬದಲಾವಣೆಗಳ ಕ್ರಮವನ್ನು ಮುಂದೆ ವಿವರಿಸಲಾಗಿದೆ.

ನೇರವಾಗಿ ಅನುವಾದವಾದ ಕೆಲವು ಪ್ರಮುಖ ಪದಸಮುಚ್ಚಯಗಳನ್ನು ಕೆಳಗೆ ನೀಡಿದೆ. ತೆಲುಗು ಪದಸಮುಚ್ಚಯಗಳ ಮುಂದೆ ಆಶ್ವಾಸದ ಸಂಖ್ಯೆಯನ್ನು ಮತ್ತು ಸಾಲುಗಳ ಸಂಖ್ಯೆಯನ್ನು ನೀಡಿದೆ. ಅದೇ ರೀತಿ ಕನ್ನಡ ಪದದ ಸಮುಚ್ಚಯಗಳ ಮುಂದೆ ಸಂದಿ ಸಂಖ್ಯೆ ಮತ್ತು ಪದ್ಯಗಳ ಸಂಖ್ಯೆಯನ್ನು ನೀಡಿದೆ.

**ನೇರ ಅನುವಾದ ಪದಸಮುಚ್ಚಯಗಳು :**

| **ತೆಲುಗು 'ಬಸವಪುರಾಣಮು'** | **ಕನ್ನಡ 'ಬಸವಪುರಾಣ'** |
|---|---|
| ದೃಷ್ಟಪ್ರತ್ಯಯ(೧–೨೯೯) | ದೃಷ್ಟಪ್ರತ್ಯಯ(೧–೫೮) |
| ದೃಷ್ಟದೃಷ್ಟಿಸಿದ್ಧಿ(೧–೪೯೫) | ದೃಷ್ಟಾದೃಷ್ಟಾಸಿದ್ಧಿಗಳು(೨–೨೯) |
| ಕಾಮ್ಯಾರ್ಥ ಸಿದ್ಧಿಗೆ(೧–೫೯೭) | ಕಾಮ್ಯಾರ್ಥ ಸಿದ್ಧಿಗೆ(೨–೪೯) |
| ಕರ್ಕಟಗರ್ಭ(೧–೭೨೦) | ಕಕ್ಕಟಗರ್ಭ(೩–೧೬) |
| ನರ್ದೊದಯ(೧–೭೫೮) | ಅರ್ಧೋಧಯ(೩–೨೪) |
| ಸೂಚೀಮುಖಂ(೧–೭೯೩) | ಸೂಚೀಮುಖ(೩–೩೦) |
| ಯಾಜ್ಞಿಕಂಬು(೧–೯೪೧) | ಯಾಜ್ಞಿಕವು(೩–೬೪) |
| ವೆಲಿಯಾಲಿ(೧–೯೯೬) | ಬೆಲೆವೆಣ್ಣು(೩–೭೫) |
| ಕೃತನಿಶ್ಚಯ(೨–೪೭೮) | ಕೃತನಿಶ್ಚಯ(೮–೪) |
| ಪುಟ್ಲ(೨–೮೬೮) | ಖಂಡುಗ(೨–೨೦) |
| ಗೊಂಡೆಮೌಂಜೆಪ್ಪ(೩–೧೩) | ಕೊಂಡೆಯವುಹುದು(೧೦–೫) |
| ಯುತ್ತಮಾಂಗ(೩–೨೮೩) | ಉತ್ತಮಾಂಗ(೧೧–೨೧) |
| ಅಪಾಂಗ(೩–೧೪೯೫) | ಅಪಾಂಗ(೧೭–೪೯) |

| | |
|---|---|
| ಜಾಯಿಲ(೫–೧೩೭೮) | ಜಾಯಿಲಂಗಳು(೩೩–೨೩) |
| ಅಂಕಕಾರ(೪–೬೬೨) | ಅಂಕಕಾರ(೮–೩೨) |
| ಸಂದುಸಂದುಲಕು(೬–೪೪) | ಸಂದುಸಂದಿಗೆ(೪೮–೧೦) |
| ಕಪಟನಾಟಕಸೂತ್ರ(೬–೭೨೩) | ಕಪಟನಾಟಕಸೂತ್ರ(೫೦–೩೧) |
| ಕಪಾಲಸ್ಥಿ ಮಾಲೆಗಳು(೬–೧೮೫೧) | ಕಪಾಲಸ್ಥಿಮಾಲಾವಳಿಗಳು(೫೩–೫೯) |
| ಸಂಬೋಳಿ(೭–೧೮) | ಸಂಬೋಳಿ(೫೪–೫) |

ಮೂಲದಲ್ಲಿರುವ ಪದಸಮುಚ್ಚಯಗಳನ್ನು ಕನ್ನಡದಲ್ಲಿ ಭಾಷಾಂತರಿಸುವಾಗ ಮಾಡಿಕೊಂಡ ಬದಲಾವಣೆಗಳ ಕೆಲವು ಮಾದರಿ ಪದಗಳನ್ನು ಮುಂದೆ ನೀಡಿದೆ.

**ವ್ಯತ್ಯಾಸ ಪದ ಸಮುಚ್ಚಯಗಳು :**

| **ತೆಲುಗು ಮೂಲದ ಪದಗಳು** | **ಕನ್ನಡ ಭಾಷಾಂತರ ಪದಗಳು** |
|---|---|
| ವೆನ್ನೆಲಂಗಲಕಂಟಿ(ತಿಂಗಳಗಣ್ಣು)(೧–೨೭೮) | ಹಿಮಗುನ್ನಯನ(೧–೫೫) |
| ಬುಕ್ಕಿಲಬಂಟಿ(ದವಡವರೆ)(೧–೪೦೪) | ಕೊರಳುದ್ದ(೨–೧೨) |
| ಮೇದಿನಿಂದಲ(ಮೇದಿನಿಯಲಿ)(೧–೪೦೯) | ಧರಣಿಯೊಳು(೨–೧೩) |
| ರೆಪ್ಪಲು(ರೆಪ್ಪೆಗಳು)(೧–೪೧೩) | ನೋಳ್ಪೆವೆ(೨–೧೩) |
| ಮೊಡ್ಪು ಜೇತುಲತೋ (ಮುಗಿದ ಕೈಗಳೊಡನೆ)(೧–೭೫೭) | ಕರಂಭೋಜಾತ ಮುಕುಳಿತನಾಗಿ(೩–೨೪) |
| ಗುಪ್ಪಾಕೃತಿಂ(ಗುಪ್ಪಾಕೃತಿ)(೧–೭೬೦) | ಗುರ್ವಾ್ಕಾರ(೩–೨೪) |
| ಷಟ್ಕುಕ್ಷಿ(೧–೯೩೯) | ಉದರವಾರು(೩–೬೪) |
| ಮರ್ಕಟನ್ಯಾಯ(೨–೨೬೩) | ಕಪಿನ್ಯಾಯ(೬–೪೦) |
| ನಮಿಸುಂಡ(೨–೮೧೭) | ಪೊಡಮಟ್ಟು ಉಂಡನು(೮–೮) |
| ಮುತ್ಯಾಲಪುಡಿ(ಮುತ್ತಿನ ಪುಡಿ)(೨–೮೬೬) | ಮುತ್ತಿನ ಚೂರ್ಣ(೮–೨೦) |
| ಮೂಂಡವಕನ್ನು(ಮೂರನೇಕಣ್ಣು)(೨–೫೦೬) | ನೊಸಲಕಣ್ಣು(೮–೩೦) |
| ಫಲಾಕ್ಷಂಬು(ಫಲಾಕ್ಷವ)(೨–೯೧೭) | ಭಾಳಾಕ್ಷಮಂ(೮–೩೧) |
| ಅಂತ್ರಂಬುನಕು(ತಂತ್ರಗಳಿಗೆ)(೩–೦೬) | ಪೆರ್ಬಲಕೆ(೧೦–೨) |
| ಬಲ್ಲಮೀಸಮುಲು(ಕಂದುಮೀಸೆಗಳು)(೩–೨೨೨೫) | ಕೆಂಪುಮೀಸೆಗಳು(೧೯–೧೧) |
| ತುಮ್ಮಾನ(ಜಾಲಿಮರ)(೩–೨೨೩೯) | ಬೊಬ್ಬುಲಿ ಮರ(೧೯–೧೪) |
| ಧಾರುಣೀಶ್ವರು(ಧಾರುಣೇಶ್ವರ)(೪–೫೪) | ಧರಿತ್ರೀವಲ್ಲಭ(೨೦–೧೪) |
| ರಾವಣ(೬–೬೨೭) | ಪಂತಿಕಂಠ(೫೩–೫೦) |

**೭.೮. ಸಂಸ್ಕೃತೋಕ್ತಿಗಳ ಬಳಕೆ :**

ಪಾಲ್ಕುರಿಕೆ ಸೋಮನಾಥನು ತನ್ನ 'ಬಸವಪುರಾಣಮು'ವಿನಲ್ಲಿ ಕೆಲವು ಸಂಸ್ಕೃತ ಪದಗಳನ್ನು ಸಂದರ್ಭೋಚಿತವಾಗಿ ಬಳಸಿದ್ದಾನೆ. ಭೀಮಕವಿಯೂ ಕೂಡ ಸೋಮನಾಥ ಕವಿಯು ಬಳಸಿದ ಸಂದರ್ಭ ಸನ್ನಿವೇಶಗಳಲ್ಲಿ ಅವನು ಬಳಸಿದ ಪದಗಳನ್ನೇ ನೇರವಾಗಿ ತಾನೂ ಬಳಸಿದ್ದಾನೆ. ಒಂದೆರಡು ಕಡೆಗಳಲ್ಲಿ ಸಂಸ್ಕೃತ ಪದಗಳ ಬದಲಾಗಿ ಕನ್ನಡ ಪದಗಳನ್ನು ಬಳಸಿದ್ದು ಬಿಟ್ಟರೆ, ಮಿಕ್ಕಂತೆ ಸೋಮನಾಥ ಬಳಸಿದ ಸಂಸ್ಕೃತ ಪದಗಳನ್ನು ಯಥಾವತ್ತಾಗಿ ಸ್ವೀಕರಿಸಿ ಅನುವಾದಿಸಿದ್ದಾನೆ ಭೀಮಕವಿ. ತೆಲುಗು ಮತ್ತು ಕನ್ನಡ 'ಬಸವಪುರಾಣ'ಗಳಲ್ಲಿರುವ ಅಂತಹ ಕೆಲವು ಪ್ರಮುಖ ಸಂಸ್ಕೃತ ಪದಗಳನ್ನು ಮುಂದೆ ಉದಾಹರಿಸಲಾಗಿದೆ.

| **ತೆಲುಗು ಬಸವಪುರಾಣ** | **ಕನ್ನಡ ಬಸವಪುರಾಣ** |
|---|---|
| ವಿಶ್ವತಶ್ಚಕ್ಷುಋತ(೧–೯೫೧) | ವಿಶ್ವತಃ ಚಕ್ಷುರುತ(೩–೬೬) |
| ಅಸಂಖ್ಯಾತಾಸ್ಸಹಪ್ರಾಣಿ(೨–೯೯೫) | ಅಸಂಖ್ಯಾತಾಸಹಪ್ರಾಣಿ(೭–೪೬) |
| ಏತಬೋಧನ್ನಿ ರೋಧತೆ(೨–೯೯೬) | ಏವಮೇತತ್(೭–೪೬) |
| ದಿವಾರಾತ್ರೌಚ ವರ್ಜಯೇತ್(೨–೪೪೫) | ದಿವಾರಾತ್ರೌ ಚ ವರ್ಜಯೆನೆ(೭–೫೮) |
| ಅನಾದರೇಣ ಶಾಠ್ಯೇನ(೨–೮೫೭) | ಅನಾದರೇಣ ಯೆನುತ್ತಮಿಹ ಶಾಠ್ಯೇನ(೮–೧೮) |
| ಏಕಯೇವಹಿ ರೂಪೇಣ(೩–೬೨೫) | ಏಕಮೇವ ಹಿ ಎನುತಿರಲು ರೂಪೇಣ(೧೪–೧೬) |
| ಸಾಧಕ ಸ್ಸಂಸ್ಮರೇ ತ್ಸದಾ(೩–೬೨೬) | ಪಾತಕೇಸಂಸ್ಮರೆತಥಾ(೧೪–೧೬) |
| ತಸ್ಯ ತನ್ಮಯತಾಂಯಾತಿ(೩–೬೨೭) | ತಸ್ಯತನ್ಮಯಮೆನೆ(೧೪–೧೬) |
| ಸರ್ವಸ್ಯಗಾತ್ರಸ್ಯ ಶಿರಃ ಪ್ರಧಾನಂ(೪–೪೫೯) | ಸರ್ವಸ್ಯಗಾತ್ರ ಶಿರಃ ಪ್ರಧಾನ(೨೩–೨೫) |
| ನಪುತ್ರಸ್ಯ ಗತಿರ್ನಾಸ್ತಿ(೪–೪೭೩) | ನ ಪುತ್ರಸ್ಯಗತಿ ನಾಸ್ತಿ(೨೩–೩೨) |
| ರಸಾನ್ ಭಕ್ತ ಜಿಹ್ವಾಂಚಲೇ(೫–೧೧೭೯) | ಶೃತಿರಸಾನ್ ಭಕ್ತಸ್ಯ ಜಿಹ್ವಾಗ್ರೇ(೩೨–೫) |
| ಏಕ ಏವ ರುದ್ರೋ(೬–೬೪೧) | ಏಕವ ಎನುತ್ತವರುದ್ರೊ(೫೦–೧೪) |
| ಲಿಂಗಮಧ್ಯೆ ಜಗತ್ಸರ್ವ(೬–೬೪೨) | ಲಿಂಗಮಧ್ಯೆ ಎನುತ್ತಿರೆ ಜಗತ್‌ಸರ್ವ(೫೦– |

೧೪)

| | |
|---|---|
| ಲಿಂಗಬಾಹ್ಯಾತ್ಪರಂ ನಾಸ್ತಿ(೬-೬೪೩) | ಲಿಂಗಬಾಹ್ಯತತ್ಪರವು ನಾಸ್ತಿ(೫೦-೧೪) |
| ಅಣೋರಣಿಯಾನ್(೬-೭೫) | ಅಣೋರಣಿಯಾನೆಂಬ(೫೦-೩೧) |
| ಬ್ರಾಹ್ಮಣೋನಹಂತವ್ಯ(೬-೧೪೧೭) | ಬ್ರಾಹ್ಮಣೋನಹಂತವ್ಯ(೫೨-೪೧) |
| ಶಿವಭಕ್ತಃ ಪ್ರಭುರ್ಮಮ(೬-೧೫೨೯) | ಶಿವಭಕ್ತೆ ಪ್ರಭುರ್ಮಮ(೫೦-೧೪) |
| ಮಮಕರ್ತಾ ಮಹೇಶ್ವರ(೬-೧೫೮೯) | ಮಮಕರ್ತನು ಮಹೇಶ್ವರನು (೫೩-೫) |
| ಸದಾ ಪಶ್ಯಂತಿ ಸೂರಯೋಃ(೬-೧೭೦೭) | ಸದಾ ಪಶ್ಯಂತಿ ಸೂರಯೆನೆ (೫೩-೨೯) |
| ಯಜ್ಞಸ್ಯ ಶಿರೋಭಿನ್ನ(೬-೧೭೮೯) | ಯಜ್ಞಸ್ಯ ಶಿರ(೫೩-೪೬) |
| ಯಥಾಶಿವಮಯೋ ವಿಷ್ಣು(೬-೧೯೪೧) | ಯಥಾ ಶಿವಮಯಂ ವಿಷ್ಣು(೫೩-೭೯) |
| ರಾಜಾನುಮತೋ ಧರ್ಮ(೭-೨೯) | ರಾಜಗತೋಧರ್ಮ(೫೪-೮) |
| ಬ್ರಾಹ್ಮಾಧಿಪತಿ ಬ್ರಹ್ಮಣೋಧಿಪತಿ(೭-೧೯೩) | ಬ್ರಹ್ಮಾಧಿಪತಿ ಎನುತಿರಲು ಮತ್ತೆಯಂ ಬ್ರಾಹ್ಮಣಾಧಿಪತಿ(೫೪-೪೧) |
| ಬ್ರಹ್ಮಚರಂತಿ ಬ್ರಾಹ್ಮಣಾ(೭-೧೭೭) | ಬ್ರಹ್ಮಚರಂತಿ ಬ್ರಾಹ್ಮಣಾ(೫೪-೩೮) |

ಮೂಲದಲ್ಲಿದ್ದ ಸಂಸ್ಕೃತೋಕ್ತಿಯನ್ನು ಕನ್ನಡಕ್ಕೆ ಭಾಷಾಂತರಿಸಿರುವುದಕ್ಕೆ ಉದಾಹರಣೆಗಳು.

| | |
|---|---|
| ನಗುರೋರಧಿಕ(೧-೯೫೭) | ತೇಜೋವರ್ತಿ(೩-೬೭) |
| ಭ್ರಾಂತಿ ಸಂಸರ್ಗಜಾಃ ಪಾಪಗುಣಾಭವಂತಿ (೪-೧೬೯೧) | ನಿನ್ನ ಸಂಸರ್ಗದೊಳೆಮಗೆ ತಾಂ ದೋಷಗುಣವಾದುದು(೨೫-೬೩) |
| ಧರ್ಮೋಧರ್ಮತಾಂ ವ್ರಜೇತ್ತೆ(೫-೭೭೩) | ದುರ್ಮಾರ್ಗವೆನಿಸದು(೩೦-೨೪) |

ಹೀಗೆ ಮೂಲ ಪುರಾಣದಲ್ಲಿ ಬಳಕೆಗೊಂಡ ಸಂಸ್ಕೃತೋಕ್ತಿಗಳನ್ನು ಸೋಮನಾಥ ಬಳಸಿದ ಸಂದರ್ಭಗಳಲ್ಲಿಯೇ ಭೀಮಕವಿಯು ಬಳಸಿದ್ದಾನೆ. ಕೆಲವನ್ನು ಕನ್ನಡದಲ್ಲಿ ಭಾಷಾಂತರಿಸಿದ್ದಾನೆ.

### ೭.೯. ನುಡಿಗಟ್ಟುಗಳ ಭಾಷಾಂತರ :

| ತೆಲುಗು | ಕನ್ನಡ |
| --- | --- |
| ಮಾವಿನ ಬೀಜಂಬು ಮಹಿಮೀಂದ ವಿತ್ತಂ<br>ಗಾವೇ ಮಗುನೇ ಪೆಕ್ಕುಗಥಲೇಮಿ ಚೆಪ್ಪತಾಂ<br>(ಮಾವಿನ ಬೀಜವನ್ನು ಮಹಿಯಲಿ<br>ಬಿತ್ತೆ ಬೇವವಹುದೇ?)(೧–೯೯೧) | ಇಳೆಗೆ ಮಾವಿನ ಬೀಜವಂ ಬಿತ್ತಲದು<br>ಬೇವವಹುದೇ?(೩–೭೫) |
| ಗಾಕುಲು ಪೆಂಚಿನ ಕೋಕಿಲಪಿಲ್ಲ<br>ಕಾಕುಲಂ ಬೋಲುನೇ ಕಾವುಕಾವನಚು<br>(ಕಾಗೆಯು ಬಳಸಿದ ಕೋಗಿಲೆ<br>ಮರಿಯು ಕಾಗೆಯಂತಿರುವುದೆ ಕಾವುಕಾವೆನುತ)<br>(೧–೧೦೧೫) | ಕಾಗೆ ಸಾಗಿಪ ಕೋಗಿಲೆಯ ಮರಿ<br>ಕೂಗುವುದೆ ಸುಸ್ವರದೊಳಲ್ಲದೆ<br>ಕಾಗೆಯಂದದಿ ಕಾವುಕಾವೆಂದರಚುವುದೆ<br>(೩–೭೯) |
| ವಡಿಂ ಬಾಱುಜಲಮುನ ಕೊಡಲೆಲ್ಲ ಗಾಳ್ಲು<br>(ಹರಿವ ಜಲಕೊಡಲೆಲ್ಲ ಕಾಲು)(೨–೫೮೩)<br>ವಡಿಂ ಗಾಲು ಚಿಚ್ಚುನ ಕೊಡಲೆಲ್ಲ ನೋಳ್ಲು<br>(ಸುಟ್ಟುರುಹಲು ಒಡಲೆಲ್ಲಬಾಯಿ)(೨–೫೮೪) | ಹರಿವ ಜಲಕೊಡಲೆಲ್ಲ ವಡಿಗಳು(೭–೨೨)<br>ವುರಿವ ಶಿಖಿಗೊಡಲೆಲ್ಲವುಂ ಬಾಯ್<br>(೭–೨೨) |
| ಯುಪ್ಪಮುಲ್ಲಿಯ ನೀರ ನುಂಚಿನಯಟ್ಲು<br>ಗಪ್ಪುರಂಬುನ ನಗ್ಗಿಂ ಗಪ್ಪಿನಯಟ್ಲು<br>ವಡಗಳ್ಳ ವರ್ಷಂಬು ವಾರಾಶಿಂ ಗುರಿಯು<br>(ಉಪ್ಪುಗಡ್ಡೆಯನ್ನು ನೀರಿನಲ್ಲಿದ್ದಿದಂತೆ<br>ಕೂರ್ಪರವನ್ನು ಬೆಂಕಿ ಹೊದ್ದು ಕೊಂಡಂತೆ<br>ಆಲಿಕಲ್ಲಿನ ಮಳೆ ವಾರಾಶಿಯಲ್ಲಿ ಸುರಿದಂತೆ(೨–೪೫೧–೪೫೩) | ಉದದೊಳುಪ್ಪಿನ ಪೊಟ್ಟಣವನಿರಿಸದತೆರದಿ<br>ಕರ್ಪೂರವನುರಿಯಪ್ಪಿದವೊಲು<br>ಅಂಬುಧಿಯೊಳು ಘನೋಲಪ ವೃಷ್ಟಿ<br>ಕುಜಿದಂತೆ |

ಮೃಗಪತಿ ಯೆದ್ದೆಸ ಮೇಯುನೇ ಪುಲ್ಲು?
(ಸಿಂಹವೆಂದಾದರು ಹುಲ್ಲು ಮೇಯುವುದೇ?)
೩–೩೫

ಕಂಠೀರವಂ ಫುಲ್ ಮೇವುದೇ?

ಕ್ಷೀರಾಬ್ಧಿ ಲೋಪಲಂ ಗ್ರಿಡಿಂಚುಹಂಸ
ಗೋರುನೇ ಪಡಿಯಲ ನೀರು ದ್ರಾವಂಗಂ
(ಕ್ಷೀರಾಬ್ದಿಯಲಿ ತಾ ಕ್ರೀಡಿಪ ಹಂಸ
ಗುಂಡಿಯ ನೀರನು ಕುಡಿಯಲಾಶಿಪುದೆ)೩–೩೬,೩೭

ಕ್ಷೀರ ಶರಧಿಯೊಳಿಪ್ಪ ಹಂಸಂ ಕ್ಷಾರ ನೀರಂ
ಸೇವಿಪುದೇ?(೩–೩೧–೪೪)

ಜೂತ ಫಲಂಬುಲು ಸುಂಬಿಂಚು ಚಿಲುಕ
ಬ್ರಾಂತಿ ಬೂರುಗ ಮ್ರಾನಪಂಡ್ಲುಗನ್ಗೊನುನೇ?
(ಚೂತ ಫಲಗಳನು ಚುಂಬಿಪ
ಗಿಣಿಯು ಭ್ರಾಂತಿಯಿಂ ಬೂರುಗ
ಫಲಕಾಶಿಸುವುದೇ?)೩–೩೮,೩೯

ಮಾವಣ್ಣಳಂ ಪೀರ್ವ ಕೀರವಿಟ್ಟಯ ಪಣ್ಗೆ
ಚಿತ್ತಂ ಹಾರಿದಪುದೆ?(೩–೩೧–೪೪)

ರಾಕಮಲ ಜ್ಯೋತ್ಸ್ನಂ ದ್ರಾವುಚಕೋರ
ಮೊಕಾಂಕ್ಷ ಸೇಯುನೇ ಚೀಂಕಟಿಂ ದ್ರಾವ
(ರಾಕಮಲ ಜ್ಯೋತ್ಸ್ನೆ ಕುಡಿವ
ಚಕೋರ ಆಕಾಂಕ್ಷೆಗೈವುದೆ ಕುಡಿಯ
ಕತ್ತಲೆಯ)೩–೪೦,೪೧

ಪೂರಿತಾಮೃತ ಕಿರಣ ರುಚಿಯಂ ರಚಿಸುವ
ಚಕೋರ ಸೇರಿ ಮರ್ಬಿಂಗೆಳಸುವುದೆ.
(೩–೩೧–೪೪)

ದಿಗ್ಗಜೆಂದ್ರಂಬು ಕೊದಮ
ಯೆಱಪಂದಿ ಚನು ಸೀಕ?
(ದಿಗ್ಗಜೇಂದ್ರದ ಮರಿಯಿಂತು
ಹಂದಿಮೊಲೆಯ ಸೀಪುವುದೆ?)೩–೪೪,೪೫

ದಿಗ್ವಾರಣದ ಮರಿಯಂಬುದೇ ಬಂದೂ
ರುವಂದಿಯ ಮೊಲೆಯನೆಲೆ
(೩–೩೧–೪೪)

| | |
|---|---|
| ನಿಪ್ಪನಂ ಜೆದಲಂಟುನೇ? | ಕೆಂಡವಂ ಗೆದಲೊಂದುವುದೆ(೧೪-೩೨) |
| (ಬೆಂಕಿಗೆ ಗೆದ್ದಲಂಟುವುದೇ?)(೩-೭೦೪) | |

| | |
|---|---|
| ಪೊಲಮುನ ನಾಂಬೋತು ಪುಲಿಗೊನ್ನಯಟ್ಟಿ | ಹೊಲದಲಿ ಗೂಳಿಯಂ ಹುಲಿಕೊಂದವೋ |
| (ಹೊಲದಲಿ ಎತ್ತನು ಹುಲಿಕೊಂದ | ಲಾಯ್ತು(೧೭-೭೦) |
| ರೀತಿ ಯಾಯಿತಿಂದು)(೩-೧೦೭೯) | |

ಹೀಗೆ ನುಡಿಗಟ್ಟುಗಳನ್ನು ನೇರವಾಗಿ ಭಾಷಾಂತರ ಮಾಡುವ ಮೂಲಕ ಮೂಲಕ್ಕೆ ಹೆಚ್ಚು ನಿಷ್ಠನಾಗಿದ್ದಾನೆ ಭೀಮಕವಿ. ಕೆಲವೊಂದು ಭಾಗಗಳಲ್ಲಿ ಸೋಮನಾಥ ಹೇಳಿದ ಗಾದೆ ನುಡಿಗಟ್ಟುಗಳ ಜೊತೆಗೆ ಹೊಸದಾಗಿಯೂ ಕೆಲವನ್ನು ಭೀಮಕವಿ ಸೇರಿಸಿ ಸಂದರ್ಭಗಳನ್ನು ಅತ್ಯಂತ ರಂಜನೀಯಗೊಳಿಸಿದ್ದಾನೆ.

**ಅಲಂಕಾರಗಳ ಭಾಷಾಂತರ :**

| **ತೆಲುಗು ಬಸವಪುರಾಣ** | **ಕನ್ನಡ ಬಸವಪುರಾಣ** |
|---|---|
| ದಿನಕರುಂಡಾತ್ಮೀಯ ತೇಜಂಬು ದಱುಂಗು | ನಿಜ ತೇಜವರತುರಿ ನಾಚಿ ನಂದ |
| ಡುನು ಮದಿ ಲಜ್ಜಿಂಚಿ ಚನಿ ಯಪರಾಬ್ಧಿಂ | ಪರ ಜೀವನಿಧಿಯೊಳು ಬಿರ್ದ |
| ಬಡಿಯೆನೋ ಯನ್ನಟ್ಲು ಭಾನುಂಡು ಗ್ರುಂಕೆಂ | ನೋಯೆನ ಲಾ ವಿಭಾಕರನಸ್ತ |
| (ದಿನಕರನಾತ್ಮೀಯ ತೇಜವು ಕುಗ್ಗಲವನು | ಮಿಸಿದನು(೧೦-೪೪) |
| ಮನದ ಲಜ್ಜೆಯಿಂದಪರಾಬ್ಧಿಯಲಿ | |
| ಬಿದ್ದನೋಯೆನಲರ್ಕ ಮುಳುಗಿದ)(೩-೧೮೩) | |

| | |
|---|---|
| ಪರುವಡಿನೆತ್ತು ದೀಪಂಬುಲೋ ಯನಂಗ | ರತಿಯೊಳೆತ್ತುವ ಬಹಳ ದೀಪಾ |
| ನಕ್ಷತ್ರ ಚಯ ಮಂತರೀಕ್ಷಂಬು ನಿಂಡಿ | ರತಿಗಳೋಯೆನೆ ಪರಿವಿಡಿಯೊಳುಡು |
| ಯಕ್ಷೀಣತರಕಾಂತಿ ಯಸಲಾರ ವೆಲಿಂಗೆಂ | ವಿತತಿ ದಿವಿಯೊಳು ತೀವಿಯು |
| (ಭರದಲೆತ್ತುತಿಹೆ ದೀಪಗಳಿವೋಯೆನಲು | ಜ್ವಳ ಕಾಂತಿ ರಂಜಿಸಿತು(೧೦-೪೮) |
| ನಕ್ಷತ್ರ ಚಯವಂತರಿಕ್ಷವ ತುಂಬಿ | |
| ಯಕ್ಷೀಣಿ ಕಾಂತಿಯಿಂದಲಿ ಬೆಳಗಿದವು)(೩-೧೯೪) | |

ಸುಖಸೇವ ನಾ ಕಿಂಕಂ ಜೊಪ್ಪಡುನೇನಿ
ನಿಲುಕಾಲ ನಿಲುವಂಗ ನೇರಕ ತಿರುಗು
ನಲಮಟ ವಾಯುಂ ಬೊಮ್ಮನಿ ತಲಪೋಸಿ
ವಚ್ಚಿನ ಮಾಡ್ಕಿ ದಿವಾಕರುಂಡಂತಂ
ಜೆಚ್ಚರ ನುದಯಾದ್ರಿಶಿಖರ ಮೆಕ್ಕುಡುನು
(ಸುಖಸೇವೆಯೆನಗಿನ್ನು ಉಂಟಾದಮೇಲೆ
ನಿಂತ ಕಾಲಲಿ ನಿಲ್ಲದಂತೆ ತಿರುಗುವ
ಚಿಂತೆಯು ಹಾಳಾದುದೆಂದು ಯೋಚಿಸುತ
ಬಂದ ರೀತಿಯಲಿ ದಿವಾಕರನಾಗ
ಚಚ್ಚರದುದಯಾದ್ರಿ ಶಿಖರವೇರಿದನು)(೩–೪೦೦)

ನಿಖಿಳ ಮಹೇಶ ಪ್ರಸಾದ ಸುಖ
ಸೇರಿದಡೆ ನಾಂ ಕಾಲು ನಿಲ್ಲದ
ನಾರತಂ ತೊಳಲುವ ಬಹಲ್ಕೆ ನಿ
ವಾರವಹುದಿನ್ನೆಂಬವೊಲು ಬಂದಿ
ನನುದಯವಾದ(೧೧–೪೭)

ಪೊಂಗಿ ಚಿಚ್ಚುಬುಕಂಗಂ ಬೋವುಚುಂ ಜೀರ
ಕೊಂ ಗೋಸರಿಂಚು ಪೆನ್ವೆಂಗಲಿಟ್ಲ
(ಹೊಂಗಿ ಕಿಚ್ಚುರಿಯಲು ಬೀಳುತ ಸೀರೆ
ಗೋಸರಿಸುವ ದೊಡ್ಡ ಮೂಢನ ರೀತಿ)

ಲೇಸೆನಿಪ್ಪಾ ಕಿಚ್ಚಿನೊಳಗುಲ್ಲಾಸದಿಂ
ಬೀಳುತ ಸೆರಗನಂ ತೋಸರಿಸುವಾ
ವೈಶಿಕದ ಹೆಂಗೂಸಿನಂದದಲಿ
(೧೯–೧೮)

ಚೆಲ್ಲುಂ ಬೊಮ್ಮನಿ ಸನ್ಯಸಿಂಪಂ ಬೋವುಚುನು
ನಿಲ್ಲಪ್ಪಗಿಂಚು ನಯ್ಯಬ್ಬಂದಿಯಟ್ಲ
(ಹೇಸಿ ಸಂಸಾರಕೆ ಸನ್ಯಾಸವಡೆದು
ಮನೆಕಾಯಲು ಹೇಳುವಿಬ್ಬಂದಿಯಂತೆ)

ಆಸೆಗಳನ್ನೆಲ್ಲಂ ತ್ಯಜಿಸಿ ಸಂನ್ಯಾಸಮಂ
ಮಾಡಲ್ಕೆ ಹೋಗಿ ನಿವಾಸಮಂ
ತಾನಪ್ಪಯಿಸುವ ವಿವೇಕಿಯಂದದಲಿ
(೧೯–೧೯)

ಪದಪಡಿ ನೂತಿಲೊಂ ಬಡಂಬೋಯಿ ತಾಪ
ವೆದುಕುಚು ಮೆಟ್ಟೆಡಿವೀಜೆಂಡಿ ಯಟ್ಲ
(ಬಾವಿಯಲಿ ಬೀಳಲು ಹೋಗಿ ಮೆಟ್ಟಿಲು
ಗಳನು ಹುಡುಕುವಂತಹ ಮೂರ್ಖನಂತೆ)
೩–೧೪೫೫–೬೦

ಹರಣವಂ ತ್ಯಜಿಸುವೆನೆನುತ
ದುರವಣಿಸಿ ಬಾವಿಯೊಳು
ಬೀಳುತ ಸರಸರನೆ ಮೆಟ್ಟಿಲುಗಳ
ನರಸುವ ಮೂರ್ಖನಂದದಲಿ
(೧೯–೨೦)

| | |
|---|---|
| ಜ್ಞಾನಾತ್ಮುಂಡ್ಯೆ ಸರ್ವಸಂಗಮುಲು ವಿಡಿಚಿ | ತಿಳಿಯಲರಿದು ಸಮಸ್ತ, ಭೋಗಂ |
| ತಾನಾಶ್ರಮಮುಂ ಗೋರು ತಪಸಿಚಂದಮನ | ಗಳ ನುಳಿದು ತಾನಾಶ್ರಯಕೆ ಮಂ |
| (ಜ್ಞಾನಾತ್ಮದಿಂ ಸರ್ವಸಂಗವಂ ಬಿಟ್ಟು | ತ್ತೆಳಸುತಿರ್ಪ ತಪೋಧನನ ಮನ |
| ಆಶ್ರಮ ಬಯಸುವ ತಾಪಸಿಯಂತೆ) | ದಂದವಾಯಿತ್ತು. (೧೯-೨೧) |
| (೩-೧೪೬೧-೬೨) | |

ಕನ್ನಡ 'ಬಸವಪುರಾಣ'ವು ಮೇಲಿನ ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಅನುವಾದಗೊಂಡು ರೂಪ ತಾಳಿದೆ. ಭೀಮಕವಿಯು ನೇರ ಅನುವಾದ, ಸಂಕ್ಷಿಪ್ತ ಅನುವಾದ, ಭಾವಾನುವಾದ, ವಿಸ್ತಾರಾನುವಾದಗಳನ್ನು ಸಂದರ್ಭಕ್ಕನುಗಣವಾಗಿ ತನ್ನ ಪುರಾಣದೊಳಗೆ ಬಳಸಿಕೊಂಡಿದ್ದಾನೆ. ಸಂಕ್ಷಿಪ್ತ ಮತ್ತು ಭಾವಾನುವಾದಗಳು ಅಲ್ಲಲ್ಲಿ ಕಂಡುಬರುತ್ತವೆಯಾದರೂ ಪೂರ್ಣಪ್ರಮಾಣದಲ್ಲಿ ಅಥವಾ ಪ್ರಧಾನವಾಗಿ ಎಲ್ಲಿಯೂ ಬಳಸಿಲ್ಲ. ಆದರೆ ವಿಸ್ತಾರ ಅನುವಾದವನ್ನು ಪ್ರತಿ ಸಂಧಿಯ ಪ್ರತಿಯೊಬ್ಬ ಶರಣನ ಕಥೆಯನ್ನು ಹೇಳುವಾಗ ಮೂಲಕ್ಕಿಂತ ತುಸು ವಿಸ್ತಾರವಾಗಿಯೇ ಹೇಳಿದ್ದಾನೆ. ವರ್ಣನೆಗಳ ಸಂದರ್ಭದಲ್ಲಿ ಅಂದರೆ ಪ್ರಕೃತಿ ವರ್ಣನೆ, ಪುರವರ್ಣನೆ, ಸ್ತ್ರೀವರ್ಣನೆಗಳ ಸಂದರ್ಭದಲ್ಲಿ ಭೀಮಕವಿಯು ತುಂಬಾ ವಿಸ್ತಾರವಾಗಿಸಿದ್ದಾನೆ. ಹಾಗೆಯೇ ಮೂಲದಲ್ಲಿ ಬಳಸಿದ ಪದಸಮುಚ್ಚಯಗಳನ್ನು ಬಹುತೇಕ ಅನುವಾದದಲ್ಲಿ ಭೀಮಕವಿ ಉಳಿಸಿಕೊಂಡಿದ್ದಾನೆ. ಜೊತೆಗೆ ಕೆಲವು ಮೂಲ ಪದಸಮುಚ್ಚಯಗಳಿಗೆ ಕನ್ನಡದ ಸಮಾನ ಪದಗಳನ್ನು ಬಳಸಿರುವುದೂ ಉಂಟು. ಅಲಂಕಾರಗಳು ಗಾದೆ ಮತ್ತು ನುಡಿಗಟ್ಟುಗಳ ವಿಷಯದಲ್ಲಿ ಭೀಮಕವಿ ಬಹುತೇಕ ನೇರವಾಗಿಯೇ ಅನುವಾದಿಸಿದ್ದಾನೆ. ಹೀಗೆ ನೇರವಾಗಿ ಅನುವಾದಿಸುವುದರ ಮೂಲಕ ಮೂಲದ ಪ್ರಧಾನ ಗುಣಗಳನ್ನು ಹಾಗೆಯೇ ಉಳಿಸಿಕೊಂಡಿರುವುದನ್ನು ಗಮನಿಸಬಹುದು. ಹಾಗೆಯೇ ಸಂಸ್ಕೃತ ಪದಗಳ ಬಳಕೆಯಲ್ಲಿ ಭೀಮಕವಿಯು ಸೋಮನಾಥನನ್ನು ಹೆಚ್ಚು ಅನುಸರಿಸಿದ್ದಾನೆ. ಹೀಗೆ ಅನುಸರಿಸುವ ಮೂಲಕ ತೆಲುಗು 'ಬಸವಪುರಾಣ'ವಿನಲ್ಲಿ ಬಳಸಿದ ಸಂಸ್ಕೃತ ಪದವನ್ನು ಮೂಲದ ಸಂದರ್ಭ, ಸನ್ನಿವೇಶಗಳಲ್ಲಿಯೇ ಕನ್ನಡದಲ್ಲಿಯೂ ಬಳಸಿದ್ದಾನೆ. ಈ ಎಲ್ಲಾ ಭಾಷಾಂತರ ಅಂಶಗಳ ಹಿನ್ನೆಲೆಯಲ್ಲಿ ಭೀಮಕವಿಯ ಕನ್ನಡ ಬಸವಪುರಾಣವು ಅನುವಾದ ಪುರಾಣ ಕಾವ್ಯವಾಗಿ ಕನ್ನಡದಲ್ಲಿ ಅದರಲ್ಲೂ ವೀರಶೈವ ಸಾಹಿತ್ಯದಲ್ಲಿ ತುಂಬಾ ಪ್ರಾಮುಖ್ಯತೆ ಮತ್ತು ಪ್ರಸಿದ್ಧಿಯನ್ನು ಪಡೆದುಕೊಂಡಿದೆ.

ಮನೆಬಿಟ್ಟು ಹೊರಟ ಬಸವಣ್ಣ ಸಂಗಮನಾಥನೇ ನನ್ನ ಆರಾಧ್ಯ ದೇವರು, ಶಿವನೇ ಸಕಲ ಲೋಕಕ್ಕೆ ಸೃಷ್ಟಿಕರ್ತ, ಅವನನ್ನು ನಂಬಿ ನಡೆದರೆ ಜೀವನದ ಪರಮಧ್ಯೇಯ ಸಾಧಿಸಿದಂತಾಗುತ್ತದೆಂದು ನಿಶ್ಚಯಿಸಿ ಶಿವನ ಸೇವೆಯಲ್ಲಿ ತೊಡಗುತ್ತಾನೆ. ಬಸವಣ್ಣನ ಈ ಅಚಲವಾದ ಭಕ್ತಿ, ನಿಸ್ವಾರ್ಥ ಸೇವೆಯನ್ನು ಕಂಡ ಅಂದಿನ ಅನೇಕರು ಬಸವಣ್ಣನ ಅನುಯಾಯಿಗಳಾಗುತ್ತಾರೆ. ಅವನಂತೆಯೇ ತಾವೂ ಶಿವನ ಭಕ್ತರಾಗಿ, ಇಷ್ಟ ದೇವರನ್ನಾಗಿ ಸ್ವೀಕರಿಸಿ ಆರಾಧಿಸುತ್ತಾರೆ.

ಶಿವಧರ್ಮದ ಶ್ರೇಷ್ಠತೆ ಮತ್ತು ಅದರ ಉನ್ನತಿಯು ಭೂಲೋಕದಲ್ಲಿ ಶಾಶ್ವತವಾಗಿರುವಂತೆ ಮಾಡುವುದು ಮತ್ತು ಬೆಳಗುವುದೇ ಇಬ್ಬರು ಕವಿಗಳ ಕಾವ್ಯದ ಪ್ರಮುಖ ಉದ್ದೇಶ. ಶಿವನ ಅಪ್ಪಣೆಯಂತೆಯೇ ಭೂಲೋಕದಲ್ಲಿ ಅವತರಿಸಿದ ಬಸವಣ್ಣ ಈ ಕಾರ್ಯ ನಿಮಿತ್ತವಾಗಿ ಬಂದು ಭೂಮಿಯಲ್ಲಿ ಶಿವಧರ್ಮದ ತತ್ವಾದರ್ಶನಗಳನ್ನು ಪಸರಿಸಿ ನಾಡಿನ ಉದ್ದಗಲಕ್ಕೂ ಶಿವನ ಆರಾಧಕರನ್ನು ಬೆಳೆಸುತ್ತಾನೆ. ಜಾತಿ, ಬೇಧ, ಮತಗಳನ್ನು ಲೆಕ್ಕಿಸದೆ ಎಲ್ಲರನ್ನು ಗೆಲ್ಲುತ್ತಾನೆ. ಶರಣ ಸಮಾಗಮದಲ್ಲಿ ಸಾವಿರಾರು ಜನರು ಭಕ್ತರಾಗಿ ಬಸವಣ್ಣನ ಭಕ್ತಿಯ ಪ್ರಭಾವಲಯಕ್ಕೆ ಬಂದು ಸೇರುತ್ತಾರೆ. ಅನುಭವ ಮಂಟಪದಂತಹ ಶ್ರೇಷ್ಠ ವಿದ್ಯಾಕೇಂದ್ರವನ್ನು ಸ್ಥಾಪಿಸಿಕೊಂಡು ಅಲ್ಲಿ ಶಿವನ ಕುರಿತು ಗೋಷ್ಠಿಗಳನ್ನು ನಡೆಸುವುದು, ತಮ್ಮ ಅನುಭವದ ಧಾರೆಯನ್ನೇ ವಸ್ತುವಾಗಿಸಿಕೊಂಡು ವಚನಗಳನ್ನು ರಚಿಸುವ ಮೂಲಕ ಮತ್ತು ಹಾಡುವ ಮೂಲಕ ವೀರಶೈವ ಧರ್ಮದ ತಿರುಳನ್ನು ಜಗತ್ತಿಗೆ ಸಾರಿದರು. ಕ್ರಮೇಣ ವೀರಶೈವ ಧರ್ಮ ನಾಡಿನ ಉದ್ದಗಲಕ್ಕೂ ಪಸರಿಸಿತು. ಜೈನ, ಬೌದ್ಧಾದಿ ಧರ್ಮಗಳನ್ನು ಖಂಡಿಸುತ್ತಾ ಬೆಳೆದ ವೀರಶೈವವು ಸಾಮಾನ್ಯ ಜನರಿಗೆ ಸ್ಫೂರ್ತಿಯಾಯಿತು. ಅನ್ಯಧರ್ಮಗಳ ವಿರುದ್ಧ ಹೋರಾಡಿದ ಶಿವಶರಣರು ಅನೇಕ ಪವಾಡ ಮತ್ತು ಮಹಿಮೆಗಳನ್ನು ತೋರುವ ಮೂಲಕ ಜೈನ, ಬೌದ್ಧ ಮುಂತಾದ ಧರ್ಮದ ಅನುಯಾಯಿಗಳನ್ನು ತಮ್ಮ ಧರ್ಮದೆಡೆಗೆ ಸೆಳೆದು ಶಿವಧರ್ಮವನ್ನು ಸ್ವೀಕರಿಸುವಂತೆ ಮಾಡಿದರು. ಇದಕ್ಕೆ 'ಬಸವಪುರಾಣ'ಗಳಲ್ಲಿ ಸಾಕಷ್ಟು ಉದಾಹರಣೆಗಳು ದೊರೆಯುತ್ತವೆ. ಈ ಹಿನ್ನೆಲೆಯಲ್ಲಿ ವೀರಶೈವ ಧರ್ಮದ ಮಹೋನ್ನತ ಕಾವ್ಯಗಳಾಗಿ 'ಬಸವಪುರಾಣ'ಗಳು ಎರಡು ಭಾಷೆಯ ಸಾಹಿತ್ಯದಲ್ಲಿ ಮುಖ್ಯವಾಗಿರುವುದನ್ನು ಸಾಧಾರಣವಾಗಿ ನಿರೂಪಿಸಲಾಗಿದೆ.

ಬಸವಣ್ಣ ವೀರಶೈವ ಧರ್ಮದಲ್ಲಿ ಹುಟ್ಟಿದ ಮಹಾಮೇಧಾವಿ. ಒಂದು ಆದರ್ಶ ಸಾಮ್ರಾಜ್ಯಕ್ಕೆ ಬೇಕಾಗುವ ಮೂಲಭೂತ ತತ್ವಾದರ್ಶನಗಳನ್ನು ನೀಡಿದ ಮಹನೀಯ. ಇವನ ಮತ್ತು ಇವನ ಜೊತೆಗಿದ್ದ ಆ ಕಾಲದ ಎಲ್ಲಾ ಶಿವಶರಣರ ಬದುಕನ್ನು ಕಟ್ಟಿಕೊಡುವಲ್ಲಿ ಪಾಲ್ಕುರಿಕೆ ಸೋಮನಾಥ ಯಶಸ್ವಿಯಾಗಿದ್ದಾನೆ. ಇವನು ನೇರವಾಗಿ ತನ್ನ ಈ ಪುರಾಣದಲ್ಲಿ ಚಿತ್ರಿಸುವ ಯಾವುದೇ ಶರಣನ ಜೀವಿತ ವಿವರಗಳನ್ನು ನೋಡಿದವನಲ್ಲ ಹಾಗೂ ಓದಿದವನಲ್ಲ. ಇವನಿಗೆ ಶ್ರೀಶೈಲಕ್ಕೆ ಬಂದ ಯಾತ್ರಾರ್ಥಿಗಳು ಮತ್ತು ಭಕ್ತರು ಹೇಳಿದ ಮೌಖಿಕ ಚರಿತ್ರೆಯೇ ಆಕರವಾಗಿದೆ. ಕರಸ್ಥಲಿ ಸೋಮನಾಥ, ಗೋಡಗಿ ತ್ರಿಪುರಾರಿ, ದೋಚಮಾಂಬ ಮುಂತಾದ ಮಹನೀಯರು ಮತ್ತು ಅಲ್ಲಿಗೆ ಆಗಮಿಸಿದ್ದ ಭಕ್ತರು ಇವನಿಗೆ ಸಹಾಯಕರಾಗುತ್ತಾರೆ. ಹೀಗೆ ಜನರ ಬಾಯಿಂದ ಕೇಳಿದ ಈ ಮೌಖಿಕ ಚರಿತ್ರೆಯನ್ನೇ

ವಸ್ತುವಾಗಿ ಬಳಸಿಕೊಂಡು ಶ್ರೇಷ್ಠ ಶರಣರ ಬದುಕನ್ನು ಚಿತ್ರಿಸಿ ಆ ಶರಣರ ಇತಿಹಾಸ ಶಾಶ್ವತವಾಗಿರುವಂತೆ ನೆಲೆಗೊಳಿಸಿದ ಸೋಮನಾಥನ ಪ್ರತಿಭಾ ಶಕ್ತಿ ಉಜ್ವಲವಾದುದು. ಈ ದಿಸೆಯಲ್ಲಿ ಸೋಮನಾಥ ತೆಲುಗು ವೀರಶೈವ ಸಾಹಿತ್ಯದಲ್ಲಿ ಮಹೋನ್ನತ ಕವಿಯಾಗಿ, ಅಗ್ರಮಾನ್ಯ ಕವಿಯಾಗಿ ಹೇಗೆ ನಿಲ್ಲುತ್ತಾನೆ ಎಂಬುದನ್ನು ಖಚಿತವಾಗಿ ಗುರುತಿಸಲಾಗಿದೆ.

ಬಸವಣ್ಣನ ಪ್ರಭಾವ ಸೋಮನಾಥನ ಮೇಲೆ ಎಷ್ಟು ಗಾಢವಾಗಿತ್ತೆಂದರೆ ಅವನು ತೆಲುಗು, ಸಂಸ್ಕೃತ, ಕನ್ನಡದಲ್ಲಿ ಬರೆದ ಕೃತಿಗಳಲ್ಲಿ ಬಹುತೇಕ ಬಸವಣ್ಣನನ್ನೇ ಕುರಿತಾಗಿವೆ. ಬಸವಣ್ಣನ ಕಾಯಕ ತತ್ವ, ಜಂಗಮ ಪ್ರೇಮ, ನಿಷ್ಕಲ್ಮಶ ಬದುಕು ಸೋಮನಾಥನ ಮನಸ್ಸಿನಾಳಕ್ಕೆ ಇಳಿದಿದ್ದವು. ಹಾಗಾಗಿಯೇ 'ಬಸವಪುರಾಣ'ದಲ್ಲಿ ಬಸವಣ್ಣನ ವ್ಯಕ್ತಿತ್ವವನ್ನು ಅತ್ಯಂತ ಭಕ್ತಿಯುತವಾಗಿ ಚಿತ್ರಿಸಿದ್ದಾನೆ. "ಬಸವ ಎಂದರೆ ಪಾಪವಳಿಯುತ್ತದೆ, ಬಸವ ಶರಣೆನೆ ಪರಮ ಪಾವನ ಸಂಧಿಸುತ್ತದೆ, ಬಸವ ಶರಣೆನೆ ಭಕ್ತಿ, ವಚನ ರಚನಾಸಿದ್ಧಿ ವರ್ಧಿಸುತ್ತದೆ, ಬಸವ ಶರಣೆನೆ ಕೀರ್ತಿ, ಸೌಖ್ಯ, ಭಾಗ್ಯ" ಸಿಗುತ್ತವೆಂದು ಸೋಮನಾಥ ಹೇಳುತ್ತಾನೆ. ಹೀಗೆ ಬಸವಣ್ಣನ ಭಕ್ತಿಯನ್ನೇ ಮೈದುಂಬಿಕೊಂಡು ರಚಿಸಿರುವ ಈ ಪುರಾಣವು ಸೋಮನಾಥನ ಬಸವ ಭಕ್ತಿಯ ಆತ್ಯಂತಿಕ ವಿಚಾರದ ಅನಾವರಣವಾಗಿರುವುದನ್ನು ನಿರ್ದಿಷ್ಟವಾಗಿ ಕಂಡರಿಸಲಾಗಿದೆ.

ಕನ್ನಡ–ತೆಲುಗು 'ಬಸವಪುರಾಣ'ಗಳನ್ನು ತೌಲನಿಕ ವಿಧಾನದಲ್ಲಿ ಅಧ್ಯಯನ ಮಾಡಿರುವುದರ ಉದ್ದೇಶ ಮುಖ್ಯವಾಗಿ ಎರಡೂ ಪುರಾಣಗಳಿಗಿರುವ ಸಾಮಾಜಿಕ ಮತ್ತು ಸಾಂಸ್ಕೃತಿಕ ಅನನ್ಯತೆಯನ್ನು ಗುರುತಿಸುವುದಾಗಿದೆ. ಹನ್ನೆರಡನೆಯ ಶತಮಾನದ ಶರಣ ಶ್ರೇಷ್ಠರ ಚರಿತ್ರೆಗಳನ್ನು ಹೊತ್ತಿರುವ ಈ ಪುರಾಣಗಳು ಭಿನ್ನ ಭಾಷೆಯ ಕಾವ್ಯಗಳಲ್ಲಿ ಅವರ ಚರಿತ್ರೆಯು ಅಡಕಗೊಂಡಿರುವ ಬಗೆಯನ್ನು ಗುರುತಿಸಲಾಗಿದೆ. ಈ ಹಿನ್ನೆಲೆಯಲ್ಲಿ ಕೈಗೊಂಡ ಈ ಅಧ್ಯಯನದಲ್ಲಿ ಈ ಎಲ್ಲಾ ಪ್ರಮುಖ ಶರಣರ ಚರಿತ್ರೆಯನ್ನು ಕೂಲಂಕಷವಾಗಿ ಚರ್ಚಿಸಲಾಗಿದೆ. ಜನರ ಬಾಯಲ್ಲಿ ಮೌಖಿಕವಾಗಿ ಹರಿದಾಡುತ್ತಿದ್ದ ಮಾಹಿತಿಗಳನ್ನು ಸಂಗ್ರಹಿಸಿ ಚರಿತ್ರೆ ರೂಪಿಸಿದ ಸೋಮನಾಥನ ವಿಷಯಗಳಿಗೂ ಮತ್ತು ಕನ್ನಡದ ನೆಲದಲ್ಲಿ ಬಾಳಿ ಬದುಕಿದ ಭೀಮಕವಿ ಸೋಮನಾಥನ ಅದೇ ಪುರಾಣವನ್ನು ಅನುವಾದಿಸಿದ ಚರಿತ್ರೆಗೂ ಇರುವ ಸಾಮ್ಯ ಭಿನ್ನತೆಗಳನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ. ಮುಖ್ಯವಾಗಿ ಕನ್ನಡ–ತೆಲುಗು ಎರಡು ಭಿನ್ನ ಭಾಷೆಗಳಾಗಿದ್ದರೂ ಒಂದೇ ಸಾಂಸ್ಕೃತಿಕ ವಲಯದಲ್ಲಿ ರಚನೆಗೊಂಡ ಈ 'ಬಸವಪುರಾಣ'ಗಳ ಅಧ್ಯಯನದಿಂದ ಕವಿಗಳು ಮತ್ತು ಅವರು ರಚಿಸಿದ ಪುರಾಣಗಳ ವೈಶಿಷ್ಟ್ಯತೆಗಳನ್ನು ಇಲ್ಲಿ ಗುರುತಿಸುವ ಪ್ರಯತ್ನವನ್ನು ಮಾಡಲಾಗಿದೆ.

ಪಾಲ್ಕುರಿಕೆ ಸೊಮನಾಥನು ರಚಿಸಿದ ಈ 'ಬಸವಪುರಾಣಮು' ಮತ್ತು ಇತರೆ ತೆಲುಗು, ಸಂಸ್ಕೃತ, ಕನ್ನಡದ ಎಲ್ಲಾ ಗ್ರಂಥಗಳ ವಿಷಯಗಳನ್ನು ಆಧರಿಸಿ ಹೇಳುವುದಾದರೆ ಇವನ ಎಲ್ಲಾ ಕೃತಿಗಳ ಪ್ರಧಾನ ಆಶಯ ವೀರಶೈವ ಮತದ ಶ್ರೇಷ್ಠತೆಯನ್ನು ಪ್ರಸಾರ ಮಾಡುವುದೇ ಆಗಿದೆ. ಮುಖ್ಯವಾಗಿ ಮೂರು ವಿಧದಲ್ಲಿ ಈ ಕಾರ್ಯಸಾಧನೆ ಮಾಡಿರುವುದು ಕಂಡುಬರುತ್ತದೆ. ಮೊದಲನೆಯದು ವೀರಶೈವ

ಮತಾವಲಂಬಿತರಿಗೆ ಮತ್ತು ಪುರಾಣ-ಪ್ರವಚನ ಮಾಡುವವರಿಗೆ ಉಪಯೋಗವಾಗುವಂತಹ ಸ್ತೋತ್ರ ರೂಪದ ಕೃತಿಗಳನ್ನು ರಚಿಸುವುದರ ಮೂಲಕ. ಎರಡನೆಯದು ಅನ್ಯಧರ್ಮಗಳನ್ನು ಖಂಡಿಸಿ ವೀರಶೈವ ಮತದ ಶ್ರೇಷ್ಠತೆಯನ್ನು ತಿಳಿಸುವ ಹಿನ್ನೆಲೆಯ ಕಥೆಗಳನ್ನು ಹೇಳುವಂತಹ ಗ್ರಂಥಗಳನ್ನು ರಚಿಸುವುದರ ಮೂಲಕ. ಮೂರನೆಯದು ವೀರಶೈವರಿಗೆ ಮತ್ತು ವೀರಶೈವೇತರರಿಗೆ ಇರುವ ವ್ಯತ್ಯಾಸಗಳನ್ನು ತಿಳಿಸುವಂತಹ ಮತ್ತು ವೀರಶೈವ ಧರ್ಮದ ವೈಶಿಷ್ಟ್ಯ ಮತ್ತು ಮಹತ್ವವನ್ನು ತಿಳಿಸುವಂತಹ ಗ್ರಂಥಗಳನ್ನು ರಚಿಸುವ ಮೂಲಕ. ಈ ಮೂರು ಮಾದರಿಯ ಕೃತಿಗಳನ್ನು ಪಾಲ್ಕುರಿಕೆ ಸೋಮನಾಥ ರಚಿಸಿ ವೀರಶೈವ ಧರ್ಮ ಪ್ರಚಾರದಲ್ಲಿ ಪ್ರಮುಖ ರೂವಾರಿಯಾಗಿದ್ದಾನೆ.

ಭೀಮಕವಿಯು ಹರಿಹರ ಮತ್ತು ರಾಘವಾಂಕರ ಪೋಷಣೆಯಲ್ಲಿ ಬೆಳೆದವನಾದ್ದರಿಂದ ಸಹಜವಾಗಿಯೇ ಇವನ ಮೇಲೆ ವೀರಶೈವ ಧರ್ಮದ ಪ್ರಭಾವ ದಟ್ಟವಾಗಿ ಆಗಿದೆ. ಬಸವಣ್ಣ ಮತ್ತು ಅವನ ಅನುಯಾಯಿಗಳ ಭಕ್ತಿ ಚಳವಳಿಯೂ ಇವನ ಮೇಲೆ ಪ್ರಭಾವವನ್ನು ಬೀರಿತ್ತು. ಜೊತೆಗೆ ಹರಿಹರನ ರಗಳೆಗಳು ಮತ್ತು ಶಿವಶರಣರ ವಚನ ಸಾಹಿತ್ಯವೂ ಇವನಿಗೆ ಪೂರಕವಾಗಿ ಪ್ರೇರಣೆ ಒದಗಿಸಿರುವುದರಿಂದ ಬಸವ ಚರಿತ್ರೆಯನ್ನು ರಚಿಸಲು ಮುಂದಾಗುತ್ತಾನೆ. ಇದಕ್ಕೆ ಸಾಧನವಾಗಿ ಸೋಮನಾಥನ ತೆಲುಗು 'ಬಸವಪುರಾಣಮು'ವು ಇವನಿಗೆ ಆಕರವಾಗಿದ್ದರಿಂದ ಸರಳವಾಗಿ ಆ ಪುರಾಣವನ್ನು ಅನುವಾದಿಸುವ ಮೂಲಕ ಕನ್ನಡದ ನೆಲದಲ್ಲಿ ವೀರಶೈವ ಮತದ ಪ್ರಾಬಲ್ಯ ಹೆಚ್ಚಾಗುವಂತೆ ಮಾಡುತ್ತಾನೆ. ಮತ್ತು ಕನ್ನಡದಲ್ಲಿ ವೀರಶೈವ ಪುರಾಣ ಸಾಹಿತ್ಯ ಸೃಷ್ಟಿಯಲ್ಲಿ ಪ್ರಮುಖನಾಗುತ್ತಾನೆ.

ಈ ಹಿನ್ನೆಲೆಯಲ್ಲಿ ಇಬ್ಬರೂ ಕವಿಗಳು ತಾವು ಉದ್ದೇಶಿಸಿದ ಹಿನ್ನೆಲೆ ಮತ್ತು ಕಾರ್ಯಸಾಧನೆಯನ್ನು ಯಶಸ್ವಿಗೊಳಿಸುವಲ್ಲಿ ಸಫಲವಾಗಿರುವುದು ಈ ಎರಡು ಪುರಾಣಗಳಿಂದ ತಿಳಿಯುತ್ತದೆ.

**ಫಲಿತಗಳು :**

* ಕನ್ನಡ-ತೆಲುಗು 'ಬಸವಪುರಾಣ'ಗಳ ಮುಖ್ಯ ವಸ್ತು ಶಿವಶರಣರ ಜೀವನ ಚರಿತ್ರೆ. ಈ ಚರಿತ್ರೆಗಳು ಪುರಾಣದುದ್ದಕ್ಕೂ ಸಿಗುತ್ತವೆ. ಬಸವಣ್ಣನನ್ನು ಮುಖ್ಯ ಪಾತ್ರವಾಗಿಸಿಕೊಂಡು ಆರಂಭವಾಗುವ ಪುರಾಣಗಳು ಸಂದರ್ಭಕ್ಕನುಗುಣವಾಗಿ ಅನೇಕ ಶರಣರ ಪ್ರವೇಶವನ್ನು ಚಿತ್ರಿಸಿವೆ. ಈ ಭಕ್ತ ಶರಣರು ಶಿವಧರ್ಮವನ್ನು ತಮ್ಮ ಮನಗಳಲ್ಲಿ ಸಾಕ್ಷೀಕರಿಸಿಕೊಂಡು ಹಲವು ನೆಲೆಗಳಲ್ಲಿ ತಮ್ಮ ಭಕ್ತಿಯನ್ನು ಅಭಿವ್ಯಕ್ತಿಸುತ್ತಾರೆ. 'ಬಸವಪುರಾಣ'ಗಳಲ್ಲಿ ಮುಖ್ಯವಾಗಿ ಮೂರು ನೆಲೆಯಲ್ಲಿ ಭಕ್ತಿಯನ್ನು ಅಭಿವ್ಯಕ್ತಿಸುವ ಶರಣರಿದ್ದಾರೆ. ಮುಗ್ಧಭಕ್ತಿಯನ್ನು ಮೈಗೂಡಿಸಿಕೊಂಡಿರುವ ಮುಗ್ಧಸಂಗಯ್ಯ, ರುದ್ರಪಶುಪತಿ, ಬೆಜ್ಜಮಹಾದೇವಿ, ಕೊಡಗೂಸು, ಬೇಡರ ಕಣ್ಣಪ್ಪರಂತಹ ಶರಣರು ನಿಸ್ವಾರ್ಥ ಸೇವೆಯಿಂದ ಶಿವನನ್ನು ಪೂಜಿಸುವಲ್ಲಿ, ಆರಾಧಿಸುವಲ್ಲಿ ತೊಡಗಿರುತ್ತಾರೆ. ಶಿವನಿಗಾಗಿ ತಮ್ಮ ಪ್ರಾಣವನ್ನು ಅರ್ಪಿಸಲು ಹಿಂಜರಿಯದ ಭಕ್ತರು ತಾವು ಮಾಡುತ್ತಿರುವ ಸೇವೆ ತಮಗೆ ಆಪತ್ತುಗಳನ್ನು ತಂದೊಡ್ಡುತ್ತದೆಂದು ತಿಳಿಯದ ಅಮಾಯಕರು. ಇಂತಹ ಮುಗ್ಧಶರಣರ ಜೀವನ ವಿವರಗಳನ್ನು ತಿಳಿಸುವ ಮೂಲಕ ಕವಿಗಳು ಶಿವಭಕ್ತಿಯ ಶ್ರೇಷ್ಠತೆಯನ್ನು ಸಾರಿದ್ದಾರೆ. ಹಾಗೆಯೇ ಉಗ್ರಭಕ್ತಿ ಮತ್ತು ಧರ್ಮನಿಷ್ಠ ಭಕ್ತಿಶರಣರು ಕೂಡ ತಮ್ಮ ಧರ್ಮದ ಉಳಿವಿಗಾಗಿ

ಮತ್ತು ಅದರ ಉನ್ನತಿಗಾಗಿ ಹಲವು ವಿಧಗಳಲ್ಲಿ ಹೋರಾಡುತ್ತಾರೆ. ಅನ್ಯಧರ್ಮದವರು ತಮಗೆ ಕಿರುಕುಳ, ಹಿಂಸೆ ನೀಡುವ ಸಂದರ್ಭದಲ್ಲಿ ಅವರ ವಿರುದ್ಧ ಹೋರಾಡಿ ಶಿವಧರ್ಮವನ್ನು ಕಾಪಾಡುವ ನಿಟ್ಟಿನಲ್ಲಿ ಉಗ್ರಭಕ್ತರು ತಮ್ಮ ಭಕ್ತಿಯನ್ನು ತೋರುತ್ತಾರೆ. ಹಾಗೆಯೇ ಧರ್ಮನಿಷ್ಠ ಭಕ್ತರು ಕೂಡ ಅನ್ಯಧರ್ಮದವರನ್ನು ವಾದ ಮತ್ತು ಯುದ್ಧಗಳಲ್ಲಿ ಸೋಲಿಸುವ ಮೂಲಕ ಧರ್ಮನಿಷ್ಠರಾಗಿ ಅನ್ಯಮತದವರನ್ನು ವೀರಶೈವ ಮತಾವಲಂಬಿಗಳನ್ನಾಗಿ ಮಾಡುವ ಮೂಲಕ ಧರ್ಮನಿಷ್ಠ ಭಕ್ತಿಯನ್ನು ತೋರುತ್ತಾರೆ. ಇದು ಶಂಕರಾಚಾರ್ಯ ಮತ್ತು ಬೌದ್ಧ ಮತೀಯರ ವಾದ, ವಾಗ್ವಾದಗಳು ಮತ್ತು ಜೈನ-ವೈದಿಕ ಕಾವ್ಯಗಳ ಸ್ವರೂಪದ ಮುಂದುವರಿಕೆಯಾಗಿ ಕಾಣಿಸುತ್ತದೆ.

* ವೀರಶೈವ ಕಾವ್ಯಗಳಲ್ಲಿ ಮತ್ತು ಪುರಾಣಗಳಲ್ಲಿ ಪ್ರಧಾನವಾಗಿ ಕಾಣುವುದು ಪವಾಡಗಳ ಚಿತ್ರಣಗಳನ್ನು. ಈ ಪವಾಡಗಳ ಮುಖ್ಯ ಉದ್ದೇಶ ಈ ಪುರಾಣ ನಾಯಕರನ್ನು ದೇವರ ಸ್ವರೂಪವೆಂದು ಬಿಂಬಿಸುವುದಾಗಿದೆ. ಸಾಮಾನ್ಯ ವ್ಯಕ್ತಿಯ ಅಸಾಮಾನ್ಯ ಮತ್ತು ಅದ್ಭುತ ಶಕ್ತಿಯ ನಿರೂಪಣೆಯನ್ನು ಮಾಡುವ ಸಲುವಾಗಿ ಕವಿಗಳು ಈ ಪವಾಡ ಕಥೆಗಳನ್ನು ಸೃಷ್ಟಿಸಿದ್ದಾರೆ. ಬಸವಣ್ಣನೇ ತಮ್ಮದೊಂದು ವಚನದಲ್ಲಿ ಪವಾಡ ವಿಷಯವಾಗಿ ಹೇಳಿದ್ದರಿಂದ ಈ ಅದ್ಭುತಗಳು ನಡೆದಿರಬಹುದೆಂದು ತಿಳಿಯಬಹುದು. 'ಬಸವಪುರಾಣ'ಗಳಲ್ಲಿ ಮುಖ್ಯವಾಗಿ ಸೋಮನಾಥ ಬಸವಣ್ಣನ ಎಂಟು ಪವಾಡಗಳನ್ನು ಚಿತ್ರಿಸುತ್ತಾನೆ. ಭೀಮಕವಿ ಸೋಮನಾಥನಿಗೆ ತಿಳಿಯದೇ ಇರುವ ಮತ್ತು ತನ್ನ ಕಾಲಕ್ಕೆ ಪ್ರಚಲಿತವಾಗಿದ್ದಂತಹ ಇನ್ನೂ ಮೂರು ಹೆಚ್ಚುವರಿ ಪವಾಡಗಳನ್ನು ಸೇರಿಸಿ ಹನ್ನೊಂದು ಪವಾಡಗಳನ್ನು ಚಿತ್ರಿಸಿದ್ದಾನೆ. ಒಟ್ಟಾರೆಯಾಗಿ ಈ ಪವಾಡಗಳ ಮೂಲೋದ್ದೇಶ ವೀರಶೈವ ಧರ್ಮದ ಮಹೋನ್ನತಿಯನ್ನು ತಿಳಿಸುವುದು ಮತ್ತು ಶರಣರು ಎಂತಹ ಮಹಿಮಾ ಪುರುಷರೆಂದು ಬಿಂಬಿಸುವ ಸಲುವಾಗಿ ಈ ಪವಾಡಗಳು ಕಾವ್ಯದಿಂದ ಕಾವ್ಯಕ್ಕೆ ಹೆಚ್ಚುತ್ತಾ ಹೋಗಿರುವುದನ್ನು ವೀರಶೈವ ಕಾವ್ಯಗಳ ಅಧ್ಯಯನದಿಂದ ತಿಳಿಯಬಹುದಾಗಿದೆ.

* 'ಬಸವಪುರಾಣ'ಗಳನ್ನು ರಚಿಸಿದ ಕವಿಗಳು ಎರಡು ಭಿನ್ನ ಪರಿಸರದಲ್ಲಿದ್ದವರು. ಹಾಗಾಗಿ ಸಹಜವಾಗಿಯೇ ಅವರ ಪುರಾಣಗಳಲ್ಲಿ ಆ ಕಾಲದ ಸಾಂಸ್ಕೃತಿಕ ಸಂಗತಿಗಳು ವಿಶೇಷವಾಗಿ ಅನಾವರಣಗೊಂಡಿರುವುದನ್ನು ಕಾಣಬಹುದು. ಈ ಪುರಾಣಗಳು ರಚನೆಗೊಂಡ ಕಾಲವು ರಾಜಕೀಯವಾಗಿ ಒಂದೇ ಪ್ರದೇಶವಾಗಿದ್ದರೂ ಭಾಷಿಕವಾಗಿ ಬೇರೆ ಬೇರೆಯಾಗಿದ್ದವು. ಅಂದಿನ ಕಾಲದ ಸಾಮಾಜಿಕ, ರಾಜಕೀಯ, ಧಾರ್ಮಿಕ ಮತ್ತು ಆರ್ಥಿಕ ಸಂಗತಿಗಳು ಕೂಡ ಸಾಮ್ಯತೆಯಿಂದ ಕೂಡಿದ್ದವು ಎಂಬ ಅಂಶಗಳೂ ಈ 'ಬಸವಪುರಾಣ'ಗಳಿಂದ ತಿಳಿಯುತ್ತದೆ. ಜಾತಿ ಮತ್ತು ವರ್ಣವ್ಯವಸ್ಥೆಯು ಅಂದಿನ ಕಾಲದಲ್ಲಿ ಸಾಕಷ್ಟು ಕ್ರೂರವಾಗಿತ್ತು. ದಲಿತ ಅಥವಾ ತಳಸಮುದಾಯಗಳನ್ನು ಉನ್ನತ ವರ್ಗದವರು ಆಳುತ್ತಿದ್ದರೆಂಬುದಕ್ಕೆ ಇಲ್ಲಿ ಹಲವಾರು ನಿದರ್ಶನಗಳು ಕಾಣಸಿಗುತ್ತವೆ. ಸಂಪ್ರದಾಯ, ಆಚರಣೆಗಳು ಮುಂತಾದ ಅಂಶಗಳು ಒಂದೇ ರೀತಿಯಾಗಿದ್ದು, ರಾಜಕೀಯವಾಗಿ ಚಾಲುಕ್ಯ ಮನೆತನದ ರಾಜರು ಎರಡೂ ಭೂಪ್ರದೇಶದಲ್ಲಿ ಆಳುತ್ತಿರುವುದು ಕಂಡುಬರುತ್ತದೆ. ಆರ್ಥಿಕವಾಗಿ ಪ್ರಗತಿಯನ್ನು

ಸಾಧಿಸುತ್ತಿದ್ದ ಈ ಪರಿಸರವು ಅನೇಕ ಆಂತರಿಕ ಮತ್ತು ಬಾಹ್ಯ ವ್ಯಾಪಾರ ಸಂಬಂಧಗಳನ್ನು ಇಟ್ಟುಕೊಂಡಿತ್ತು. ಈ ಪುರಾಣಗಳಲ್ಲಿ ಹೆಸರಿಸಿದ ಅನೇಕ ದೇಶ ವಿದೇಶಗಳ ಹೆಸರು ಇಲ್ಲಿನ ಆರ್ಥಿಕ ಸಂಬಂಧಗಳನ್ನು ಮತ್ತು ರಾಜಕೀಯ ಸಂಬಂಧಗಳನ್ನು ಸೂಚಿಸುವುವಾಗಿವೆ. ಒಟ್ಟಾರೆಯಾಗಿ ಈ ಪುರಾಣಗಳ ರಚನಾ ಕಾಲದ ಸಾಂಸ್ಕೃತಿಕ ಸಂಗತಿಗಳು ಸಾಮಾನ್ಯವಾಗಿ ಒಂದೇ ರೀತಿಯಾಗಿದ್ದವೆಂಬುದು ಗಮನಾರ್ಹ ಸಂಗತಿ.

* ಜೈನ ಪುರಾಣ ಪರಂಪರೆಯ ಹಿನ್ನೆಲೆಯಲ್ಲಿ ರಚನೆಗೊಂಡ ಈ 'ಬಸವಪುರಾಣ'ಗಳು ಭಾಷೆ ಮತ್ತು ಛಂದಸ್ಸಿನ ವಿಷಯದಲ್ಲಿ ಭಿನ್ನತೆಯನ್ನು ಹೊಂದಿವೆ. ಮಾರ್ಗ ಸಂಪ್ರದಾಯದ ವೈಧಿಕ ಮತ್ತು ಜೈನ ಪುರಾಣಗಳ ಭಾಷೆ ಮತ್ತು ಛಂದಸ್ಸು ಸಾಮಾನ್ಯ ಜನರಿಗೆ ಎಟಕುತ್ತಿರಲಿಲ್ಲ. ಆದ್ದರಿಂದ ಸೋಮನಾಥ ಮತ್ತು ಭೀಮಕವಿಯರು ದೇಸಿ ಮಾರ್ಗವನ್ನು ಅನುಸರಿಸಿದರು. ತಾವು ರಚಿಸುತ್ತಿರುವುದು ಸಾಮಾನ್ಯ ಶರಣರ, ಅಸಾಮಾನ್ಯ ಬದುಕಿನ ಚರಿತ್ರೆಯನ್ನು. ಹಾಗಾಗಿ ಈ ಚರಿತ್ರೆಯು ಸಾಮಾನ್ಯ ಪ್ರಜೆಗಳಿಗೂ ತಲುಪಬೇಕು ಮತ್ತು ಇವರ ಬದುಕಿನ ಮಾರ್ಗಗಳು ತಿಳಿಯಬೇಕೆಂಬ ಸದುದ್ದೇಶದಿಂದ ಸೋಮನಾಥ ದ್ವಿಪದ (ಜಾನು ತೆಲುಗು) ಛಂದದಲ್ಲಿ ಬರೆಯುತ್ತಾನೆ. ಭೀಮಕವಿಯೂ ಕೂಡ ದೇಸಿ ಭಾಷೆಯ ಷಟ್ಪದಿಯಲ್ಲಿ, ಅದರಲ್ಲೂ ಸಂಪೂರ್ಣವಾಗಿ ಭಾಮಿನಿ ಷಟ್ಪದಿಯಲ್ಲಿ ಪುರಾಣ ರಚಿಸುತ್ತಾನೆ. ಈ ನಿಟ್ಟಿನಲ್ಲಿ ದೇಸಿ ಚಿಂತನೆಯ ಇಬ್ಬರೂ ಕವಿಗಳು ತಮ್ಮ ಪುರಾಣಗಳಲ್ಲಿ ಶರಣರ ಚರಿತ್ರೆಯನ್ನು ಸಾಮಾನ್ಯರಿಗೂ ತಿಳಿಸುವಲ್ಲಿ ಯಶಸ್ವಿಯಾಗಿದ್ದಾರೆ ಎಂಬುದನ್ನು ಬೇರೆ ಬೇರೆ ನಿದರ್ಶನಗಳ ಮೂಲಕ ವಿವರಿಸಲಾಗಿದೆ.

* ವರ್ಣನೆಗಳು ಮತ್ತು ರಸ ನಿರೂಪಣೆಯಲ್ಲಿ ಭೀಮಕವಿ ಸೋಮನಾಥನಿಗಿಂತ ವಿಶೇಷತೆಯನ್ನು ಹೊಂದಿದ್ದಾನೆ. ತನ್ನ ಪುರಾಣವನ್ನು ಹೆಚ್ಚು ವರ್ಣನೆಗಳಲ್ಲಿ ಚಿತ್ರಿಸಿದ್ದಾನೆ. ವರ್ಣನೆಗಳಿಗೆ ಎಲ್ಲೆಲ್ಲಿ ಅವಕಾಶವಿದೆಯೋ ಅಲ್ಲೆಲ್ಲಾ ಭೀಮಕವಿ ಹೆಚ್ಚು ವಿಸ್ತರಿಸಿದ್ದಾನೆ. ಪ್ರಕೃತಿ ವರ್ಣನೆಗಳು, ಶಿವಶರಣರ ಭಕ್ತಿಯನ್ನು ಅರ್ಪಿಸುವಂತಹ ವಿವರಗಳನ್ನು ಮತ್ತು ಗಂಗಾಂಬಿಕೆಯ ಚೆಲುವಿನ ವರ್ಣನೆ, ಪುರವರ್ಣನೆಗಳು, ಕೈಲಾಸದಂತಹ ಪ್ರಮುಖ ಸ್ಥಳಗಳ ವರ್ಣನೆಗಳನ್ನು ಭೀಮಕವಿ ತುಂಬಾ ವಿಸ್ತಾರವಾಗಿ ವರ್ಣಿಸುತ್ತಾನೆ. ಭಕ್ತಿರಸ ಪ್ರಧಾನವಾದ ಈ ಪುರಾಣಗಳು ರಸ ನಿರೂಪಣೆಯಲ್ಲಿಯೂ ಸಾಕಷ್ಟು ವಿಶಿಷ್ಟತೆಯನ್ನು ಹೊಂದಿವೆ. ಶೃಂಗಾರ, ಕರುಣ, ರೌದ್ರ, ಭೀಭತ್ಸ, ವೀರ ಮುಂತಾದ ರಸಗಳ ನಿರೂಪಣೆ ಪುರಾಣಗಳಲ್ಲಿ ತುಂಬಿಕೊಂಡು ಚಿತ್ರಣಗೊಂಡಿವೆ. ಕಥನ ಕ್ರಮದ ಮಾದರಿಯಿಂದಲೂ ವೀರಶೈವ ಸಾಹಿತ್ಯದಲ್ಲಿ ಹೊಸತನವನ್ನು ನೀಡಿದ ಪುರಾಣಗಳಾಗಿವೆ. ಹರಿಹರನ ಏಕವ್ಯಕ್ತಿ ಕೇಂದ್ರಿತವಾದ ನಿರೂಪಣೆಗಿಂತ ಎಲ್ಲಾ ಶರಣರನ್ನು ಒಟ್ಟುಗೂಡಿಸಿ ಪುರಾಣ ರಚಿಸಿರುವುದು ಬಸವಣ್ಣನಾದಿಯಾಗಿ ಆ ಕಾಲದ ಪ್ರಮುಖ ಶರಣರ ಜೀವನ ಚರಿತ್ರೆಯನ್ನು ಒಂದೇ ಪುರಾಣದಲ್ಲಿ ತಿಳಿಸುವಲ್ಲಿ ಈ ಪುರಾಣಗಳು ಯಶಸ್ವಿಯಾಗಿರುವುದನ್ನು ಗುರುತಿಸಲಾಗಿದೆ.

* ಭೀಮಕವಿಯ 'ಬಸವಪುರಾಣ'ವು ತೆಲುಗಿನ ಸೋಮನಾಥನ 'ಬಸವಪುರಾಣಮು'ದ ಅನುವಾದವಾಗಿದೆ. ಇದನ್ನು ಕವಿಯೇ ಕಥಾರಂಭದಲ್ಲಿ ಸೂಚಿಸಿದ್ದಾನೆ. ಈ ಅನುವಾದಗೊಂಡ ಕೃತಿಯು ಸಾಕಷ್ಟು ವೈವಿಧ್ಯತೆಯಿಂದ ಕೂಡಿರುವುದನ್ನು ಗಮನಿಸಬಹುದು. ಕಥೆ ಮತ್ತು ಕಥನ ಮಾದರಿಯಲ್ಲಿ ಹೆಚ್ಚು ವ್ಯತ್ಯಾಸಗಳಿಲ್ಲ. ಆದರೆ ಭೀಮಕವಿ ತಾನು ನಿರೂಪಿಸುವ ಕಥೆಯ ಕೆಲವು ಭಾಗಗಳಲ್ಲಿ ಹೊಸ ಕಥೆಗಳನ್ನು ಸೇರಿಸಿದ್ದಾನೆ. ಸೋಮನಾಥನಿಗೆ ತಿಳಿಯದೇ ಇರುವ ಹಲವಾರು ಶಿವಶರಣರ ಕಥೆಗಳನ್ನು ಇಲ್ಲಿ ಅಡಕಗೊಳಿಸಿದ್ದಾನೆ. ಈ ಹೆಚ್ಚುವರಿ ಕಥೆಗಳಿಗೆ ಮೂಲ ಕಾರಣವಾಗಿರುವುದು ಭೀಮಕವಿ ಕನ್ನಡ ಪ್ರದೇಶದವನಾಗಿದ್ದುದು. ಹಾಗಾಗಿ ಆತ ತನ್ನ ಕಾಲದಲ್ಲಿ ಪ್ರಚುರದಲ್ಲಿದ್ದ ಕಥೆಗಳನ್ನು ಸೇರಿಸಿದ್ದಾನೆ. ಹರಿಹರನಲ್ಲಿರುವ ಹಲವು ಘಟನೆಗಳನ್ನು ಭೀಮಕವಿ ಹೇಳಿರುವುದರಿಂದ ಭೀಮಕವಿಗೆ ರಗಳೆಗಳ ಪರಿಚಯವಿರಬೇಕು. ಹಾಗೂ ಸೋಮನಾಥನು 'ಬಸವಪುರಾಣ'ದ ನಂತರ ರಚಿಸಿದ ಆರಾಧ್ಯ ಚರಿತ್ರೆಯಲ್ಲಿ ಬರುವ ಕೆಲವು ಶರಣರ ಕಥೆಗಳು ಭೀಮಕವಿ ಹೆಚ್ಚುವರಿಯಾಗಿ ಸೇರಿಸಿದ ಕಥೆಗಳಲ್ಲಿ ಬಂದಿರುವುದರಿಂದ ಆ ಕೃತಿಯಿಂದಲೂ ಎರವಲು ಪಡೆದಿರಬಹುದು. ಹೀಗೆ ವಸ್ತುವಿಷಯಗಳಲ್ಲಿನ ಕೆಲವು ಸೂಕ್ಷ್ಮ ವಿವರಗಳು ಪ್ರಧಾನವಾಗಿ ಭಾಷಾಂತರಗೊಂಡು ಕನ್ನಡ 'ಬಸವಪುರಾಣ'ದಲ್ಲಿ ಬಂದಿವೆ. ವರ್ಣನೆಯ ವಿವರಗಳು ಭೀಮಕವಿಯಲ್ಲಿ ಸಾಕಷ್ಟು ಸನ್ನಿವೇಶಗಳಿರುವುದರಿಂದ ಸಹಜವಾಗಿಯೇ ಕನ್ನಡ 'ಬಸವಪುರಾಣ' ತೆಲುಗಿಗಿಂತ ಮೂರುಪಟ್ಟು ಹೆಚ್ಚಾಗಿರುವುದು ಕಂಡುಬರುತ್ತದೆ. ಹೀಗೆ ಮೂಲದಿಂದ ಕನ್ನಡಕ್ಕೆ ಭಾಷಾಂತರಗೊಳ್ಳುವಲ್ಲಿ ಭಾಷಾಂತರದ ವಿವಿಧ ಮಾದರಿಗಳಲ್ಲಿ ಅದು ಕನ್ನಡೀಕರಣಗೊಂಡಿದೆ. ಸಂಕ್ಷಿಪ್ತ, ವಿಸ್ತಾರ, ಭಾವಾನುವಾದ, ವ್ಯತ್ಯಾಸ ಅನುವಾದ, ನೇರಾನುವಾದಗಳ ಮೂಲಕ ಕನ್ನಡ ಭಾಷೆಯ ಜಾಯಮಾನಕ್ಕೆ ತಕ್ಕಂತೆ ಅನುವಾದಗೊಂಡಿದೆ. ಭೀಮಕವಿ ಮೂಲದ ಬಂಧ ಮತ್ತು ತಿರುಳನ್ನು ಎಲ್ಲಿಯೂ ಬಿಟ್ಟಿರುವುದಿಲ್ಲ. ಐದನೇ ಕಾಂಡದವರೆಗೂ ಎರಡೂ ಪುರಾಣಗಳು ಒಂದೇ ರೀತಿಯ ಚಿತ್ರಣದ ಕಥೆಯನ್ನು ಹೇಳುತ್ತವೆ. ಅನಂತರದಲ್ಲಿ ಭೀಮಕವಿ ಐದನೇ ಆಶ್ವಾಸದ ಕೊನೆಯಲ್ಲಿ ಕೆಲವು ಹೊಸ ಕಥೆಗಳನ್ನು ಸೇರಿಸಿ ಆರನೇ ಕಾಂಡವನ್ನು ಸಂಪೂರ್ಣವಾಗಿ ಹೊಸದಾಗಿ ಚಿತ್ರಿಸುತ್ತಾನೆ. ಈ ಕಾಂಡವು ಭೀಮಕವಿಯ ಸ್ವಂತ ಸೃಷ್ಟಿ ಮತ್ತು ವಿಸ್ತಾರ ಅನುವಾದಕ್ಕೆ ಈ ಭಾಗವು ಉತ್ತಮ ಉದಾಹರಣೆಯಾಗಿರುವುದನ್ನು ವಿವರಿಸಲಾಗಿದೆ.

* ಈ ಎರಡೂ 'ಬಸವಪುರಾಣ'ಗಳು ವೀರಶೈವ ಮತಧರ್ಮದ ಪಡಿಯಚ್ಚುಗಳಾಗಿದ್ದರೂ ಎರಡೂ ಭಾಷೆಗಳಲ್ಲಿ ಸಾಕಷ್ಟು ಪ್ರಸಿದ್ಧಿಯನ್ನು ಪಡೆದಿವೆ. ಈ ಪುರಾಣಗಳ ರಚನೆಯ ನಂತರದ ವೀರಶೈವ ಸಾಹಿತ್ಯದ ಅಧ್ಯಯನಕ್ಕೆ ಇವು ಮುಖ್ಯ ಆಕರಗಳಾಗಿ ತೆಲುಗು–ಕನ್ನಡದಲ್ಲಿ ವೀರಶೈವ ಸಾಹಿತ್ಯ ವಿಸ್ತಾರಕ್ಕೆ ಕಾರಣೀಭೂತವಾಗಿವೆ. ಬಹುತೇಕ ಈ ಎರಡೂ ಭಾಷೆಯ ವೀರಶೈವ ಸಾಹಿತ್ಯವು ಅಥವಾ ಶಿವಶರಣರ ಬದುಕನ್ನು ಚಿತ್ರಿಸುವ ಕಾವ್ಯ ಮತ್ತು ಪುರಾಣಗಳು 'ಬಸವಪುರಾಣ'ಗಳ ಮಾದರಿಯಲ್ಲಿಯೇ ರಚನೆಗೊಂಡಿರುವುದು ಈ ಪುರಾಣಗಳ ಪ್ರಾಮುಖ್ಯ ಮತ್ತು ವೈಶಿಷ್ಟ್ಯನ್ನು ತೋರಿಸುತ್ತವೆ ಎಂಬುದನ್ನು ಬೇರೆ ಬೇರೆ ಆಧಾರಗಳಿಂದ ನಿರೂಪಿಸಲಾಗಿದೆ.

## ಆಕರ ಗ್ರಂಥಗಳು

### ಕನ್ನಡ ಗ್ರಂಥಗಳು


೧. ಆರ್ವಿಯಸ್ ಸುಂದರಂ, 'ತೆಲುಗು ಭಾಷೆ ಮತ್ತು ಸಾಹಿತ್ಯ', ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೨

೨. ಉಮಾಪತಿ ಎಸ್. (ಸಂ), 'ಬಸವೇಶ್ವರ ಪುರಾಣದ ಕಥಸಾರ' ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೭೬

೩. ಕಲಬುರ್ಗಿ ಎಂ.ಎಂ.(ಸಂ), 'ಹರಿಹರನ ರಗಳೆಗಳು' ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ವಿದ್ಯಾರಣ್ಯ, ೧೯೯೯

೪. ಕಲಬುರ್ಗಿ ಎಂ.ಎಂ., 'ಮಾರ್ಗ' (ಸಂಪುಟ–೧), ಸಪ್ನ ಬುಕ್ ಹೌಸ್, ಬೆಂಗಳೂರು, ೨೦೧೦

೫. ಕಲಬುರ್ಗಿ ಎಂ.ಎಂ., 'ಮಾರ್ಗ' (ಸಂಪುಟ–೪), ಸಪ್ನ ಬುಕ್ ಹೌಸ್, ಬೆಂಗಳೂರು,೨೦೧೦

೬. ಕಲಬುರ್ಗಿ ಎಂ.ಎಂ., 'ಶಾಸನಗಳಲ್ಲಿ ಶಿವಶರಣರು', ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೪

೭. ಗುಂಜಾಳ ಎಸ್. ಆರ್., 'ವಿದ್ವಾಂಸರ ದೃಷ್ಟಿಯಲ್ಲಿ ಬಸವಣ್ಣ', ಬಸವತತ್ವ ಪ್ರಸಾರ ಸಂಸ್ಥೆ, ಧಾರವಾಡ, ೨೦೦೮

೮. ಗುರುಪಾದ ಮರಿಗುದ್ದಿ, 'ವೀರಶೈವಾಮೃತ ಪುರಾಣ ವಿವೇಚನೆ', ನಿಜಲಿಂಗೇಶ್ವರ ಗ್ರಂಥಮಾಲೆ ನಿಡಸೋಸಿ, ಬೆಳಗಾವಿ – ೨೦೦೧

೯. ಚಂದ್ರಶೇಖರ ಎಂ. (ಸಂ), 'ವಿರೂಪಾಕ್ಷ ಪಂಡಿತನ ಚನ್ನಬಸವಪುರಾಣ', ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು – ೧೯೭೯

೧೦. ಚಿದಾನಂದಮೂರ್ತಿ ಎಂ, 'ಲಿಂಗಾಯತ ಅಧ್ಯಯನಗಳು', ವಾಗ್ದೇವಿ ಪುಸ್ತಕಗಳು, ಮೈಸೂರು, ೧೯೮೬

೧೧. ಚಿದಾನಂದಮೂರ್ತಿ ಎಂ, 'ಸಂಶೋಧನೆ', ಡಿ.ವಿ.ಕೆ. ಮೂರ್ತಿ ಪ್ರಕಾಶಕರು, ಮೈಸೂರು, ೨೦೦೨

೧೨. ಚಿದಾನಂದಮೂರ್ತಿ ಎಂ., 'ಬಸವಣ್ಣನವರು', ನ್ಯಾಷನಲ್ ಬುಕ್ ಟ್ರಸ್ಟ್ ಆಪ್ ಇಂಡಿಯಾ, ಹೊಸದೆಹಲಿ, ೨೦೦೯

೧೩. ಚಿದಾನಂದಮೂರ್ತಿ ಎಂ., 'ಸ್ಥಾವರ – ಜಂಗಮ', ಸಪ್ನ ಬುಕ್ ಹೌಸ್, ಬೆಂಗಳೂರು, ೨೦೧೪

೧೪. ದೇವೀರಪ್ಪ ಎಚ್. (ಸಂ), 'ಶಿವತತ್ವ ಚಿಂತಾಮಣಿ', ಪ್ರಾಚ್ಯವಿದ್ಯಾ ಸಂಶೋಧನಾಲಯ ಮೈಸೂರು, ೧೯೬೦

೧೫. ದೇವೀರಪ್ಪ ಎಚ್., 'ಹಂಪಿಯ ಹರಿಹರದೇವರ ಶರಣಚರಿತ ಮಾನಸಂ', ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೬೫

೧೬. ನಾರಾಯಣ ಪಿ. ವಿ., 'ಬಸವಪುರಾಣ' (ಕನ್ನಡನುವಾದ), ವಸಂತ ಎಂಟರ್ ಪ್ರೈಸಸ್, ಬೆಂಗಳೂರು, ೨೦೦೯

೧೭. ಬಸವರಾಜು ಎಲ್., 'ನೂರಾರು ಶರಣರ ಸಾವಿರ ವಚನಗಳು', ಕೆ.ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ್, ಬೆಂಗಳೂರು, ೨೦೦೮
೧೮. ಬಸವರಾಧ್ಯ ಎನ್. (ಸಂ), 'ಆರಾಧ್ಯ ಚರಿತ್ರೆ', ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೦
೧೯. ಬಸವರಾಧ್ಯ ಎನ್. (ಸಂ), 'ಪಾಲ್ಕುರಿಕೆ ಸೋಮನಾಥ ಒಂದು ಅದ್ಯಯನ', ಬಸವ ಸಮಿತಿ ಬೆಂಗಳೂರು ೨೦೦೦
೨೦. ಮಾಳವಾಡ ಸ.ಸ.(ಸಂ), 'ಸಿದ್ದನಂಜೇಶನ ರಾಘವಾಂಕ ಚಾರಿತ್ರ್ಯ', ಮುರುಘಾ ಮಠ, ಧಾರವಾಡ, ೧೯೫೪
೨೧. ರಾಜೇಗೌಡ ಹ. ಕ., 'ಗರಣಿಯ ಬಸವಲಿಂಗ ವಿರಚಿತ ಬಸವೇಶ್ವರ ಕಾವ್ಯ', ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೮೨
೨೨. ವಿಜಯಕುಮಾರ ಮಹಾನುಭಾವಿಗಳು, 'ಬಸವಣ್ಣನವರು' (ಚರಿತ್ರೆ ಮತ್ತು ಸಂಸ್ಕೃತಿಯ ಶೋಧಗಳು), ಪ್ರಭುದೇವ ಪ್ರಕಾಶನ, ೨೦೦೯
೨೩. ವಿದ್ಯಾಶಂಕರ ಎಸ್.(ಸಂ), 'ಭೀಮಕವಿಯ ಬಸವಪುರಾಣ', ಪ್ರಿಯದರ್ಶಿನಿ ಪ್ರಕಾಶನ ಬೆಂಗಳೂರು, ೨೦೦೮
೨೪. ವಿದ್ಯಾಶಂಕರ ಎಸ್.(ಸಂ), 'ವೀರಶೈವ ಪುರಾಣಗಳು ಒಂದು ಅಧ್ಯಯನ', ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೨೦೦೮
೨೫. ವಿದ್ಯಾಶಂಕರ ಎಸ್. (ಸಂ), 'ಚಾಮರಸನ ಪ್ರಭುಲಿಂಗ ಲೀಲೆ' (ಗದ್ಯಾನುವಾದ), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೪
೨೬. ವಿದ್ಯಾಶಂಕರ ಎಸ್. (ಸಂ), ರಾಚಪ್ಪ ಆರ್., 'ವಿರಕ್ತ ತೋಂಟದಾರ್ಯನ ಪಾಲ್ಕುರಿಕೆ ಸೋಮೇಶ್ವರ ಪುರಾಣ', ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು – ೨೦೧೨
೨೭. ವೆಂಕಟೇಶ ಸಿ., 'ತೆಲುಗು ದಕ್ಷಿಣಾತ್ಯ ಸಾಹಿತ್ಯ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ೧೯೯೯
೨೮. ವೆಂಕಣ್ಣಯ್ಯ ಟಿ.ಎಸ್.(ಸಂ), 'ಬಸವರಾಜದೇವರ ರಗಳೆ' ವೆಂಕಣ್ಣಯ್ಯ ಸ್ಮಾರಕ ರತ್ನಮಾಲೆ ಮೈಸೂರು, ೧೯೯೭
೨೯. ಶಾಮರಾಯ ತ.ಸು., 'ಶಿವಶರಣ ಕಥಾರತ್ನಕೋಶ', ವೆಂಕಣ್ಣಯ್ಯ ಸ್ಮಾರಕ ರತ್ನಮಾಲೆ ಮೈಸೂರು, ೧೯೯೭
೩೦. ಸದಾನಂದ ಕನವಳ್ಳಿ (ಸಂ), ಕೆರಿಮನಿ ಸಿ.ವಿ., 'ವೀರಶೈವ ಸಾಹಿತ್ಯ ಸಮೀಕ್ಷೆ', ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು, ೨೦೧೦
೩೧. ಹಿರೇಮಠ ಆರ್.ಸಿ.(ಸಂ), 'ತ್ರಿಷಷ್ಟಿಪುರಾತನ ಚಾರಿತ್ರಂ', ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ,೧೯೬೬
೩೨. ಹಿರೇಮಠ ಆರ್.ಸಿ.(ಸಂ), 'ಬಸವಪುರಾಣ', ಮುರುಘಾ ಮಠ, ಧಾರವಾಡ, ೧೯೭೧
೩೩. ಹಿರೇಮಠ ಆರ್.ಸಿ., 'ಷಡಕ್ಷರಿಯ ಬಸವರಾಜ ವಿಜಯಂ' ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೮

೩೪. ಹಿರೇಮಲ್ಲೂರು ಈಶ್ವರನ್, 'ಬಸವಣ್ಣ ಮತ್ತು ಲಿಂಗಾಯತ ಧರ್ಮ' (ಭಾಗ–೨), ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೨೦೦೮

**ತೆಲುಗು ಗ್ರಂಥಗಳು**

೩೫. ಕೆಲ್ಲಾ ಪರಮೇಶ್ವರಪ್ಪ, 'ವೀರಶೈವ ಸಾಹಿತ್ಯಮು ಸಮತಾದೃಕ್ಪಥಮು', ತಿರುಪತಿ ತಿರುಮಲ ದೇವಸ್ಥಾನಮು, ಮರಿಯು ತೆಲುಗು ವಿಶ್ವವಿದ್ಯಾಲಯಮು, ಹೈದರಾಬಾದ್, ೧೯೯೧

೩೬. ಕೋಮದ್ರಾಜು ವೆಂಕಟ ಲಕ್ಷ್ಮಣರಾವು (ಸಂ), 'ಶಿವತತ್ವಸಾರಮು', ಆಂಧ್ರ ಸಾಹಿತ್ಯ ಪರಿಷತ್ತು, ಕಾಕಿನಾಡು ೧೯೨೩

೩೭. ಚಿಲಕೂರಿ ನಾರಾಯಣರಾವುಗಾರು, 'ಪಂಡಿತರಾಧ್ಯಾ ಚರಿತ್ರಮು', ಆಂಧ್ರ ಗ್ರಂಥಮಾಲ, ಮದ್ರಾಸ್, ೧೯೩೯

೩೮. ತಿಮ್ಮವಜ್ಜಲ ಕೋದಂಡರಾಮಯ್ಯ, 'ಪಾಲ್ಕುರಿಕೆ ಸೋಮನಾಥುಂಡು ವೀರಶೈವ ಸಿದ್ಧಾಂತಮು', ತಿರುಪತಿ ತಿರುಮಲ ದೇವಸ್ಥಾನಮು, ತಿರುಪತಿ, ೨೦೦೧

೩೯. ತಿಮ್ಮವಜ್ಜಲ ಕೋದಂಡರಾಮಯ್ಯ, 'ಪಂಡಿತಾರಾಧ್ಯ ಚರಿತ್ರ', ಆಂಧ್ರಪತ್ರಿಕಾ ಮುದ್ರಾಕ್ಷರ ಶಾಲ ಚೆನ್ನಪುರಿ, ೧೯೭೪

೪೦. ತಿಮ್ಮವಜ್ಜಲ ಕೋದಂಡರಾಮಯ್ಯ, 'ಆಂಧ್ರ ಸಾಹಿತ್ಯ ಕಾವ್ಯಲೋಕಂಲೊ ಪಾಲ್ಕುರಿಕೆ ಸೋಮನ ಪಾತ್ರಂ' (ಎಂ.ಫಿಲ್. ಪ್ರಬಂಧ), ವೆಂಕಟೇಶ್ವರ ವಿಶ್ವವಿದ್ಯಾಲಯ, ತಿರುಪತಿ, ೧೯೬೮

೪೧. ನರಸಿಂಹರೆಡ್ಡಿ ವಿ., 'ಪಾಲ್ಕುರಿಕೆ ಸೋಮನಾಥುನಿ ಕೃತುಲು–ಒಕ ಪರಿಶೀಲನ', ಉಸ್ಮಾನಿಯ ವಿಶ್ವವಿದ್ಯಾಲಯ, ಹೈದರಾಬಾದ್, ೧೯೮೪

೪೨. ನಿಡದವೋಲು ವೆಂಕಟರಾವು, 'ತೆಲುಂಗು ಕವುಲ ಚರಿತ್ರ', ಮದರಾಸು ವಿಶ್ವವಿದ್ಯಾಲಯ, ಮದರಾಸು, ೧೯೫೩

೪೩. ನೂತಿಕಟ್ಟು ಕೋಟಯ್ಯ, 'ಬಸವೇಶ್ವರ ಚರಿತ್ರಮು' ಶೈವ ಸೇವಾ ಸಮಿತಿ, ಶ್ರೀರಾಮನಗರ, ಕಾಕಿನಾಡ, ೧೯೭೫

೪೪. ನೆಲಟೂರಿ ವೆಂಕಟರಾವು, 'ಪಾಲ್ಕುರಿಕೆ ಸೋಮನಾಥುಡು ಎಪ್ಪಟಿವಾಡು' ವಾವಿಳ್ಳ ರಾಮಸ್ವಾಮಿ ಶಾಸ್ತ್ರುಲು ಅಂಡ್ ಸನ್ಸು, ಮದರಾಸು, ೧೯೫೫

೪೫. ಪಾಪಕವಿ ಅತ್ತನೂರಿ, 'ಚೆನ್ನಬಸವಪುರಾಣಮು', ವಿ. ರಮಸ್ವಾಮಿ ಶಾಸ್ತ್ರಿ ಅಂಡ್ ಸನ್ಸು, ಆದಿ ಸರಸ್ವತಿ ನಿಲಯಂ, ಮದರಾಸು, ೧೯೧೬

೪೬. ಬಂಡಾರು ತಮ್ಮಯ್ಯ, 'ಬಸವಪುರಾಣಮು', ವಾವಿಳ್ಳ ರಾಮಸ್ವಾಮಿ ಶಾಸ್ತ್ರುಲು ಅಂಡ್ ಸನ್ಸು, ಮದರಾಸು, ೧೯೫೨

೪೭. ಬಂಡಾರು ತಮ್ಮಯ್ಯ (ಸಂ), 'ಅನುಭವ ಸಾರಮು' ವಾವಿಳ್ಳ ರಾಮಸ್ವಾಮಿ ಶಾಸ್ತ್ರುಲು ಅಂಡ್ ಸನ್ಸು, ಮದ್ರಾಸ್, ೧೯೫೬

೪೮. ಬಂಡಾರು ತಮ್ಮಯ್ಯ (ಸಂ), 'ಚತುರ್ವೇಧ ಸಾರಮು; ಪಾಲ್ಕುರಿಕೆ ಸೋಮನಾಥ ಕವಿ', ಚಲವಾದಿ ರಾಮಯ್ಯ ಪ್ರಚುರಣ, ಪಲ್ಲೇರು ಪಾಲೇಮು, ಕೃಷ್ಣಜಿಲ್ಲಾ, ೧೯೬೨

೪೯. ಬಂಡಾರು ತಮ್ಮಯ್ಯ, 'ಪಾಲ್ಕುರಿಕೆ ಸೋಮನಾಥ ಕವಿ', ಶಿವಧರ್ಮ ಗ್ರಂಥಮಾಲ, ಮೆಟೆಕ್ ನಾಗಯ್ಯ ಧರ್ಮನಿಲಯಮು, ಸಿಕಂದರಾಬಾದು, ೧೯೪೮

೫೦. ಬಸವಲಿಂಗಯ್ಯ ದೂಪಮ್, 'ಪಾಲ್ಕುರಿಕೆ ಸೋಮನಾಥುನಿ ಸಾರಸ್ವತ ವೈಭವಮು', ಓಂ ನಮಶಿವಾಯ ಸಾಹಿತಿ ಸಾಂಸ್ಕೃತಿಕ ಪರಿಷತ್, ಸಿಕಂದರಾಬಾದ್, ೨೦೧೧

೫೧. ಬಾಡಾಲ ರಾಮಯ್ಯ, 'ಬಸವ ವಚನಾಮೃತಮು'(ಅನುವಾದಮು), ಬಸವ ಸಮಿತಿ, ಬೆಂಗಳೂರು, ೧೯೬೫

೫೨. ಬುದ್ದನ್ನ ಯಂ., 'ತೆಲುಗು ವಾಜ್ಞಯಮು– ಶಿವಕವಿಯುಗ ವೈಶಿಷ್ಟ್ಯಮು', ಶ್ರೀಕೃಷ್ಣದೇವರಾಯ ವಿ.ವಿ. ಅನಂತಪುರಂ, ೧೯೮೪

೫೩. ಮಹಾಲಕ್ಷ್ಮಿ ಜೆ, 'ಪಾಲ್ಕುರಿಕೆ ಸೋಮನಾಥುನಿ ಪೈ ಬಸವೇಶ್ವರುನಿ ಪ್ರಭಾವಮು' (ಎಂ.ಫಿಲ್. ಪ್ರಬಂಧ), ಮೈಸೂರು ವಿಶ್ವವಿದ್ಯಾಲಯ, ಮೈಸುರು, ೧೯೮೨

೫೪. ಮಲ್ಲಿಕಾರ್ಜುನ ಎನ್, 'ಪಾಲ್ಕುರಿಕೆ ಸೋಮನಾಥುನಿ ಕೃತುಲ್ಲೋ ಜಾನಪದ ಚಿತ್ರಣಂ' (ಪಿಎಚ್.ಡಿ.), ವೆಂಕಟೇಶ್ವರ ವಿಶ್ವವಿದ್ಯಾಲಯ, ತಿರುಪತಿ, ೧೯೯೨

೫೫. ಯಶೋಧರರೆಡ್ಡಿ ಪಿ, 'ದ್ವಿಪದಿ ವಾಜ್ಮಯಮು' ಕಳಾ ಸ್ರವಂತಿ, ಸಾಹಿತ್ಯ ಸಾಂಸ್ಕೃತಿಕ ಸಂಸ್ಥ ನ್ಯೂ ನಲ್ಲಕುಂಟ, ಹೈದರಾಬಾದ್, ೧೯೭೨

೫೬. ಲಕ್ಷ್ಮೀಕಾಂತಂ ಪಿಂಗಳಿ, 'ಆಂಧ್ರ ಸಾಹಿತ್ಯ ಚರಿತ್ರ' ಆಂಧ್ರ ಸಾಹಿತ್ಯ ಅಕಾಡೆಮಿ ಕಳಾ ಭವನ, ಹೈದರಾಬಾದ್ ೧೯೭೪

೫೭. ವೆಂಕಟಸುಬ್ಬಯ್ಯ, 'ಪಾಲ್ಕುರಿಕೆ ಸೋಮನಾಥುನಿ ರಚನಂಲೋ ಭಾಷಾ ಪ್ರಯೋಗ ವೈಶಿಷ್ಟ್ಯತ' (ಪಿಎಚ್.ಡಿ) ವೆಂಕಟೇಶ್ವರ ವಿಶ್ವವಿದ್ಯಾಲಯ, ತಿರುಪತಿ, ೧೯೭೯

೫೮. ವೇಟೂರಿ ಪ್ರಭಾಕರಶಾಸ್ತ್ರಿ (ಸಂ), 'ಬಸವಪುರಾಣಮು' ಆಂಧ್ರಗ್ರಂಥಮಾಲ, ಮದ್ರಾಸ್, ೧೯೨೬

೫೯. ಶ್ಯಾಮಲ ಸಿ ಎಚ್., 'ಬಸವಪುರಾಣಂಲೋನಿ ಸ್ತ್ರೀಯಲು', (ಎಂ.ಫಿಲ್. ಪ್ರಬಂಧ), ಉಸ್ಮಾನಿಯಾ ವಿಶ್ವವಿದ್ಯಾಲಯ, ಹೈದರಾಬಾದು, ೧೯೮೩

೬೦. ಶಿಷ್ಟಾ ರಾಮಕೃಷ್ಣ ಶಾಸ್ತ್ರಿಗಾರು, 'ವೀರಶೈವಾಂಧ್ರ ವಾಜ್ಞಯಮು', ತಿರುಮಲ ತಿರುಪತಿ ದೇವಸ್ತಾನಮು ತಿರುಪತಿ, ೧೯೫೨

೬೧. ಶ್ರೀ ಶ್ರೀ ಶ್ರೀ ವೇಮುಲವಾಡ ಭೀಮಲಿಂಗೇಶ್ವರ, 'ಶ್ರೀ ವೇಮುಲವಾಡ ಭೀಮಕವಿ ದಿವ್ಯ ಸ್ವಾಮಿ ಜೀವಸಮಾದಿ ಮಠಂ ಚರಿತ', ಭೀಮಲಿಂಗೇಶ್ವರಸ್ವಾಮಿ ಜೀವಸಮಾದಿ ಮಠಂ, ಗಡೇಕಲ್ಲು ಗ್ರಾಮಂ ಅನಂತಪುರಂ ಜಿಲ್ಲಾ, ೨೦೧೩

೬೨. ಸುರವರಂ ಪುಷ್ಪಲತ, 'ಮಧುರಭಕ್ತಿ–ಮುಗ್ಧಭಕ್ತಿ' (ಆಂಧ್ರಮಾಹಾಭಾಗವತಮು–ಬಸವಪುರಾಣಮು), ಆಂಧ್ರ ಸಾಹಿತ್ಯ ಪರಿಷತ್ತು, ತಿಲಕ್ ರೋಡ್ ಹೈದರಾಬಾದ್, ೧೯೯೩

೬೩. ಸುಶೀಲ ಟಿ, 'ಆಂಧ್ರ ದ್ವಿಪದಿ ಸಾಹಿತ್ಯ ಚರಿತ್ರ' ಮಾಧವಿ ಬುಕ್ ಡಿಪೊ ಸುಲ್ತಾನ್ ಬಜಾರ್ ಹೈದರಾಬಾದು ೧೯೭೯

